# THREE LECTURES

by

Prof D. K. Bhimasenarao, M
Head of the Department of Kannada, Osmania University, Hyderabad (Dn

# ಶಬ್ದಮಣಿದರ್ಪಣದ ಪಾಠಾಂತರಗಳು

ಮತ್ತು

# ಅನುಭವಾಮೃತವೂ ಹರಿಕಥಾಮೃತಸಾರವೂ

ಉಪನ್ಯಾಸಕರು:
**ಪ್ರೊ. ಡಿ. ಕೆ. ಭೀಮಸೇನರಾಯರು,** ಎಂ. ಎ.,
ಪ್ರಾಧ್ಯಾಪಕರು, ಉಸ್ಮಾನಿಯಾ ಯುನಿವ್ಹರ್ಸಿಟಿ ಹೈದರಾಬಾದ (ದಕ್ಷಿಣ)

**Kannada Research Institute,**
**Dharwar**
**1951**

# THREE LECTURES

by

Prof. D. K. Bhimasenarao, M. A.,

Head of the Department of Kannada, Osmania University, Hyderabad ( Dn )

# ಶಬ್ದಮಣಿದರ್ಪಣದ ಪಾಠಾಂತರಗಳು

ಮತ್ತು

# ಅನುಭವಾಮೃತವೂ ಹರಿಕಥಾಮೃತಸಾರವೂ

ಉಪನ್ಯಾಸಕರು :

ಪ್ರೊ. ಡಿ ಕೆ. ಭೀಮಸೇನರಾಯರು, ಎಂ. ಎ,

ಪ್ರಾಧ್ಯಾಪಕರು, ಉಸ್ಮಾನಿಯಾ ಯೂನಿವರ್ಸಿಟಿ, ಹೈದರಾಬಾದ (ದಕ್ಷಿಣ)

**Kannada Research Institute,**

**Dharwar**

ಬೆಲೆ ರೂ. ೩]೮-

**1951**

# ಮುನ್ನುಡಿ

ಇಲ್ಲಿ ಪ್ರಸಿದ್ಧಿಸಲ್ಪಟ್ಟ ಉಪನ್ಯಾಸಗಳು ಕನ್ನಡ ಸಂಶೋಧನ ಸಂಸ್ಥೆಯಿಂದ ಪ್ರತಿವರ್ಷ ಏರ್ಪಡಿಸಲ್ಪಡುವ ಸಂಶೋಧನೋಪನ್ಯಾಸಗಳ ಮಾಲೆಯಲ್ಲಿ ಸೇರುತ್ತವೆ.

೧೯೫೩ ನೆಯ ಜನೇವರಿ ೨೮, ೨೯, ೩೦, ಈ ದಿನಗಳಲ್ಲಿ ಹೈದರಾಬಾದಿನ ಉಸ್ಮಾನಿಯಾ ಯುನಿವ್ಹರ್ಸಿಟಿಯ ಕನ್ನಡ ಪ್ರಾಧ್ಯಾಪಕರಾದ ಶ್ರೀಮಾನ್ ಪ್ರೊ. ಡಿ. ಕೆ. ಭೀಮಸೇನರಾಯರು 'ಶಬ್ದಮಣಿದರ್ಪಣದ ಪಾಠಾಂತರಗಳು' ಎಂಬ ವಿಷಯವನ್ನು ಕುರಿತು ೨ ಉಪನ್ಯಾಸಗಳನ್ನೂ 'ಅನುಭವಾಮೃತ ಮತ್ತು ಹರಿಕಥಾಮೃತಸಾರ' ಎಂಬ ವಿಷಯವನ್ನು ಕುರಿತು ೧ ಉಪನ್ಯಾಸವನ್ನೂ ಹೀಗೆ ಮೂರು ಉಪನ್ಯಾಸಗಳನ್ನು ಕೊಟ್ಟರು. ಅವುಗಳನ್ನು ಇಲ್ಲಿ ವ್ಯಾಖ್ಯಾತರಿಂದ ಪರಿಷ್ಕರಿಸಿ ಪುಸ್ತಕ ರೂಪದಲ್ಲಿ ಪ್ರಕಾಶಗೊಳಿಸಿದ್ದೇವೆ.

ಉಸ್ಮಾನಿಯಾ ಯುನಿವ್ಹರ್ಸಿಟಿಯ ಹಸ್ತಲಿಖಿತ ಪುಸ್ತಕಗಳ ಸಂಗ್ರಹದಲ್ಲಿ ಶಬ್ದಮಣಿದರ್ಪಣದ ತಾಡವೋಲೆಯ ಗ್ರಂಥವೊಂದನ್ನು ಕಂಡು ಅದರ ಸೂತ್ರಗಳನ್ನೂ ವೃತ್ತಿಯ ವ್ಯಾಖ್ಯಾನವನ್ನೂ ಚೆನ್ನಾಗಿ ಅಭ್ಯಾಸ ಮಾಡಿ ಸೂತ್ರಗಳ ಪಾಠಕ್ರಮದಲ್ಲಿಯೂ ವೃತ್ತಿಯ ಅರ್ಥವಿವರಣೆಯಲ್ಲಿಯೂ ಅನೇಕ ಉಪಯುಕ್ತವಾದ ವ್ಯತ್ಯಾಸಗಳನ್ನು ನೋಡಿ ಹೊಸ ಪಾಠ ಮತ್ತು ವೃತ್ತಿಯುಳ್ಳ ಶಬ್ದಮಣಿದರ್ಪಣ ಗ್ರಂಥವನ್ನು ವಿದ್ವಾಂಸರ ಅವಗಾಹನೆಗೆ ತರುವ ಉದ್ದೇಶದಿಂದ ವ್ಯಾಖ್ಯಾತರು ತಮ್ಮ ಉಪನ್ಯಾಸಕ್ಕೆ ಅದನ್ನೇ ವಿಷಯವಾಗಿ ಆರಿಸಿಕೊಂಡರು. ಅವರು ಪಾಠವಿಮರ್ಶೆಯಲ್ಲಿಯೂ ಸೂತ್ರಗಳ ಆನುಪೂರ್ವಿಯ ನಿರ್ಣಯದಲ್ಲಿಯೂ ತಮ್ಮ ವಿಮರ್ಶ ಬುದ್ಧಿಯ ತೀಕ್ಷ್ಣತೆಯನ್ನು ಚೆನ್ನಾಗಿ ತೋರಿಸಿದ್ದಾರೆ. ಅದೂ ಅಲ್ಲದೆ, ವಿಷಯ ವಿವೇಚನೆಯಲ್ಲಿಯೂ ನೀರಸವಾದ ವ್ಯಾಕರಣಶಾಸ್ತ್ರದ ಆಳವಾದ ಅಭ್ಯಾಸದಲ್ಲಿಯೂ ತಮಗಿದ್ದ ಪಟುತ್ವವನ್ನು ಅಲ್ಲಲ್ಲಿ ವ್ಯಕ್ತಮಾಡಿದ್ದಾರೆ.

ಈಗ ಉಪಲಬ್ಧವಿದ್ದ ಶಬ್ದಮಣಿದರ್ಪಣದ ಪ್ರತಿಗಳಲ್ಲಿ ಇಲ್ಲದ ಎಷ್ಟೋ ವಿಷಯಗಳು ಈ ಹೊಸ ಪುಸ್ತಕದಲ್ಲಿ ಕಂಡುಬರುತ್ತವೆ ಕೇಶಿರಾಜನಿಗೆ ಅಭಿಪ್ರೇತವಲ್ಲದ ವಿಧಾನಗಳು ಕಿಟಲ್‌ರವರ ಮತ್ತು ಸಾಹಿತ್ಯ ಪರಿಷತ್ತಿನ ಪ್ರತಿಗಳ ವೃತ್ತಿಯಲ್ಲಿ ಇದ್ದುದನ್ನು ಈ ಹೊಸ ಗ್ರಂಥದ ಆಧಾರದಿಂದ ಉಪನ್ಯಾಸಕರು ತಿಳಿಸಿಕೊಟ್ಟಿದ್ದಾರೆ. ಅವರು ಹೇಳಿದ ಕೆಲವು ಮಾತುಗಳು ವಿದ್ವಾಂಸರು ಗಮನಿಸತಕ್ಕಂಥವುಗಳಾಗಿವೆ: —

(೧) ಸೂತ್ರಗಳ ಆನುಪೂರ್ವಿಯಲ್ಲಿ ಬಹಳ ವ್ಯತ್ಯಾಸವಾಗಿದೆ ಅವುಗಳನ್ನು ವಿಷಯಾನುಗುಣ್ಯದಿಂದ ಒತ್ತಟ್ಟಿಗೆ ಸೇರಿಸುವುದು ಯುಕ್ತವಾಗಿದೆ. ಈ

ಹೊಸ ಪ್ರತಿಯಲ್ಲಿ ಈ ಕಾರ್ಯವು ತಕ್ಕಮಟ್ಟಿಗೆ ನೆರವೇರಿಸಲ್ಪಟ್ಟಿದೆ. (ಈ ವಿಷಯದಲ್ಲಿ ಉಪನ್ಯಾಸಕರ ಚರ್ಚೆಯನ್ನು ೧–೯ ಪುಟಗಳಲ್ಲಿ ನೋಡಬಹುದು.)

(೨) ವರ್ಣೋತ್ಪತ್ತಿ ಸ್ಥಾನವನ್ನು ಕೇಶಿರಾಜನು ಸೂತ್ರಗಳಲ್ಲಿ ಸಾಕಷ್ಟು ಹೇಳಿದ್ದಾನೆ. (ಪು. ೯–೧೨)

(೩) ೞ ಱ ಕುಳಕ್ಷಳಗಳನ್ನು 'ಳಾಕು', 'ಅಾ ಱ', 'ಳಕ್ಷ' ಎಂದು ಅನುಕ್ರಮವಾಗಿ ಸಂಕೇತಿಸಿ ಬೋಧಿಸುವ ಪರಿಪಾಠವಿತ್ತೆಂಬುದು ಸೂತ್ರವೃತ್ತಿಗಳ ಪಾಠದಿಂದ ವ್ಯಕ್ತವಾಗುತ್ತದೆ.

(೪) ಕವಿರಾಜಮಾರ್ಗದ ಕರ್ತನು ಶ್ರೀವಿಜಯ ನೃಪತುಂಗ, ಕೃತಕೃತ್ಯಮಲ್ಲ ಇವೇ ಮೊದಲಾದ ಹೆಸರುಗಳುಳ್ಳವನೆಂದು ವ್ಯಾಖ್ಯಾನಕಾರನ ಮಾತುಗಳಿಂದ ಸ್ಪಷ್ಟವಾಗುತ್ತದೆ.

(೫) ದಡ್ಡಕ್ಕರ ಪ್ರಾಸದಲ್ಲಿ ಹೊಸ ಪಾಠದಿಂದ ('ೞ ಱ ನಲ್ತುದ ನುಚ್ಚರಿಸಲ್ಕಾಗಿರ್ದ ತೆರದಿನಂತದು ಶುದ್ಧಂ') ಆ ವಿಷಯದಲ್ಲಿ ಇದುವರೆಗೆ ಇದ್ದ ಸಂಶಯ ನಿವಾರಣೆಯಾಗುತ್ತಿದೆ. ಆದರೆ ಈ ಹೊಸ ಪಾಠವೂ ಅಷ್ಟು ಸಮರ್ಪಕವಾಗಿಲ್ಲವೆಂದು ನಮಗೆ ತೋರುತ್ತದೆ. ೞ ಱ ನಲ್ತು ಎಂದು ಬೇರೆ ವಿಂಗಡಿಸುವುದಕ್ಕಿಂತ, ಸ್ವಲ್ಪ ತಿದ್ದಿ, 'ೞ ಱ ನನ್ತ್ರದ ನುಚ್ಚರಿಸಲ್ಕೆ' ಎಂದು ಹೇಳುವುದು ಸ್ವಾರಸಿಕ ಅರ್ಥವಾಗಿದೆ. ಇಲ್ಲದಿದ್ದರೆ 'ಉಚ್ಚರಿಸಲ್ಕೆ' ಎಂಬುದು ಅರ್ಥಪೂರ್ತಿ ಇಲ್ಲದೆ ಅನನ್ವಿತವಾಗುತ್ತದೆ.

(೬) ಕನ್ನಡದಲ್ಲಿ ನಿಜಬಿಂದುಗಳುಳ್ಳ ಪದಗಳನ್ನು ಸೇರಿಸಿ ಐದು ಪದ್ಯಗಳನ್ನು ಕೇಶಿರಾಜನು ಕೊಟ್ಟಂತೆ ಈ ಪ್ರತಿಯಿಂದ ತಿಳಿಯಬಹುದಾಗಿದೆ. ಇವು ಅಚ್ಚಿನ ಪ್ರತಿಗಳಲ್ಲಿ ಇಲ್ಲ ಇದರಂತೆ ವಿಕಲ್ಪ ಬಿಂದುವುಳ್ಳ ಶಬ್ದಗಳನ್ನೂ ಕೊಟ್ಟಿದ್ದಾನೆ. ಇದರಿಂದ ವ್ಯಾಕರಣಾಭ್ಯಾಸಿಗಳಿಗೆ ಉಪಕಾರವಾಗುವುದು.

(೭) ಒತ್ತಕ್ಕರ, ರೇಫಯುಕ್ತಾಕ್ಷರಗಳು ಹ್ರಸ್ವಸ್ವರಾಂತ ಪದಗಳಿಗೆ ಪರವಾದಾಗ ಸಂಧಿಕಾರ್ಯವನ್ನು ಹೇಗೆ ನಿರ್ವಹಿಸಬೇಕೆಂಬ ವಿಷಯದಲ್ಲಿ ಹೊರಟ ಕೇಶಿರಾಜನ ೫೯, ೬೦ನೆಯ ಸೂತ್ರಗಳನ್ನು ಉಪನ್ಯಾಸಕರು ಹೊಸ ಪ್ರತಿಯ ಪಾಠದಿಂದ ವಿವೇಚಿಸಿದ್ದಾರೆ.

(೮) ಸಮಸಂಸ್ಕೃತ—ಕನ್ನಡ ಪದಗಳ ಸಮಾಸ ವಿಷಯದಲ್ಲಿ ಉಪನ್ಯಾಸಕರ ವಿವೇಚನೆಯು ತುಂಬ ಮನನೀಯವೂ ಉಪಕಾರಕವೂ ಆಗಿದೆ. ಅಚ್ಚಿನ ಪ್ರತಿಗಳಲ್ಲಿ 'ಆ ಸಮಸಂಸ್ಕೃತಂಗಳನಚ್ಚಗನ್ನಡದೊಳ್ ಬೆರಸಿ ಸಮಾಸಮಂ ಮಾಡಲಾಗದು. ಅದುಕ್ಕುದಾಹರಣೆ— ಮುಖತಾವರೆ, ಕಣ್ಕಮಲಂ—

ಎಂಬಂತೆ' ಎಂದಿದೆ. ಆದರೆ ಈ ಹೊಸಪ್ರತಿಯಲ್ಲಿ 'ಸಮಸಂಸ್ಕೃತ ಪದಂಗಳ ನೞ್ಗನ್ನಡದೊಳ್ಬೆರಸಿ ನಡಸುವುದು' ಎಂದು ಮೇಲಿನ ವಿಧಾನಕ್ಕೆ ತೀರ ವಿರುದ್ಧವಾಗಿ ಹೇಳಿದೆ. ಇದರಲ್ಲಿ ಯಾವುದು ಸರಿ? ಶಬ್ದಸ್ಮೃತಿಯಲ್ಲಿ 'ಬೆರಸಿ ಸಮಸಂಸ್ಕೃತಂಗಳ್ ಬರೆ ಕನ್ನಡದೊಳಗೆ ಸಮತೆಯಿಂದಂ ಸಲ್ಗುಂ' ಎಂದೂ ಭಾಷಾಭೂಷಣದಲ್ಲಿ "ಸಮಸಂಸ್ಕೃತಂ ದೇಶೀಯ ಪದೇನ ಸಮಂ ಸಮಸ್ಯತೇ" ಎಂದೂ ಹೇಳಿರುವುದರಿಂದ ಅದಕ್ಕನುಗುಣವಾಗಿ ಹೊಸ ಪ್ರತಿಯ ಪಾಠವು ಶುದ್ಧವೆಂದು ಹೇಳಬೇಕಾಗುತ್ತದೆ. ಇದಕ್ಕೆ ನೇರವಾಗಿ ವಿರೋಧಿಸುವ ಮಾತನ್ನು ಅಚ್ಚಿನ ಪ್ರತಿಗಳಲ್ಲಿ ಯಾರೋ ಪ್ರಮಾದದಿಂದ ಸೇರಿಸಿರಬೇಕೆಂಬ ಉಪನ್ಯಾಸಕರ ಅಭಿಪ್ರಾಯವು ಯುಕ್ತವಾಗಿದೆ.

(೯) ಗಮಕ ಸಮಾಸದ ವಿಚಾರದಲ್ಲಿ ಹೊಸಪ್ರತಿಯ ಪಾಠವು ಹೆಚ್ಚು ಸ್ಪಷ್ಟವಿದೆ. "ಅಂತ್ಯದೊಳೊಂದಕಾರಂ, ಪಿಂತಣ ಮೆಯ್ಯೊಳಿಕಾರಮಿರೆ ಬರ್ಕುಂ" ಎಂದು ಬರೆದು ಸೂತ್ರದಲ್ಲಿದ್ದ 'ತನಗತ್ವಂ ಪೆಱಗಿತ್ವಂ', ಎಂಬ ಮಾತಿನ ಅರ್ಥವು ವಿವರಿಸಲ್ಪಟ್ಟಿದೆ. ಈ ವಿಷಯದ ಚರ್ಚೆಯು ಮನನೀಯವಾಗಿದೆ. ಆದರೆ 'ತನಗತ್ವಂ ಪೆಱಗಿತ್ವಂ' ಎಂಬಲ್ಲಿಯ 'ತನಗೆ', 'ಪೆಱಗೆ' ಪದಗಳ ಅರ್ಥವು ಸಂಗತವಾಗುವುದಿಲ್ಲ. ಇದನ್ನು ಸ್ಪಷ್ಟಗೊಳಿಸಲಿಕ್ಕೆ ಸೂತ್ರದ ಪಾಠದಲ್ಲಿಯೇ ಹೆಚ್ಚುಕಡಮೆಯಾಗುವುದು ಅವಶ್ಯವೆನಿಸುತ್ತದೆ ಇದಕ್ಕಾಗಿ ಮತ್ತೆ ಪಾಠಾಂತರಗಳುಳ್ಳ ಬೇರೆ ಪ್ರತಿಗಳನ್ನು ಶೋಧಿಸಬೇಕು.

ಅಂತು ಪ್ರೊ. ಡಿ. ಕೆ. ಭೀಮಸೇನರಾಯರು ಶಬ್ದಮಣಿದರ್ಪಣದ ಹೊಸ ಪಾಠಗಳನ್ನೂ ಅವುಗಳ ಹೊಸ ವ್ಯಾಖ್ಯಾನವನ್ನೂ ಕೊಟ್ಟು ಅದರ ಜೊತೆಗೆ ತಮ್ಮ ಪಾಂಡಿತ್ಯ ಪೂರ್ಣವಾದ ಚರ್ಚೆಯನ್ನು ಸೇರಿಸಿರುವುದರಿಂದ ವಿದ್ಯಾರ್ಥಿಗಳಿಗೂ ಪಾಠ ಹೇಳುವ ಅಧ್ಯಾಪಕರಿಗೂ ತುಂಬಾ ಉಪಕಾರವಾಗಿದೆ.

ಉಸ್ಮಾನಿಯಾ ಯುನಿವ್ಹರ್ಸಿಟಿಯ ಅಧಿಕಾರಿಗಳು ಪ್ರೊ. ಭೀಮಸೇನರಾಯರಿಂದ ಆ ಹೊಸ ಪ್ರತಿಯನ್ನು ಪರಿಷ್ಕರಿಸಿ ಅಚ್ಚು ಹಾಕಿಸಿದರೆ ಹೆಚ್ಚು ಉಪಕಾರವಾಗುವುದೆಂದು ನಾವು ಸೂಚಿಸದೆ ಇರಲಾರೆವು.

ಇನ್ನು, ಶ್ರೀ ಭೀಮಸೇನರಾಯರು ಅವರು ಮೇಲೆ ಹೇಳಿದಂತೆ ತತ್ವಜ್ಞಾನದ ಗ್ರಂಥಗಳಾದ ಮಹಾಲಿಂಗರಂಗನ ಅನುಭವಾಮೃತವನ್ನೂ, ಜಗನ್ನಾಥದಾಸರ ಹರಿಕಥಾಮೃತಸಾರವನ್ನೂ ಕುರಿತು ಮೂರನೆಯ ಉಪನ್ಯಾಸವನ್ನು ಕೊಟ್ಟರು. ಅದರಲ್ಲಿ ಆ ಗ್ರಂಥಗಳನ್ನು ತುಲನಾತ್ಮಕ ದೃಷ್ಟಿಯಿಂದ ಅಭ್ಯಾಸ ಮಾಡಿ ಅವುಗಳಲ್ಲಿರುವ ಶಬ್ದ ಮತ್ತು ವಿಚಾರಗಳಲ್ಲಿ ಸಾಮ್ಯವನ್ನೂ ತತ್ವಜ್ಞಾನದ ಉಪದೇಶದಲ್ಲಿ ವೈಷಮ್ಯವನ್ನೂ ಉದಾಹರಣೆ ಕೊಟ್ಟು ತೋರಿಸಿದ್ದಾರೆ ಶಬ್ದ ಸಾಮ್ಯದಿಂದ ಜಗನ್ನಾಥದಾಸರು ಅನುಭವಾಮೃತವನ್ನು ಪಠಿಸಿರಬೇಕೆಂದೂ ಅದರಿಂದ ಅನೇಕ

ಪದಗಳನ್ನೂ ಪ್ರಯೋಗಗಳನ್ನೂ ಆಯ್ದು ತಮ್ಮ ಗ್ರಂಥದಲ್ಲಿ ಉಪಯೋಗಿಸಿರುವ ರೆಂದೂ ಸೂಚಿಸಿದ್ದಾರೆ. ಇವರಿಬ್ಬರ ಗ್ರಂಥಗಳಿಗೂ ಸಾಧಾರಣವಾದ ಶ್ರೀಭಾಗವತ ಭಾರತಾದಿ ಪುರಾಣಗಳೂ ಉಪನಿಷತ್ತುಗಳೂ ಅವರ ವಿಚಾರ ಸರಣಿಗೂ ಶಬ್ದ ಪ್ರಯೋಗಕ್ಕೂ ಮೂಲವಾಗಿರಬೇಕೆಂದು ನಮ್ಮ ಅಭಿಪ್ರಾಯವು. ಹರಿದಾಸರ ಹಾಡುಗಳ ಅಭ್ಯಾಸದಿಂದ ಈ ಮಾತನ್ನು ಎತ್ತಿತೋರಿಸಬಹುದು. ಏನೇ ಇರಲಿ ಪ್ರೊ ಭೀಮಸೇನರಾಯರು ಇವೆರಡು ಗ್ರಂಥಗಳನ್ನು ಸಂಶೋಧನ ದೃಷ್ಟಿಯಿಂದ ವಿಮರ್ಶೆ ಮಾಡಿದ್ದು ಶಾಸ್ತ್ರೀಯವಾಗಿದೆ ಅವರು ಪರಿಶ್ರಮ ಬಟ್ಟು ಬರೆದ 'ಹದಿ ಮೂರನೆಯ ಶತಮಾನದ ಕರ್ನಾಟಕಾಂಧ್ರ ಮಹಾರಾಷ್ಟ್ರ ಸಾಹಿತ್ಯಾವಲೋಕನ' ಎಂಬ ಸಂಶೋಧನಾತ್ಮಕ ಪ್ರಬಂಧವು ಈ ಅಭ್ಯಾಸದ ಸರಣಿಗೆ ಮೂಲ ಆದರ್ಶ ವಾಗಿದೆ. ಈ ಮಾರ್ಗದಲ್ಲಿ ಕನ್ನಡದ ಗ್ರಂಥಗಳನ್ನು ಸಾಹಿತ್ಯ ದೃಷ್ಟಿಯಿಂದ ವಿಮರ್ಶಿಸುವುದು ಅವಶ್ಯವಿದೆ.

ಈ ಗ್ರಂಥದ ಕರಡನ್ನು ಶ್ರೀ. ಭೀಮಸೇನರಾಯರೇ ತಿದ್ದಿದ್ದಾರೆ. ಇದಕ್ಕೂ ಈ ಉಪನ್ಯಾಸಗಳಿಗೂ ಅವರು ಅಭಿನಂದನಾರ್ಹರು ಅವರು ಶಬ್ದಮಣಿದರ್ಪಣದ ಹೊಸ ಪ್ರತಿಯನ್ನು ಬೇಗ ಪ್ರಸಿದ್ಧಿಸುವರೆಂದು ಕೋರುತ್ತೇವೆ.

ಕನ್ನಡ ಸಂಶೋಧನ ಸಂಸ್ಥೆ
೨೮—೯—೧೯೫೫

ಆರ್. ಎಸ್. ಪಂಚಮುಖಿ
ಡೈರೆಕ್ಟರ,
ಕನ್ನಡ ರಿಸರ್ಚ ಇನ್ಸ್ಟಿಟ್ಯೂಟ, ಧಾರವಾಡ.

# ಶಬ್ದಮಣಿದರ್ಪಣದ
## ಪಾಠಾಂತರಗಳು

ಇದುವರೆಗೆ ಅಚ್ಚಾಗಿ ಕನ್ನಡಿಗರ ಕೈಗೆ ಸಿಕ್ಕಿರುವ ಶಬ್ದಮಣಿದರ್ಪಣದ ಆವೃತ್ತಿಗಳು ಮುಖ್ಯವಾಗಿ ಮೂರು. ಮೊದಲನೆಯದನ್ನು ಕಿಟ್ಟೆಲ್ ಅವರು ಆ ಹಿಂದಿನ ಕಾಲದಲ್ಲಿ — ಈಗಿನಷ್ಟು ಹಳಗನ್ನಡದ ವ್ಯಾಸಂಗ ಪ್ರಚಾರವಿರದಿದ್ದ ಕಾಲದಲ್ಲಿ —ಬಹು ಶ್ರಮಪಟ್ಟು ಆದಷ್ಟುಮಟ್ಟಿಗೆ ಶುದ್ಧವಾದ, ವಿಶ್ವಸನೀಯವಾದ ಪಾಠದೊಂದಿಗೆ ಮುದ್ರಿಸಿದರು. ಅವರು ಸಂಶೋಧನ ದೃಷ್ಟಿಯಿಂದ ಶಬ್ದಮಣಿ ದರ್ಪಣದ ಸೂತ್ರಗಳಲ್ಲಿ ಪರಸ್ಪರವಿರುವ ಸಂಬಂಧವನ್ನು ವ್ಯಾಕರಣಾಭ್ಯಾಸಿಗಳಿಗೆ ಸುಗಮವಾಗುವ ರೀತಿಯಲ್ಲಿ ಸೂತ್ರ ಸಂಖ್ಯೆಯನ್ನು ಕೊಟ್ಟು ಸೂಚಿಸಿರುವುದು ಇಂಗ್ಲಿಷಿನಲ್ಲಿಯಾದರೂ ಬಹು ಉಪಯುಕ್ತವೂ ಶ್ಲಾಘನೀಯವೂ ಆಗಿದೆ. ಅದೇ ಪ್ರತಿಯನ್ನು ಶ್ರೀಮಾನ್ ಪಂಜೆ ಮಂಗೇಶರಾಯರು ಶೋಧಿಸಿ ಮುದ್ರಿಸಿದರು. ಸಾಹಿತ್ಯಪರಿಷತ್ತಿನವರ ಪ್ರತಿ, ಮೊದಲ ಪ್ರತಿಯಲ್ಲಿಯ ಕೆಲವು ಕೊರತೆಗಳನ್ನು ದೂರ ಮಾಡಿದರೂ ಅನೇಕ ಸಂದೇಹಾಸ್ಪದವಾದ ಅಂಶಗಳು ಅದರಲ್ಲಿ ಉಳಿದಿವೆ. ಇದಕ್ಕೆ ಮುಖ್ಯ ಕಾರಣವೆಂದರೆ ಕಿಟಲ್ ಅವರಿಗೆ ದೊರೆತ ತಾಳೆಯೋಲೆಯ ಪ್ರತಿಗಳಿಗಿಂತ ಉತ್ತಮವಾದ ಪ್ರತಿ ಅವರಿಗೆ ದೊರೆಯದೆ ಇದ್ದುದು. ಕಿಟಲ್ ಅವರಿಗೆ ದೊರೆತ ಪ್ರತಿಗಳು ಎಷ್ಟು ಅಶುದ್ಧವಾದುವುಗಳು, ಎಷ್ಟು ಲೋಪಗಳುಳ್ಳವು ಎಂಬುದು ಅವರು ಈಗ್ಗೆ ೭೦ ವರ್ಷಗಳ ಹಿಂದೆ-ಎಂದರೆ ಕ್ರಿಸ್ತಶಕ ೧೮೭೨ ರಲ್ಲಿ ಪ್ರಕಟಿಸಿದ

ಶಬ್ದಮಣಿದರ್ಪಣದಲ್ಲಿ ಬರೆದ ಇಂಗ್ಲಿಷಿನ ಪೂರ್ವ ಪೀಠಿಕೆಯಿಂದ ಸ್ಪಷ್ಟವಾಗುವುದು. ಇವೆಲ್ಲ ಓಲೆಯ ಪ್ರತಿಗಳು ಬಹಳ ಪ್ರಾಚೀನ ಕಾಲದುವುಗಳಲ್ಲ. ಸುಮಾರು ೨೦೦ ವರ್ಷಗಳಿಂದೀಚೆಗೆ ಬರೆದುವುಗಳು. ೞಟ, ಶಕಟರೇಫೆ, ಹಲಂತ ಶಬ್ದಗಳ ಪರಿಶುದ್ಧತೆ, ಈ ವಿಷಯಗಳಲ್ಲಿ ಇವು ಅಷ್ಟು ಪ್ರಮಾಣವಲ್ಲ. ಆದರೂ ಕಿಟಲ್ ಅವರು ತಮಿಳು, ತುಳು, ಬಡಗ ಭಾಷೆಗಳ ಆಧಾರದ ಮೇಲೆ ತಮ್ಮ ಪ್ರತಿಯನ್ನು ಶೋಧಿಸಿ ಮುದ್ರಿಸಿದರು. ಸಾಹಿತ್ಯ ಪರಿಷತ್ತಿನವರು ಅದನ್ನೇ ಆಧಾರವಾಗಿಟ್ಟುಕೊಂಡು ಸೂಕ್ತ ಕಂಡಲ್ಲಿ ಪಂಡಿತರಿಂದ ಶೋಧಿಸಿ ಪ್ರಚಲಿತ ಮೂಲಗ್ರಂಥ ಸೂತ್ರಾಭಿಪ್ರಾಯಕ್ಕೆ ವ್ಯತ್ಯಸ್ತವಾಗದಂತೆ ಪ್ರಕಟಿಸಿದ್ದು ತಕ್ಕಮಟ್ಟಿಗೆ ಉಪಯೋಗಕರವಾಯಿತು. ಮದ್ರಾಸ್ ಆವೃತ್ತಿ ಲಿಂಗಣಾರಾಧ್ಯನೆಂಬ ಹೊಸವೃತ್ತಿಕಾರನ ಹೆಸರನ್ನೊಳಗೊಂಡು ಜನತೆಯಲ್ಲಿ ಹೆಚ್ಚು ಕುತೂಹಲವನ್ನುಂಟುಮಾಡಿತು. ಅವರ ಗಾತ್ರವೂ ಮೈಕಟ್ಟೂ ಬೆರಗುಗೊಳಿಸುವುವುಗಳಾಗಿವೆ. ಲಿಂಗಣಾರಾಧ್ಯನಿಗೆ ದೊರೆತ ಪ್ರತಿಯ ಪಾಠ ಈಗ ಪ್ರಚಲಿತವಾಗಿರುವ ಪ್ರತಿಗಳ ಪಾಠಕ್ಕಿಂತ ಸ್ವಲ್ಪ ಭಿನ್ನವಾಗಿದ್ದಿತೆಂದು ತೋರುತ್ತದೆ. ಅದೂ ಸುಮಾರು ೨೫೦ ವರ್ಷಗಳ ಆಚೆ ಹುಟ್ಟಿರಬಹುದೆಂದು ಪರಿಷ್ಕರ್ತರು ಅಭಿಪ್ರಾಯಪಡುತ್ತಾರೆ. ಆ ಪ್ರತಿಯೂ ಒಂದೆರಡು ಎಡೆಗಳಲ್ಲಿ ಹೊರತು ಮಿಕ್ಕ ಕಡೆ ಈಗಿನ ಪ್ರತಿಗಳ ಪಾಠಗಳಿಗಿಂತ ಹೆಚ್ಚು ವಿಷಯಗಳನ್ನು ತಿಳಿಸುವುದಿಲ್ಲ. ಉಸ್ಮಾನಿಯಾ ವಿಶ್ವವಿದ್ಯಾಲಯದಲ್ಲಿ ಶಬ್ದಮಣಿ ದರ್ಪಣದ ಪ್ರತಿಯೊಂದು ಇದೆ. ಆ ಪ್ರತಿಯ ಪಾಠಗಳು ಪ್ರಚಲಿತ ಶಬ್ದಮಣಿ ದರ್ಪಣದ ಪಾಠಗಳಿಗಿಂತ ಅನೇಕ ಕಡೆಗಳಲ್ಲಿ ಭಿನ್ನವಾಗಿವೆ. ಇದರಿಂದ ಈಗಿನ ಸಂದೇಹಗಳು ತಕ್ಕಮಟ್ಟಿಗೆ ದೂರವಾಗುತ್ತವೆ. ಅದನ್ನು ಈ ಮುಂದಿನ ವಿವರಣೆಯಿಂದ ತಿಳಿಯಬಹುದು. ಈ ಪ್ರತಿಯಲ್ಲಿ ಶಕಟ ರೇಫೆಯನ್ನು ಉಪಯೋಗಿಸಿದೆ. ೞಟದಿಂದ ಕೂಡಿದ ಶಬ್ದಗಳನ್ನು ಅವುಗಳ ವೈಶಿಷ್ಟ್ಯವನ್ನು ಹೇಳುವ ಸಂದರ್ಭದಲ್ಲಿ ೞಟ ಯುಕ್ತವಾಗಿಯೇ ಬರೆದಿದೆ ಇದುವರೆಗೆ ದೊರೆತ ಶಬ್ದಮಣಿದರ್ಪಣದ ಓಲೆಗರಿಯ ಪ್ರತಿಗಳಿಗಿಂತ ಇದನ್ನು ಪ್ರಾಚೀನ ತಮವೆಂದು ಹೇಳಲು ಆಸ್ಪದವಿದೆ. ಇದಕ್ಕೆ ಒಂದು ವ್ಯಾಖ್ಯಾನವೂ ಇದೆ. ಈ ವ್ಯಾಖ್ಯಾನದಿಂದ ಈ ಪ್ರತಿಯ ಗೌರವವು ಹೆಚ್ಚಿದೆ ಎಂಬುದು ಮುಂದೆ ಗೋಚರವಾಗುವುದು. ಈ ಪ್ರತಿಯನ್ನು ಈ ಭಾಷಣದಲ್ಲಿ "ಹೊಸ ಪ್ರತಿ" ಯೆಂದು ಸಂಕೇತಿಸಿದೆ. ಈ ಪ್ರತಿಯನ್ನೇ ಆಧಾರವಾಗಿ ತೆಗೆದುಕೊಂಡು ಶಬ್ದಮಣಿದರ್ಪಣದ ಪಾಠಾಂತರಗಳು ಎಂಬ ಈ ಭಾಷಣವನ್ನು ಸಿದ್ಧಗೊಳಿಸಿದೆ. ಪಾಠಾಂತರಗಳಲ್ಲಿ ಬರಿಯ ಸೂತ್ರಗಳನ್ನಷ್ಟೇ ತೆಗೆದುಕೊಂಡಿಲ್ಲ. ವೃತ್ತಿಗಳನ್ನೂ ಪ್ರಯೋಗಗಳನ್ನೂ ಜೊತೆಗೆ ಸೇರಿಸಿದೆ. ಅನೇಕ ಕಡೆಗಳಲ್ಲಿ ವೃತ್ತಿಗೂ, ಪ್ರಯೋಗಗಳಿಗೂ, ಸೂತ್ರಗಳಿಗೂ ವ್ಯತ್ಯಾಸವು ಕಂಡುಬಂದು ಸೂತ್ರ ವೃತ್ತಿಗಳನ್ನು ಬರೆದವರು ಬೇರೆ ಬೇರೆ ಎಂಬ ಅನುಮಾನಕ್ಕೆ ಆಸ್ಪದವಾಗಿದೆಯಷ್ಟೆ! ಇದರಿಂದ ಅದನ್ನು ಸ್ವಲ್ಪಮಟ್ಟಿಗೆ ಪರಿಶೀಲಿಸಿದಂತಾಗಿದೆ.

ಶಬ್ದಮಣಿದರ್ಪಣದಲ್ಲಿ ಸೂತ್ರಾನುಪೂರ್ವಿ ಕೆಲವೆಡೆಯಲ್ಲಿ ಸಕ್ರಮವಾಗಿಲ್ಲ ವೆಂಬುದು ಈಗ ಅಚ್ಚಾಗಿರುವ ಪ್ರಕಟನೆಗಳಿಂದ ವ್ಯಕ್ತವಾಗುತ್ತದೆ. ಶಬ್ದಮಣಿ ದರ್ಪಣದ ವಿಧವಿಧದ ಪ್ರತಿಗಳನ್ನು ಅಚ್ಚುಹಾಕಿಸಿದ ಮಹಾಶಯರುಗಳು ತಮ ತಮಗೆ ದೊರೆತ ಹಸ್ತಪ್ರತಿಗಳಲ್ಲಿಯೂ ಸೂತ್ರಗಳ ಸಂಖ್ಯೆ ಕ್ರಮವಾಗಿಲ್ಲವೆಂದೂ, ಹೆಚ್ಚು ಮಾತೃಕೆಗಳಲ್ಲಿ ಸಮತೆಯಿರುವ ಸೂತ್ರಸಂಖ್ಯಾಕ್ರಮವನ್ನೇ ಅನುಸರಿಸ ಲಾಗಿದೆಯೆಂದೂ, ತಂತಮ್ಮ ಪೀಠಿಕೆಯಲ್ಲಿ ಹೇಳಿದ್ದಾರೆ. ಇದರಿಂದ ಓಲೆಗರಿಯ ಲೇಖಕರ ಪ್ರಮಾದದಿಂದಲೋ, ಅಥವಾ ಅವರಿಗೆ ದೊರೆತ ಪ್ರತಿಗಳ ಆಧಾರ ದಿಂದಲೋ ಕೇಶಿರಾಜನು ಬರೆದ ಮೂಲವ್ಯಾಕರಣದಲ್ಲಿದ್ದ ಅನುಕ್ರಮಕ್ಕೆ ಭಂಗ ಬಂದಿದೆ. ಕೇಶಿರಾಜನು ಕೆಲವೆಡೆಗಳಲ್ಲಿ ಒಂದು ಭಾಗಕ್ಕೆ ಸೇರಬೇಕಾಗಿದ್ದ ಅಂಶ ಗಳನ್ನು ಮತ್ತೊಂದು ಭಾಗದಲ್ಲಿ ಹೇಳಿದ್ದಾನೇನೋ ಸರಿ. ಇದು ಅವನ ವಿಸ್ಮರಣೆ ಯಿಂದ ಆಗಿಹೋದ ಕಾರ್ಯವಾಗಿರಬೇಕು. ಇದು ರಾಘವಾಂಕನ "ನಡೆವರೆಡಹದೆ ಕುಳಿತರೆಡಹುವರೆ?" ಎಂಬ ಮಾತಿನಂತೆ ಬರೆಯುವವನಿಗೆ ಸಹಜವಾಗಿ ಆಗುವ ವಿಸ್ಮರಣೆ. ಹೀಗೆ ಸಂಧಿ ಪ್ರಕರಣಕ್ಕೆ ಸೇರಬೇಕಾಗಿರುವುದನ್ನು ಸಮಾಸದಲ್ಲಿಯೂ, ಅಕ್ಷರ ಪ್ರಕರಣಕ್ಕೆ ಸೇರಬೇಕಾಗಿದ್ದುದನ್ನು (ಸೂ. ೧೫೭) ಸಂಧಿಯಲ್ಲಿಯೂ ಹೇಳಿ ರುವ ನಿದರ್ಶನಗಳು ಉಂಟು. ತದ್ಭವ ಪ್ರಕರಣಕ್ಕೆ ಸೇರಬೇಕಾಗಿದ್ದ "ಪ್ರಾಡಿಮ ಮಾಕೂಷ್ಮಾಂಡಂ" (ಸೂ. ೨೦–೨೧) ಎಂಬುದನ್ನು ಊಟ, ಕ್ಷ ಳ ನಿರ್ಣಯ ಸಂದರ್ಭದಲ್ಲಿ ಹೇಳಿದ್ದಾನೆ. ತದ್ಭವ ಪ್ರಕರಣದಲ್ಲಿಯೂ ಇವುಗಳನ್ನು ಹೇಳಿದ್ದಾನೆ. ಬಿಂದು ವಿಷಯವಾಗಿ ಪ್ರತಿಪಾದಿಸುವ ಸೂತ್ರಗಳು ೧೦೪–೧೬೧ ಒಂದೆಡೆಯಿದ್ದರೆ ಬಾಧಕವಿರಲಿಲ್ಲ. ವಿಭಕ್ತಿಯ ಅರ್ಥವನ್ನೂ ಲಕ್ಷಣವನ್ನೂ ನಿರ್ಣಯಿಸುವ ಸೂತ್ರ ವನ್ನು (ಸೂ. ೩೫) ಮುಂಚೆಯೇ ಹೇಳಿ ಆಮೇಲೆ ಬಿಂದು, ರೇಫ ದ್ವಿತ್ವ ಮೊದ ಲಾದ ವಿಷಯಗಳನ್ನು ಹೇಳುವ ೧೬ ಸೂತ್ರಗಳನ್ನು ಬರೆದು ಆ ಬಳಿಕ ಸಂಧಿ ಪ್ರಕರಣವನ್ನು ಆರಂಭಿಸುತ್ತಾನೆ. ಇದರಿಂದ ವ್ಯಾಕರಣಾಭ್ಯಾಸಿಗಳಿಗೆ ಹಿಂದಿನ ಸೂತ್ರಗಳನ್ನು ಜ್ಞಾಪಿಸಿಕೊಳ್ಳಲು ಹಾಳೆಗಳನ್ನು ತಿರುವಿಹಾಕಬೇಕಾಗುತ್ತದೆ. ಇಂಥವುಗಳಲ್ಲಿ ಕೆಲವನ್ನು ಸಂದರ್ಭೋಚಿತವಾಗಿ ಸರಿಪಡಿಸಿ ಶಬ್ದಮಣಿದರ್ಪಣದ ಹೊಸಪ್ರತಿಯನ್ನೇ ಸಿದ್ಧಮಾಡಬಹುದಲ್ಲವೆ, ಎನ್ನಿಸುತ್ತದೆ. ಆದರೆ ಈಗಿನ ಪ್ರತಿ ಗಳಲ್ಲಿರುವಂತೆಯೇ ಕೇಶಿರಾಜನು ಸೂತ್ರಾನುಪೂರ್ವಿಯನ್ನಿಟ್ಟು ಬರೆದನೆಂದು ಖಂಡಿತವಾಗಿ ಹೇಗೆ ಹೇಳುವುದು? ಉದಾಹರಣೆಗಾಗಿ ಆರಂಭದ ಪದ್ಯಗಳನ್ನು ತೆಗೆದುಕೊಳ್ಳಬಹುದು.

ಜನಮಂಗೀಕರಿಪುದು ನೆ |
ಟ್ಟನೆ ಸಂಬಂಧಾಭಿಧೇಯ ಶಕ್ಯಾನುಷ್ಠಾ ||
ನನಿಜೇಷ್ಟಸಿದ್ಧಿಗಳ್ ನೆಲೆ |
ಸಿನಿಂದ ಕಾರಣದೆ ಶಬ್ದಮಣಿದರ್ಪಣಮಂ || ಎಂಬ

ಸಾಹಿತ್ಯಪರಿಷತ್ತಿನ ಪ್ರತಿಯ ಪೀಠಿಕೆಯ ಏಳನೆಯ ಪದ್ಯವಾದ ಮೇಲೆ ಅಲ್ಲಿಯ ವ್ಯಾಕರಣ ಪ್ರಾರಂಭದ ಮೂರನೆಯ ಪದ್ಯವಾದ

ವ್ಯಾಕರಣದಿಂದೆ ಪದಮಾ |
ವ್ಯಾಕರಣಪದದಿನರ್ಥಮರ್ಥದೆ ತತ್ತ್ವಾ ||
ಲೋಕಂ ತತ್ತ್ವಾವಲೋಕದಿ |
ನಾಕಾಂಕ್ಷಿಪ ಮುಕ್ತಿಯಕ್ಕುಮದೆ ಬುಧರ್ಗೆ ಫಲಂ || ಎಂಬುದು

ಹೊಸಪ್ರತಿಯಲ್ಲಿದೆ. ಇವೆರಡು ಪದ್ಯಗಳು ವ್ಯಾಕರಣ ಪ್ರಯೋಜನ ಫಲಗಳನ್ನು ತಿಳಿಸುವುವಾದ್ದರಿಂದ ಒಂದೆಡೆಯಿದ್ದರೆ ಸೂಕ್ತವೂ, ಸಮಂಜಸವೂ ಎಂದು ಕಂಡು ಬರುತ್ತದೆ. ಹೀಗೆಯೇ ಸಾಹಿತ್ಯ ಪರಿಷತ್ತಿನ ಪ್ರತಿಯ ವ್ಯಾಕರಣ ಪ್ರಾರಂಭ ವೆಂಬ ಪ್ರಕರಣದಲ್ಲಿ ಅಚ್ಚಾಗಿರುವ

ಅನುಕೂಲ ಪವನನಿಂ ಜೀ
ವನಿಷ್ಟದಿಂ ನಾಭಿ ಮೂಲದೊಳ್ ಕಹಳೆಯ ಪಾಂ
ಗಿನವೊಲ್ ಶಬ್ದದ್ರವ್ಯಂ
ಜನಿಯಿಸುಗುಂ ಶ್ವೇತಮುದಱ ಕಾರ್ಯಂ ಶಬ್ದಂ | ಎಂಬ ಎರಡ

ನೆಯ ಪದ್ಯವು ಶಬ್ದೋತ್ಪತ್ತಿಕ್ರಮುವನ್ನೂ, ಶಬ್ದ ಸ್ವರೂಪವನ್ನೂ, ಅದರ ಕಾರ್ಯ ವನ್ನೂ ಬೋಧಿಸುತ್ತದೆ. ಇದೇ ಅಭಿಪ್ರಾಯವನ್ನು ಪ್ರತಿಪಾದಿಸುವ

ತನು ವಾದ್ಯಂ ನಾಲಗೆವಾ |
ದನ ದಂಡಂ ಕರ್ತೃವಾತ್ಮನವನ ಮನೋವೃ ||
ತ್ತಿನಿಮಿತ್ತಮಾಗಿ ಶಬ್ದಂ |
ಜನಿಯಿಸುಗುಂ ಧವಳವರ್ಣಮಕ್ಷರ ರೂಪಂ || ಎಂಬ

ಸೂತ್ರವು ಸಾಹಿತ್ಯ ಪರಿಷತ್ತಿನ ಪ್ರಕಟನೆ, ಕಿಟಲ್ ಅವರ ಪ್ರಕಟನೆ, ಮದ್ರಾಸಿನ ಪ್ರಕಟನೆ—ಇವುಗಳಲ್ಲಿ ಅನುಕ್ರಮವಾಗಿ ಸೂತ್ರ ೩೪, ೩೪, ೩೭ ಸಂಖ್ಯೆಯಿಂದ ಅಚ್ಚಾಗಿದೆ. ಇವೆರಡು ಸೂತ್ರಗಳು ಏಕಾಭಿಪ್ರಾಯವುಳ್ಳುವುಗಳಾಗಿ ಒಂದು ಮತ್ತೊಂದಕ್ಕೆ ಪೂರಕವೆಂಬಂತಿವೆ. ಕೇಶಿರಾಜನು ಒಂದು ಸೂತ್ರವನ್ನು ಮೊದಲು ಬರೆದು ಆಮೇಲೆ ಸುಮಾರು ೩೧-೩೨ ಸೂತ್ರಗಳನ್ನು ರಚಿಸಿ ಅಪ್ರಸ್ತುತವಾದ ಸಂದರ್ಭದಲ್ಲಿ ಅದೇ ಅಭಿಪ್ರಾಯವುಳ್ಳ ಮತ್ತೊಂದು ಸೂತ್ರವನ್ನು ಹೇಳಿರಲಾರ ನೆಂದು ತಿಳಿಯಬೇಕಾಗುತ್ತದೆ. ಕಿಟಲ್ ಅವರು ೩೪ ನೆಯ ಸೂತ್ರದ ಪಾರ್ಶ್ವ ಟಿಪ್ಪಣದಲ್ಲಿ ಪೀಠಿಕೆಯ ೯ ನೆಯ ಸೂತ್ರವನ್ನು ಇದಕ್ಕೆ ಸಂಬಂಧಿಸಿರುವ ಹಾಗೆ ಸೂಚಿಸಿದ್ದಾರೆ. ಅವರಿಗೆ ದೊರೆತ ಓಲೆಗರಿಯ ಪ್ರತಿಗಳಲ್ಲೆಲ್ಲಾ ಇದೇ ಆನುಪೂರ್ವಿ ಇದ್ದುದರಿಂದಲೇ ಅವರು ವಿಧಿಯಿಲ್ಲದೆ ಹೀಗೆ ಅಚ್ಚು ಹಾಕಿಸಿರಬೇಕು. ಆದರೆ ಹೊಸ ಪ್ರತಿಯಲ್ಲಿ ಈ ಎರಡು ಸೂತ್ರಗಳು ಒಂದೇ ಕಡೆ ಇವೆ. ಶಬ್ದಮಣಿದರ್ಪಣದ ಶುದ್ಧವೂ ಸಕ್ರಮವೂ ಆದ ಪಾಠವನ್ನು ಲಕ್ಷಿಸುವವರಿಗೆ ಈ ಅಂಶವು ಮಹತ್ತ್ವ

ವುಳ್ಳುದೆಂಬುದರಲ್ಲಿ ಸಂದೇಹವಿಲ್ಲ. ಇದಲ್ಲದೆ ಕೇಶಿರಾಜನು ವಿಷಯಗಳನ್ನು ಕ್ರಮ ಬದ್ಧವಾಗಿ ಪ್ರತಿಪಾದಿಸುವುದಿಲ್ಲವೆಂಬ ಆರೋಪವೂ ಇದರಿಂದ ತೊಲಗಿದೆ. ಹೊಸ ಪ್ರತಿಯ ಪಾಠಕ್ರಮವು ಇಂಥ ವಿಷಯದಲ್ಲಿ ಹೆಚ್ಚು ವಿಶ್ವಸನೀಯವೆಂದು ಹೇಳ ಬೇಕಾಗಿದೆ. ಅಕ್ಷರೋತ್ಪತ್ತಿಸ್ಥಾನವನ್ನು ಹೇಳುವ ಈ ಸೂತ್ರಗಳ ತರುವಾಯವೇ ಉಳಿದ ಅಕ್ಷರಗಳು ಎಲ್ಲೆಲ್ಲಿ, ಹೇಗೆ ಹೇಗೆ, ಹುಟ್ಟಿ ಉಚ್ಚಾರವಾಗುತ್ತವೆಯೆಂಬ ಸೂತ್ರಗಳಿರುವುದು ಹೆಚ್ಚು ಉಚಿತವಾಗಿ ಕಂಡುಬರುತ್ತದೆ.

ಕೊರಲುಂ ಜಿಹ್ವಾಮೂಲಮು |
ಮುರಮುಂ ತಾಲುಗೆಯುಮೋಷ್ಠಮುಂ ನಾಸಿಕೆಯುಂ ||
ಶಿರಮುಂ ದಂತಮುಮೆಂದ |
ಕ್ಕರಮುದಯಿಪ ತಾಣಮಾದುವೀ ಪೇಳ್ದೆಂಟುಂ || ಎಂಬ

ಸೂತ್ರವು ಸಾಹಿತ್ಯಪರಿಷತ್ತಿನ ಪ್ರಕಟನೆಯಲ್ಲಿಯೂ, ಕಿಟಲ್ ಅವರ ಪ್ರತಿ ಯಲ್ಲಿಯೂ ಮೂವತ್ತನೆಯದಾಗಿಯೂ, ಲಿಂಗಣಾರಾಧ್ಯನ ಪ್ರತಿಯಲ್ಲಿ ೩೩ ನೆಯ ದಾಗಿಯೂ ಇದೆ. ಅಕ್ಷರಗಳ ವಿವರಣೆ, ಱ ೞ ಕುಳಕ್ಷಳಗಳ ಸ್ಪಷ್ಟೀಕರಣ, ದ್ವಿತ್ವಾಕ್ಷರ ಪ್ರಾಸ ಮುಂತಾದ ವಿಷಯಗಳನ್ನೆಲ್ಲ ಹೇಳಿದ ಮೇಲೆ ಈ ಸೂತ್ರ ಬಂದಿರುವುದು ಎಷ್ಟು ಅಸಂಬದ್ಧವೂ, ಕೃತ್ರಿಮವೂ ಆಗಿ ಕಾಣುತ್ತದೆ! ಹೊಸ ಪ್ರತಿ ಇಲ್ಲಿ ಸರಿ ಯಾದ ಕ್ರಮವನ್ನು ಅನುಸರಿಸಿದೆ; ಕೇಶಿರಾಜನೂ ಹೀಗಯೇ ಬರೆದಿರಬಹುದೆಂದು ಊಹಿಸಬೇಕಲ್ಲವೆ?

ಹಾಗೆಯೇ ಇನ್ನೂ ಒಂದೆರಡು ಪಾಠಕ್ರಮಗಳನ್ನು ಈ ಸಂದರ್ಭದಲ್ಲಿ ಸೂಚಿಸ ಬಹುದಾಗಿದೆ. ಕಿಟಲ್ ಅವರ ಪ್ರತಿಯಲ್ಲಿಯೂ, ಸಾಹಿತ್ಯ ಪರಿಷತ್ತಿನ ಪ್ರಕಟನೆ ಯಲ್ಲಿಯೂ,

ಕವಿಗಳ್ ಸ್ವರದಿಂ ವರ್ಗದಿ |
ನವರ್ಗದಿಂ ಯೋಗವಾಹದಿಂ ದೇಶಿಯೊಳು ||
ದ್ಭವಮಪ್ಪ ವರ್ಣದಿಂ ಪಂ |
ಚ ವಿಧಂ ತಾನೆಂದು ತಿಳಿಪುವರ್ ಶುದ್ಧಗೆಯಂ || ಎಂಬ

ಸೂತ್ರವು ೩೧ ನೆಯದಾಗಿ ಅಚ್ಚಾಗಿದೆ. ಲಿಂಗಣಾರಾಧ್ಯನ ಪ್ರತಿಯಲ್ಲಿ ಇದು ೩೪ ನೆಯ ಸೂತ್ರ. ಇದು ಆ ಸ್ಥಾನದಲ್ಲಿ ಸಿಡಿದುಬಿದ್ದಂತೆ ಕಾಣುತ್ತದೆ. ಹೊಸ ಪ್ರತಿಯಲ್ಲಿ ಈ ಸೂತ್ರವು

ತರದಿನಕಾರಂ ಮೊದಲಾ |
ಗಿರೆ ಪದಿನಾಲ್ಕುಂ ಸ್ವರಂಗಳಾದಿಯ ಪತ್ತ ||
ಕ್ಕರಮುಂ ಸಮಾನಮೆನಿಸುಗು |
ಮೆರಡೆರಡವಱೊಳ್ ಸವರ್ಣಮೆಂತೋದಿದೊಡಂ ||

ಎಂಬ ಸಾಹಿತ್ಯ ಪರಿಷತ್ಪ್ರಕಟನೆಯ ೬ ನೆಯ ಸೂತ್ರಕ್ಕೆ ಮೊದಲು ಇದೆ. ವ್ಯಾಕರಣಾರಂಭದಲ್ಲಿ

"ಸ್ವರದಿಂ, ವರ್ಗದಿಂ, ಅವರ್ಗದಿಂ, ಯೋಗವಾಹದಿಂ,
ದೇಶೀಯಂಗಳಿಂ, ಇಂತು ಶುದ್ಧಾಕ್ಷರಂಗಳ್ ಕನ್ನಡದೊಳ್
ಪಂಚವಿಧಮೆಂದು ಕವಿಗಳ್ ಬಾಲಶಿಕ್ಷೆಯಂ ಮಾಳ್ಪರ್"ಎಂದು

ಹೇಳಿ, ಆಮೇಲೆ ಆ ಸ್ವರಗಳು ಯಾವುವು, ವರ್ಗಾಕ್ಷರಗಳಾವುವು, ಅವರ್ಗಾಕ್ಷರಗಳಾವುವು, ಯೋಗವಾಹಗಳ ಪರಿಯೆಂತು, ದೇಶೀಯಾಕ್ಷರಗಳೆಂದರೇನು, ಎಂಬ ಅನುಕ್ರಮನನ್ನು ತಿಳಿಸುವ ಸೂತ್ರಗಳು ಉಕ್ತವಾಗುವುದು ಯೋಗ್ಯವಾಗಿರುವುದು. ಹೊಸ ಪ್ರತಿಯ ಈ ಕ್ರಮವು ಕೇಶಿರಾಜನ ಮೂಲಪ್ರತಿಯನ್ನು ಅನುಸರಿಸಿರಬಹುದೆಂದು ಇಟ್ಟುಕೊಂಡರೆ ಕ್ರಮಭಂಗ ಬರಲಾರದು ಅನುಸ್ವಾರ, ವಿಸರ್ಗಗಳನ್ನು ಹೇಳುವ ಸೂತ್ರಗಳು ಹೊಸ ಪ್ರತಿಯಲ್ಲಿ ವ್ಯಂಜನಾಕ್ಷರಗಳನ್ನು ಹೇಳಿದ ಅನಂತರ ಎಂದರೆ ಸಾಹಿತ್ಯ ಪರಿಷತ್ತಿನ ಪ್ರತಿಯ ೧೭ ನೆಯ ಸೂತ್ರವಾದ ಮೇಲೆ ಬಂದಿವೆ. ಈ ೧೭ನೆಯ ಸೂತ್ರವು ಯೋಗವಾಹಗಳ ಲಕ್ಷಣಗಳನ್ನೂ, ಅವುಗಳ ವಿವರಣೆಗಳನ್ನೂ ಹೇಳುತ್ತದೆ. ಯೋಗವಾಹಗಳನ್ನು ಹೇಳುವ ಸಂದರ್ಭದಲ್ಲಿ ಅನುಸ್ವಾರ ವಿಸರ್ಗಗಳ ವಿವರಣೆ ಇರಬೇಕಾದುದು ಅವಶ್ಯ. ಅದಲ್ಲದೆ ಈ ಸೂತ್ರಗಳಲ್ಲಿ ಪರಸ್ಪರ ಸ್ಥಾನಪಲ್ಲಟವಾದರೆ ಸಂಬಂಧವಿಚ್ಛಿತ್ತಿ ದೋಷದಿಂದ ವ್ಯಾಕರಣಪಾಠಕ್ಕೆ ಭಂಗವುಂಟಾಗುತ್ತದೆ. ಹೊಸ ಪ್ರತಿಯಲ್ಲಿಯಾದರೋ ಇಂಥ ದೋಷಕ್ಕೆ ಎಡೆಯಿಲ್ಲ. ಯೋಗವಾಹಗಳನ್ನು ಸ್ಪಷ್ಟಗೊಳಿಸುವ ಸಂದರ್ಭದಲ್ಲಿಯೇ ಇವುಗಳು ಬಂದಿರುವುದರಿಂದ ಪಾಠಕ್ರಮವು ಸರಿಯಾಗಿ ಹೊಂದಿಕೊಳ್ಳುತ್ತದೆ.

ಸಂಜ್ಞಾಪ್ರಕರಣವನ್ನು ವಿಷಯಪೃಥಕ್ಕರಣ ದೃಷ್ಟಿಯಿಂದ ಇಲ್ಲಿ ಸ್ವಲ್ಪಮಟ್ಟಿಗೆ ಪರ್ಯಾಲೋಚಿಸಬಹುದಾಗಿದೆ ಅಚ್ಚಾಗಿರುವ ಪ್ರತಿಗಳಲ್ಲಿ ಸ್ವಲ್ಪ ಹೆಚ್ಚುಕಡಮೆ ಸೂತ್ರಗಳ ಆನುಪೂರ್ವಿ ಈ ಕ್ರಮದಲ್ಲಿದೆ. ಸಾಹಿತ್ಯ ಪರಿಷತ್ತಿನ ಪ್ರಕಟನೆಯನ್ನು ಆಧರಿಸಿ ಹೀಗೆ ವಿಂಗಡಿಸಲಾಗುತ್ತದೆ.

**ಸೂತ್ರಗಳು:**— ೧ರಿಂದ ೫ರ ವರೆಗೆ ವರ್ಣಗಳ ವಿವರ
೫ರಲ್ಲಿ ಕುಳದ ವಿವರಣೆ
೬ರಿಂದ ೧೦ರ ವರೆಗೆ ಸ್ವರಗಳು
೧೧, ೧೨ರಲ್ಲಿ ಬಿಂದು ವಿಸರ್ಗಗಳು
೧೩, ೧೬ ವ್ಯಂಜನಗಳು
೧೭ ಯೋಗವಾಹ
೧೮, ೧೯ ಐ, ಔ, ಕುಳ, ಎ, ಒ.
೨೦, ೨೧, ೨೨ ರಲ್ಲಿ ಸಂಸ್ಕೃತ ಶಬ್ದಗಳಿಗೆ ಆದೇಶವಾಗಿ ಬರುವ ಐ ಔ, ಳಕಾರ ( ಕುಳ ) ವಿಚಾರ.

೨೩ ರಲ್ಲಿ ಕನ್ನಡದ ಸಹಜ ಱಟಗಳನ್ನುಳ್ಳ ಶಬ್ದಗಳನ್ನು ತಿಳಿಸುವ ಅಂಶ.

ಈ ಮಧ್ಯೆ ಱಟ ಅಕ್ಷರ ಶಬ್ದಗಳ ದೊಡ್ಡ ಪಟ್ಟಿ

೨೪, ಱ ೞ, ದಡ್ಡಕ್ಕರಗಳ ಪ್ರಾಸವಿಚಾರ

೨೫, ೨೬, ೨೭, ಕುಳ ಶಬ್ದಗಳ ಪಟ್ಟಿ

೨೮, ನಿತ್ಯಲಾಂತವಾದ ಶಬ್ದಗಳ ಪಟ್ಟಿ

೨೯, ಮರಲ್, ಆರಲ್, ಎರಲ್ ಇವುಗಳ ವರ್ಣಪಲ್ಲಟ

೩೦, ಶಬ್ದೋತ್ಪತ್ತಿಸ್ಥಾನ

೩೧ರಲ್ಲಿ ಕವಿಗಳು ಅಕ್ಷರಗಳನ್ನು ೫ ವಿಧವಾಗಿ ವಿಂಗಡಿಸುತ್ತಾರೆಂಬ ಮಾತು.

೩೨ರಲ್ಲಿ, ೧೪ ಸ್ವರಾಕ್ಷರಗಳು, ೨೫ ವರ್ಗಾಕ್ಷರಗಳು, ೯ ಅವರ್ಗಾಕ್ಷರಗಳು, ೪ ಯೋಗವಾಹಗಳು.

೩೩ರಲ್ಲಿ ಅಚ್ಚಗನ್ನಡದ ಶುದ್ಧಗೆಯ ಲೆಕ್ಕಾಚಾರ.

೩೧ ನೆಯ ಸೂತ್ರ ವರ್ಣಗಳನ್ನು ವಿಂಗಡಿಸುವ ಲಕ್ಷಣಸೂತ್ರವಾಗಿ ಎಲ್ಲವುಗಳಿಗೆ ಮೇಲೆ ಇರಬೇಕೆಂಬುದನ್ನು ಮೊದಲೆ ನಿರೂಪಿಸಲಾಗಿದೆ. ಕೊನೆಯ—ಎಂದರೆ ೩೨, ೩೩ ಸೂತ್ರಗಳು–ವರ್ಣಗಳ ಮೊತ್ತವನ್ನೂ, ವಿಭಜನೆಯನ್ನೂ ತಿಳಿಸುವ ಸಾರಾಂಶ ಸೂತ್ರಗಳು. ಈ ಪಟ್ಟಿಯನ್ನು ಅವಲೋಕಿಸಿದರೆ, ಈ ಎರಡು ಸೂತ್ರಗಳು ಸ್ವರ ವ್ಯಂಜನಗಳ ವಿಭಾಗಗಳನ್ನು ತಿಳಿಸುವ ಸೂತ್ರಗಳ ತರುವಾಯ ಎಷ್ಟು ದೂರ ಸಿಡಿದುಬಿದ್ದಿವೆ ಎಂಬುದು ಗೋಚರವಾಗದೆ ಇರದು. ಈ ಎರಡು ಸೂತ್ರಗಳು ಮತ್ತು ಹದಿನೇಳನೆಯ ಸೂತ್ರ, ಮಧ್ಯೆ ೧೫ ಸೂತ್ರಗಳು, ಱ ೞ ಶಬ್ದಗಳ ದೀರ್ಘ ಪಟ್ಟಿ ಬಂದು ವಿಷಯಗಳ ಸಂಬಂಧವನ್ನು ಕಡಿದುಬಿಟ್ಟಿವೆ. ಈ ಸಂಗ್ರಹ ಸೂತ್ರಗಳೂ, ೩೧ ನೆಯ ಸೂತ್ರವೂ ಸ್ಥಾನಪಲ್ಲಟವಾಗಿವೆಯೆಂಬುದರಲ್ಲಿ ಸಂದೇಹವಿಲ್ಲ. ಕೊನೆಯ ಈ ಎರಡು ಸೂತ್ರಗಳು ಯೋಗವಾಹ, ಬಿಂದು, ವಿಸರ್ಗಗಳ ಸೂತ್ರಗಳ ತರುವಾಯವಿದ್ದರೆ ಪಾಠದ ಅನುಕ್ರಮವು ನೇರವಾಗಿ ಸರಿಪಡುವುದು. ಹೊಸ ಪ್ರತಿಯ ಪಾಠದಂತೆ ಸೂತ್ರಾನುಪೂರ್ವಿಯನ್ನು ಹೀಗೆ ಇಟ್ಟುಕೊಂಡರೆ ಸೂಕ್ತವಾಗುವುದು.

| | 1 | 2 | 3 | 4 | 5 | 6 | 7 | 8 | 9 | 10 | 11 | 12 |
|---|---|---|---|---|---|---|---|---|---|---|---|---|
| *ಸೂತ್ರ: | ೧, | ೨, | ೩, | ೪, | ೫, | ೩೧, | ೭, | ೮, | ೯, | ೧೦, | ೧೩, | ೧೪, |
| | 1, | 14 | 15 | 16 | 17 | 18 | 19 | | | | | |
| | ೧೫, | ೧೬, | ೧೭, | ೧೧, | ೧೨, | ೩೨, | ೩೩. | | | | | |

* ಇಂಗ್ಲಿಷ್ ಅಂಕೆಗಳು ಹೊಸ ಸೂತ್ರಾನುಪೂರ್ವಿಯನ್ನೂ ಕನ್ನಡ ಅಂಕೆಗಳು ಅಚ್ಚಾದ ಪ್ರತಿಯ ಸೂತ್ರಗಳನ್ನೂ ಸೂಚಿಸುತ್ತವೆ.

ಈ ಪಾಠಕ್ರಮದಲ್ಲಿ ಅಕ್ಷರಮಾಲೆ ನಡುವೆ ಕಡಿಯುವುದಿಲ್ಲ. ಮುಂದಿನ ಪಾಠಾನುಕ್ರಮವು ಈ ಕೆಳಗಿನಂತಿದ್ದರೆ ಹೆಚ್ಚು ಸಮಂಜಸವಾಗುವುದು.

ಕನ್ನಡ ವರ್ಣಮಾಲೆಯ ವಿವರಣೆಯ ತರುವಾಯ ಕೇಶಿರಾಜನು ತನ್ನ ಕಾಲದಲ್ಲಿ ಶಕಟ ರೇಫ, ಱಟ ಮತ್ತು ಕುಳಗಳ ವಿಚಾರದಲ್ಲಿ ಹುಟ್ಟಿದ ಸಂದೇಹವನ್ನು ನಿವಾರಿಸಲು ಸೂತ್ರಗಳನ್ನು ರಚಿಸಿದಂತೆ ಕಂಡುಬರುತ್ತದೆ. ಱಕಾರ ಱಟಗಳ ಉಚ್ಚಾರಣೆಯ ವಿಷಯದಲ್ಲಿ ತನಗೆ ಸೂಕ್ತವೆಂದು ತೋರಿದಂತೆ ವಿಧಿಸಿದ್ದಾನೆ. ಹಾಗೆಯೇ ಅವುಗಳ ಪ್ರಾಸ, ವರ್ಣಾವೃತ್ತಿ—ಇವುಗಳನ್ನು ಸ್ಪಷ್ಟಗೊಳಿಸಿದ್ದಾನೆ. ಈ ಅಂಶವನ್ನು ಮುಂದೆ ವಿವರಿಸಲಾಗುವುದು. ಈ ಸೂತ್ರಗಳು ಹೊಸ ಅನುಕ್ರಮದಂತೆ ೧೯ ನೆಯ ಸೂತ್ರವಾದ ಮೇಲೆ ಬರಬೇಕು. ಹೊಸ ಪ್ರತಿ ಈ ಪಾಠಕ್ರಮುವನ್ನೇ ಅನುಸರಿಸಿದೆ. ಸಾಹಿತ್ಯ ಪರಿಷತ್ ಪ್ರತಿಯ ೧೮, ೧೯, ೨೬, ೨೭ ಸೂತ್ರಗಳು 20, 21, 22, 23 ನೆಯ ಸೂತ್ರಗಳಾಗಬೇಕು. ಕುಳ ಱಟಗಳನ್ನು ಹೇಳುವ ಸಂದರ್ಭದಲ್ಲಿಯೇ ಸಂಸ್ಕೃತ ಪದಗಳಿಂದ ಕೂಡಿದ, “ದಾಡಿಮುಮಾಕೂಷ್ಮಾಂಡಂ” ಎಂಬ ಸೂತ್ರವನ್ನೂ, ಇದರ ಮುಂದಿನ ೨೧, ೨೨ (24, 25) ಸೂತ್ರಗಳನ್ನೂ ಹೇಳಿದರೆ ಹೊಂದಿಕೊಳ್ಳುತ್ತವೆ. ಆ ಕೂಡಲೇ ಱಟ ಅಕ್ಷರಗಳನ್ನು ನಿರ್ಣಯಿಸುವ ೨೩ (26) ಸೂತ್ರವೂ, ಶಬ್ದಗಳ ಪಟ್ಟಿಯೂ ಬರಬೇಕು. ಅಲ್ಲಿಂದ ಱಟ ದ್ವಿತ್ವಕ್ಕೂ, ರೇಫ ದ್ವಿತ್ವಕ್ಕೂ ಆಗುವ ಪ್ರಾಸವನ್ನು ಕುರಿತ ಸೂತ್ರ ೨೪ (27). ಆ ಮೇಲೆ ಱಟ ಸಂದೇಹವನ್ನು ಹೇಳುವಸೂತ್ರ ೨೫ (28). ಇವುಗಳ ತರುವಾಯ ನಿತ್ಯಲಕಾರಯುಕ್ತ ಶಬ್ದಗಳಿಗಾಗಿ ಹೇಳಿದ ಸೂತ್ರಗಳು ೨೮, ೨೯ (29–30). ಆ ಮೇಲೆ ಶಿಥಿಲ ದ್ವಿತ್ವವನ್ನು ಹೇಳುವ ನಾಲ್ಕು ಸೂತ್ರಗಳು ೪೨, ೪೩, ೪೪, ೪೫ (31, 32, 33, 34). ನಿಜಬಿಂದುವಿನ ಶಬ್ದಗಳ ಸೂತ್ರ ೩೬ (35), ರೇಫೆಯಿಂದ ಕೂಡಿರುವ ಶಬ್ದಗಳ ಸೂತ್ರಗಳು ೩೭, ೩೮, ೩೯, ೪೦, ೪೧ (36, 37, 38, 39, 40). ಕೊನೆಯಲ್ಲಿ ಕೆಲವು ಶಬ್ದಗಳ ವೈಶಿಷ್ಟ್ಯವನ್ನು ಹೇಳುವ ಸೂತ್ರಗಳು ೪೬, ೪೭, ೪೮ (41, 42, 43). ಸೂತ್ರ ೪೯, ೫೦ ಸಂಧಿ ವಿಷಯವನ್ನು ಹೇಳುವುದರಿಂದ ಮುಂದಿನದಾದ ಸಂಧಿಪ್ರಕರಣಕ್ಕೆ ಸೇರಬೇಕಾದುವು. ಈ ಅನುಕ್ರಮುವನ್ನು ಹೊಸಪ್ರತಿಯಲ್ಲಿ ಇರುವಂತೆ ಸುಮಾರಾಗಿ ಅದನ್ನೇ ಆಧರಿಸಿ ಹೇಳಿದೆ. ಆದರೆ ಹೊಸಪ್ರತಿಯಲ್ಲಿ ‘ನರವುಂ ನೆರವುಂ’ ಎಂದು ಮೊದಲಾಗುವ ಸೂತ್ರವು ಶಿಥಿಲದ್ವಿತ್ವವನ್ನು ಹೇಳುವ ಸೂತ್ರಗಳ ತರುವಾಯ ಬಂದಿದೆ. ಸಾಹಿತ್ಯಪರಿಷತ್ಪ್ರತಿಯ ಅನುಕ್ರಮು ಇಲ್ಲಿ ಸರಿಯೆಂದು ಕಾಣುವುದು. ಏಕೆಂದರೆ ಈ ಸೂತ್ರವು ಕೆಲವು ಶಬ್ದಗಳ ವಿಶಿಷ್ಟತೆಯನ್ನು ತಿಳಿಸುತ್ತದೆ. ಇದರ ಮುಂದಿನ ಸೂತ್ರಗಳೂ ಇಂಥವುಗಳೇ ಆಗಿವೆ. ಆದ್ದರಿಂದ ಇವುಗಳನ್ನೆಲ್ಲ ಒಟ್ಟಿಗೆ ಇಟ್ಟುಕೊಳ್ಳುವುದು ಉಚಿತ. ವಿಭಕ್ತ್ಯರ್ಥವನ್ನು ಹೇಳುವ ಸೂತ್ರವು ಹೊಸಪ್ರತಿಯಲ್ಲಿ ಲಕಾರವನ್ನುಳ್ಳ ಶಬ್ದಗಳನ್ನು ಹೇಳುವ ಸೂತ್ರಗಳ ತರುವಾಯ ಬಂದಿದೆ. ಸಂಧಿಪ್ರಕರಣಕ್ಕೆ ಸೇರಬೇಕಾದ ಸೂತ್ರಗಳೂ ಹೊಸ ಪ್ರತಿಯಲ್ಲಿ ಸಾಹಿತ್ಯ

ಪರಿಷತ್ಪ್ರಕಟನೆಯಲ್ಲಿರುವಂತೆ ಸಂಜ್ಞಾ ಪ್ರಕರಣದ ಕೊನೆಯಲ್ಲಿವೆ. ಪ್ರಾಯಶಃ ಕೇಶಿರಾಜನು ಈ ಸೂತ್ರಗಳನ್ನು ಹೇಳುವ ಮೂಲಕವಾಗಿ ಮುಂದಿನ ಸಂಧಿ ಪ್ರಕರಣವನ್ನು ಸೂಚಿಸಿರಬೇಕೇನೋ ? ಅಥವಾ ಲೇಖಕರ ದೃಷ್ಟಿದೋಷದಿಂದ ಸಂಧಿಪ್ರಕರಣದ ಆರಂಭದಲ್ಲಿರಬೇಕಾದ ಈ ಸೂತ್ರಗಳು ಹಿಂದಕ್ಕೆ ಉಲ್ಲಿಖಿತವಾಗಿರಲೂಬಹುದು.

**ವರ್ಣೋತ್ಪತ್ತಿಸ್ಥಾನಗಳು**

ಹೊಸಪ್ರತಿಯಲ್ಲಿ ಅಕ್ಷರಗಳನ್ನು ಹೇಳುವ ಮುನ್ನ ಆಯಾ ಅಕ್ಷರಗಳು ಎಲ್ಲೆಲ್ಲಿ ಹುಟ್ಟುತ್ತವೆ ಎಂಬುದನ್ನು ಹೇಳಿದೆಯಾದುದರಿಂದ ಅಲ್ಲಿನ ಅಂಶಗಳನ್ನಿಲ್ಲಿ ಮುದ್ರಿತ ಪ್ರತಿಗಳ ಪಾಠಗಳೊಡನೆ ಹೋಲಿಸಿ ವಿಚಾರಮಾಡಿದೆ. ಹೊಸ ಪ್ರತಿಯ ಆರಂಭಪ್ರಕರಣಗಳಲ್ಲಿ ವ್ಯಾಖ್ಯಾನವು ತಕ್ಕಮಟ್ಟಿಗೆ ವಿಸ್ತರವಾಗಿಯೇ ಇದೆ. ಈ ವ್ಯಾಖ್ಯಾನವನ್ನು ಬರೆದಾತನು ತನ್ನ ಹೆಸರನ್ನು ಎಲ್ಲಿಯೂ ಹೇಳಿಕೊಂಡಿಲ್ಲ. ಈ ಪ್ರತಿಯಲ್ಲಿ ಕೆಲವು ಹೆಚ್ಚಿನ ಸೂತ್ರಗಳೂ ದೊರೆಯುತ್ತವೆ. ಈ ಸೂತ್ರಗಳು ಬೇರೆ ಮುದ್ರಿತ ಪ್ರತಿಗಳಾವುವುಗಳಲ್ಲಿಯೂ ಇಲ್ಲದಿರುವುದರಿಂದ ಈ ವ್ಯಾಖ್ಯಾನಕಾರನೇ ಈ ಸೂತ್ರಗಳನ್ನು ಬರೆದು ಅಲ್ಲಲ್ಲಿ ಸೇರಿಸಿರಬಹುದೇನೋ ಎಂಬ ಸಂದೇಹ ಬರುವ ಹಾಗಿದೆ. ಸೂತ್ರಗಳ ಭಾಷೆಯನ್ನು ನೋಡಿದರೆ ಕೇಶಿರಾಜನೇ ಇವುಗಳನ್ನು ಬರೆದಿರಬೇಕು ಎನ್ನಿಸುವುದು. ಈ ಸೂತ್ರಗಳಿಗೆ ವೃತ್ತಿಯೂ, ಅವಶ್ಯವಾದೆಡೆಯಲ್ಲಿ ಪ್ರಯೋಗಗಳೂ ದೊರೆಯುತ್ತವೆ. ಕೇಶಿರಾಜನೇ ವೃತ್ತಿ ಬರೆದಿರುವನೆಂದು ಇಟ್ಟುಕೊಂಡರೆ ಹೊಸ ಸೂತ್ರಗಳನ್ನೂ, ಅವುಗಳ ವೃತ್ತಿಗಳನ್ನೂ ಅವನೇ ಬರೆದಿರಬೇಕೆಂದು ಹೇಳಬೇಕಾಗುತ್ತದೆ. ಅಥವಾ ಸೂತ್ರ ವೃತ್ತಿಗಳೆರಡನ್ನೂ ವ್ಯಾಖ್ಯಾನಕಾರನೇ ಬರೆದಿರುವನೆಂದು ಹೇಳವುದಾದರೆ ಪ್ರಯೋಗಗಳನ್ನು ಅವನೇ ಬೇರೆಗ್ರಂಥಗಳಿಂದ ಕೇಶಿರಾಜನು ಎತ್ತಿಕೊಂಡಿರುವಂತೆ ತೆಗೆದುಕೊಂಡಿದ್ದಾನೆಂದು ಗ್ರಹಿಸಬೇಕಾಗುತ್ತದೆ. ಆದರೆ ಈ ವಿಷಯವನ್ನು ಈಗಲೇ 'ಇದಮಿತ್ಥಂ' ಎಂದು ಹೇಳಲು ಹೆಚ್ಚುಸಾಧನಗಳೂ ಪ್ರಮಾಣಗಳೂ ಉಪಲಬ್ಧವಾಗಿಲ್ಲ. ಒಂದೊಂದೆಡೆಯಲ್ಲಿಯ ವೃತ್ತಿಯ ಪಾಠಕ್ರಮವನ್ನವಲೋಕಿಸಿದರೆ ಈ ವಾಖ್ಯಾನಕಾರನೇ ಕೇಶಿರಾಜನ ಸೂತ್ರಗಳಿಗೆ ವೃತ್ತಿ ಬರೆದನೇನೋ ಎಂಬ ಸಂದೇಹಕ್ಕೂ ಆಸ್ಪದವಾಗುವಹಾಗಿದೆ. ಇದನ್ನು ಸಂದರ್ಭೋಚಿತವಾಗಿ ಮುಂದೆ ಹೇಳಲಾಗುವುದು. ಈಗ ವರ್ಣೋತ್ಪತ್ತಿ ಸ್ಥಾನಗಳನ್ನು ಕುರಿತು ವಿಚಾರಮಾಡಬಹುದು. ಕಿಟಲ್ ಅವರ ಮುದ್ರಣದಲ್ಲಿಯೂ, ಸಾಹಿತ್ಯ ಪರಿಷತ್ತಿನ ಮುದ್ರಣದಲ್ಲಿಯೂ, ಮದ್ರಾಸಿನ ಪ್ರಕಟನೆಯಲ್ಲಿಯೂ ಒಂದು ಸೂತ್ರ ಮಾತ್ರ ವರ್ಣೋತ್ಪತ್ತಿ ಸ್ಥಾನವನ್ನು ಪ್ರತಿಪಾದಿಸುತ್ತದೆ. ಮೊದಲ ಎರಡರ ವೃತ್ತಿಯಾದರೋ ಬಹು ಸಂಕ್ಷೇಪವಾಗಿದೆ, ಇತರ ಸೂತ್ರಗಳಿಗಿರುವಷ್ಟು ಸ್ಪಷ್ಟೀಕರಣವನ್ನೂ ಈ ವೃತ್ತಿಮಾಡುತ್ತಿಲ್ಲ. ಬರಿ

'ಈ ಪೇೞ್ದೆಂಟೆಡೆಯೊಳ್ ಅಕ್ಕರಂಗಳ್ ಪುಟ್ಟುಗುಂ; ಅವಱೊಳೇಕಸ್ಥಾನೀಯಂಗಳನಱಿದು, ವರ್ಣಾವೃತ್ತಿಯಂ ಮಾಳ್ಪುದು.' ಎಂದು ಇದೆ. ಇಲ್ಲಿ ಆ

ಎಂಟು ಸ್ಥಾನಗಳಲ್ಲಿ ಹುಟ್ಟುವ ಅಕ್ಷರಗಳಾವುವೆಂಬುದರ ವಿವರಣೆಯಿಲ್ಲದೆ ಇರುವುದರಿಂದ ವ್ಯಾಕರಣಾಭ್ಯಾಸಿಗಳಿಗೆ ಬೇರೆ ವ್ಯಾಕರಣಗಳ ಮೊರೆ-ಹೊಗಬೇಕಾಗುತ್ತದೆ. ಅಲ್ಲದೆ ಸಂಸ್ಕೃತಾಕ್ಷರಗಳ ಜೊತೆಗೆ ಕನ್ನಡದ ಅಕ್ಷರಗಳೂ ಇರುವುದರಿಂದ ಅವುಗಳ ಹುಟ್ಟನ್ನರಿವುದು ದುಸ್ತರವಾಗುತ್ತದೆ. ಲಿಂಗಣಾರಾಧ್ಯನ ಪ್ರತಿಯಲ್ಲಿ ಈ ಎಂಟು ಸ್ಥಾನಗಳಲ್ಲಿ ಹುಟ್ಟುವ ಅಕ್ಷರಗಳು ಉಕ್ತವಾಗಿವೆ. ಅಲ್ಲದೆ ಆ ವೃತ್ತಿಯಲ್ಲಿ ಸೂತ್ರದಲ್ಲಿ ಹೇಳಿದ ಎಂಟು ಸ್ಥಾನಗಳ ಪುನರುಕ್ತಿಯೂ ಇದೆಯಲ್ಲದೆ "ಪಾಠಕ್ರಮಾದರ್ಥಕ್ರಮೋಬಲೀಯಾನ್ ಎಂದು ಅನ್ವಯಮುಂ ಪೇೞ್ದಂ," ಎಂದು ಅನ್ವಯದ ಗುಣವನ್ನು ಹೇಳಿದೆ. ಹೊಸಪಾಠದ ವೃತ್ತಿ ಎಷ್ಟು ಸ್ಪಷ್ಟವಾಗಿದೆ ನೋಡಿ.

ವೃತ್ತಿ:—

ಕೊರಲೊಳಂ, ನಾಲಗೆಯ ಮೊದಲೊಳಂ, (ಜಿಹ್ವಾಮೂಲವೆಂಬುದಕ್ಕೆ ಇದು ಅರ್ಥ) ಉರದೊಳಂ; ತಾಳುಗೆಯೊಳಂ, ಅಧರದೊಳಂ, ಮಸ್ತಕದೊಳಂ, (ಇಲ್ಲಿನಾಸಿಕೆ, ದಂತ ಎರಡು ಬಿಟ್ಟುಹೋಗಿವೆ) ಈ ಎಂಟುತಾಣದೊಳಂ ಅಕ್ಕರಂ ಪುಟ್ಟುಗುಂ.

ಈ ವೃತ್ತಿ ಮುದ್ರಿತ ಪ್ರತಿಗಳಲ್ಲಿ ಇಲ್ಲವಾದುದರಿಂದ ಇದನ್ನು ಕೇಶಿರಾಜನು ಬರೆದನೋ, ವ್ಯಾಖ್ಯಾನಕಾರನು ಬರೆದನೋ ಹೇಗೆ ನಿರ್ಧರಿಸುವುದು?

ಇದಾದ ಮೇಲೆ ಒಂದು ಸೂತ್ರವಿದೆ. ಇಲ್ಲಿ ಆ ಸೂತ್ರದ ವೃತ್ತಿಯನ್ನು ಮಾತ್ರ ಎತ್ತಿಬರೆದಿದೆ.

ವೃತ್ತಿ:—

(೧) ತರದಿಂದಕಾರಮುಂ, ಕವರ್ಗಮುಂ, ಹಕಾರಮುಂ, ವಿಸರ್ಗಮುಂ, ಕೊರಲೊಳ್ ಪುಟ್ಟುಗುಂ

(೨) ಮತ್ತೆ ಅ×ಕಮೆಂಬಿದೊಂದು ಜಿಹ್ವಾಮೂಲದೊಳಕ್ಕುಮುದಂ ಜಿಹ್ವಾಮೂಲಿ ಎಂಬುದು

(೩) ಹಕಾರಮುಂ ವಿಸರ್ಗಮುಮುರದೊಳ್ ಪುಟ್ಟುಗುಂ

(೪) ಏತ್ವಮುಂ, ಐತ್ವಮುಂ, ಇ ಈ ಎಂಬಿವುಂ, ಚವರ್ಗ್ಗಮುಂ, ಯತ್ವಮುಂ, ಶಕಾರಮುಂ ತಾಲವ್ಯಂಗಳ್.

ಇಲ್ಲಿ ಮತ್ತೊಂದು ಸೂತ್ರವಿದೆ. ಅದರ ವೃತ್ತಿ ಹೀಗೆ.

ವೃತ್ತಿ:—

(೫) ಪವರ್ಗಮುಂ, (ಉ) ಪಧ್ಮಾನೀಯಮುಂ, ಉಕಾರ, ಊಕಾರ, ಓಕಾರ, ಔಕರಮಿವುಂ ತುಟಿಯೊಳ್ ಪುಟ್ಟುಗುಂ.

(೬) ಙ, ಞ, ಣ, ನ, ಮಂಗಳುಂ, ಬಿಂದುವುಂ (ಅನು) ನಾಸಿಕೆಗಳ್

(೭) ಋಌ ಎಂಬಿವುಂ, ಟವರ್ಗ್ಗಮುಂ, ರತ್ವಮುಂ, ಷಕಾರಮುಂ ಮೂರ್ಧನ್ಯಂಗಳ್.

ಅಲ್ಲಿ ಜಿಹ್ವಾಮೂಲೀಯಕ್ಕಂ (ಉ)ಪಧ್ಮಾನೀಯಕ್ಕಂ ಲಕ್ಷಣಂ ಮುಂದೆ ಪೇೞಲ್ಪಡುಗುಂ.

ಇದಾದ ಮೇಲೆ ಮತ್ತೊಂದು ಸೂತ್ರವನ್ನು ಹೇಳಿ ಈ ವಿಷಯವನ್ನು ಮುಗಿಸಿದೆ.

ಸೂತ್ರವೃತ್ತಿ ಹೀಗಿದೆ:—

(೨) ಌ ೡ ಎಂಬಿವುಂ ಲಕಾರ ಸಕಾರ ತವರ್ಗ್ಗಂಗಳುಂ ದಂತ ವ್ಯಂಗಳ್. ಪಿರಿದುಮೆಂಬುದಱಿಂದುಕಾರಮೂಕಾರಂ ಮೇಗಣ ತುಟಿ ಯೊಳ್, ವತ್ವಂ ದಂತೋಷ್ಠದೊಳ್, ಯಕಾರಂ ಹೃದಯದೊಳ್, ಅಕಾರಂ ಸರ್ವಪ್ರದೇಶದೊಳ್ ಪುಟ್ಟುಗುಂ.

ಇದರ ಪಟ್ಟಿಹಾಕಿದರೆ ಈ ಮುಂದಿನಂತೆ ಏರ್ಪಡುವುದು.

(೧) ಕೊರಲಲ್ಲಿ:—ಅ, ಆ, ಕವರ್ಗ, ಹಕಾರ ವಿಸರ್ಗಗಳು.
(೨) ಜಿಹ್ವಾಮೂಲದಲ್ಲಿ:—ಅx ಕ
(೩) ಉರದಲ್ಲಿ:—ಹಕಾರ, ವಿಸರ್ಗ
(೪) ತಾಲವ್ಯ:—ಏ, ಐ, ಇ, ಈ, ಕವರ್ಗ, ಯ, ಶಗಳು.
(೫) ತುಟಿಯಲ್ಲಿ:— ಪವರ್ಗ, ಉಪಧ್ಮಾನೀಯ, ಉಊಕಾರಗಳು ಓ ಔ ಕಾರಗಳು.
(೬) ನಾಸಿಕೆಯಲ್ಲಿ:— ಙ್, ಞ್, ಣ್, ನ್, ಮ್, ಮತ್ತು ಬಿಂದು
(೭) ಮೂರ್ಧನ್ಯ:— ಋ ೠ, ಟವರ್ಗ, ರೇಫೆ, ಷಕಾರಗಳು.
(೮) ದಂತವ್ಯ:— ಌ ೡ, ಲಕಾರ, ಸಕಾರ, ತವರ್ಗ
(೯) ದಂತೋಷ್ಠ:— ವತ್ವ.
(೧೦) ಮೇಗಣತುಟಿ:— ಉ ಊ ಕಾರಗಳು.
(೧೧) ಹೃದಯ:— ಯಕಾರ.
(೧೨) ಸರ್ವಪ್ರದೇಶ:— ಅಕಾರ.

ಲಿಂಗಣಾರಾಧ್ಯನ ಗ್ರಂಥದಲ್ಲಿ ಹೇಳದೆ ಇರುವ ಹೆಚ್ಚಿನ ಅಂಶಗಳನ್ನು ಇಲ್ಲಿ ತಾವು ಗಮನಿಸಿರಬೇಕು.

ಏ ಐ ಗಳು ಶುದ್ಧ ತಾಲವ್ಯದಲ್ಲಿಯೂ, ಓ ಔ ಗಳು ತುಟಿಯಲ್ಲಿಯೂ ಹುಟ್ಟುವುವು ಎಂದು ಈ ಪ್ರತಿ ಹೇಳುವುದು. ಉ ಊ ಕಾರಗಳು ಮೇಗಣ ತುಟಿ ಯಲ್ಲಿಯೂ ಹುಟ್ಟುತ್ತವೆ. ಹೃದಯದಲ್ಲಿ ಹುಟ್ಟುವ ಅಕ್ಷರಗಳ ಜೊತೆಗೆ ಯಕಾ ರವೂ ಸೇರುತ್ತಪೆಂಬ ವಿಷಯ ಹೊಸದು. ಮುಂದೆ ಸಾಹಿತ್ಯ ಪರಿಷತ್ಪ್ರತಿಯ ೧೩ ನೆಯ ಸೂತ್ರಕ್ಕೆ ಸರಿಹೋಗುವ ವೃತ್ತಿಯಲ್ಲಿ “ ಯ ಕಾರಾದಿ ಳ ಕಾರಂಬರೆ ಗಮವರ್ಗ್ಗಂ ಯ ರ ಲ ವಮಂತಸ್ಥಮೆನಿಪುವು ” ಎಂದು ಹೊಸ ಪ್ರತಿಯಲ್ಲಿ ಹೇಳಿದೆ. ಹಾಗೆಯೇ ಅಕಾರವು ಸರ್ವಪ್ರದೇಶೀಯವೆಂಬುದು ಇದರಲ್ಲಿ ತುಂಬ ನವೀನವಾಗಿದೆ. ಅಕಾರವು “ಸರ್ವಮುಖಸ್ಥಾನ” ವೆಂಬುದು ಸಂಸ್ಕೃತ ವ್ಯಾಕರಣ

ಗಳಿಗೆ ಪರಿಚಿತವಾದುದಾಗಿದ್ದರೂ, ಕನ್ನಡ ವ್ಯಾಕರಣಗಳಲ್ಲಿ ಈ ವಿಷಯದ ವಿವರಣೆ ಇರಲಿಲ್ಲ. ಲಿಂಗಣಾರಾಧ್ಯನು ಸೂಚಿಸಿದ್ದು ಇತ್ತೀಚೆಗೆ. ಮೇಲಿನ ವೃತ್ತಿಯಲ್ಲಿ "ಜಿಹ್ವಾ ಮೂಲೀಯಕ್ಕಂ (ಉ) ಪಧ್ಮಾನೀಯಕ್ಕಂ ಲಕ್ಷಣಂ ಮುಂದೆ ಪೇೞಲ್ಪಡೆಗುಂ" ಎಂಬ ನಿರ್ದೇಶದಿಂದ ಕೇಶಿರಾಜನು ಮುಂದೆ ಹೇಳಲಾಗುವ ಸಾಹಿತ್ಯ ಪರಿಷತ್ಪ್ರತಿಯ ೧೭ ನೆಯ ಸೂತ್ರವನ್ನು ಸೂಚಿಸಿದ್ದಾನಾದ್ದರಿಂದ ಈ ಸೂತ್ರಗಳನ್ನೂ ಅವನೇ ಬರೆದಿರಬಹುದೆಂದು ಹೇಳಬೇಕಾಗಿದೆ ಅದಿರಲಿ. ವರ್ಣೋತ್ಪತ್ತಿಯ ವಿಚಾರವಾಗಿ ಇಷ್ಟು ವಿಸ್ತರದಿಂದ ಕೇಶಿರಾಜನು ಬರೆದಿದ್ದರೂ ಶಬ್ದಾನುಶಾಸನ ಪ್ರಕಟವಾಗುವ ವರೆಗೆ ಕನ್ನಡಿಗರಿಗೆ ಈ ಅಕ್ಷರಗಳು ಹುಟ್ಟುವ ರೀತಿ ಸರಿಯಾಗಿ ಗೊತ್ತಿರಲಿಲ್ಲವೆಂದು ಹೇಳಬೇಕಾಗುತ್ತದೆ. ಸಂಸ್ಕೃತ ವ್ಯಾಕರಣಗಳ ಆಧಾರದಿಂದ ಇವುಗಳು ಉಕ್ತವಾಗಿರುವುವಾದರೂ ಇವುಗಳ ಸ್ಪಷ್ಟೀಕರಣವು ಕನ್ನಡ ವ್ಯಾಕರಣಗಳಲ್ಲಿ ಅಗತ್ಯವಾಗಿ ಬೇಕು. ಇಲ್ಲಿ ಒಂದು ಅಂಶವನ್ನು ಸ್ಪಷ್ಟ ಮಾಡಬಹುದು. ಕನ್ನಡ ಕೈಪಿಡಿಯಲ್ಲಿ ಕನ್ನಡದ ಅಕ್ಷರಗಳಾದ ಎ, ಒ ಗಳು ಎಲ್ಲಿ ಹುಟ್ಟಬಹುದು ಎಂಬುದನ್ನು ಸೂಚಿಸಲಾಗಿದೆ. ಇಲ್ಲಿ ಏ ಐ, ಓ ಔ ಗಳು ಶುದ್ಧ ತಾಲವ್ಯ, ಓಷ್ಠ್ಯಗಳೆಂದು ಹೇಳಿರುವುದರಿಂದ ಎ, ಒ ಗಳೂ ಅಲ್ಲಿಯೇ ಹುಟ್ಟುವುವೆಂಬುದನ್ನು ಸೂಚಿಸಿದಂತಾಗಿದೆ. ಆದ್ದರಿಂದ ಕೈಪಿಡಿಯಲ್ಲಿ ಶ್ರೀಮಾನ್ ಟಿ. ಎಸ್. ವೆಂಕಣ್ಣಯ್ಯನವರು ಊಹಿಸಿ ಹೇಳಿದ ಮಾತು ಸತ್ಯವಾದಂತಾಗಿದೆ.

## ಕುಳಪ್ರಾಸವಿಚಾರ

ಈಗ ಅಚ್ಚಾಗಿರುವ ಶಬ್ದಮಣಿದರ್ಪಣದ ಪಾಠಗಳಲ್ಲಿ ಕುಳ ಕ್ಷಳಗಳ ವಿಚಾರದಲ್ಲಿ ಅಸ್ಪಷ್ಟತೆಯಿದೆ ವೃತ್ತಿಗಳೂ ಒಂದಕ್ಕೊಂದು ವ್ಯತ್ಯಸ್ತವಾಗಿರುವುವಲ್ಲದೆ ಈ ವಿಷಯವಾಗಿ ವಿಚಾರದಲ್ಲಿ ಹೊಯ್ದಾಟವಿದ್ದಂತೆ ಕಂಡುಬರುತ್ತದೆ. ವೃತ್ತಿಯ ಅಭಿಪ್ರಾಯಕ್ಕೂ, ಪ್ರಯೋಗೋದಾಹರಣೆಗಳಿಗೂ ತಾಳಮೇಳವಿಲ್ಲ. ಕೇಶಿರಾಜನ ಸೂತ್ರವು ವೃತ್ತಿಯ ಸಹಾಯವಿಲ್ಲದೆ ತಟ್ಟನೆ ಅರ್ಥವಾಗುವುದಿಲ್ಲ. ಪ್ರಯೋಗಗಳನ್ನು ನೋಡಿದರೆ ವೃತ್ತಿಯಲ್ಲಿ ಹೇಳಿದುದು ಬೇರೆ, ಪ್ರಯೋಗ ಬೇರೆ ಎಂದು ಕಂಡುಬರುತ್ತದೆ. ಆದ್ದರಿಂದ ಸರಿಯಾದ ಪಾಠ ಯಾವುದು, ಅರ್ಥಸುಭಗವಾಗುವ ಪಾಠವಾವುದು ಎಂಬುದನ್ನು ಆಲೋಚಿಸಬೇಕಾಗಿದೆ. ಇದು ಮೂಲ ಸೂತ್ರ.

ಕುಳದ ನಿಯಾಮದೊಳೆಂದುಂ ।
ಕ್ಷಳಕ್ಕೆ ಲಾಕ್ಷರ ವಿಕಲ್ಪಮಿಲ್ಲ ವಿಕಲ್ಪಂ ॥
ಕ್ಷಳನಲ್ಲದಿಲ್ಲ ಸಂಸ್ಕೃತ ।
ದೊಳಾಲಕಾರಕ್ಕೆ ಪೇೞ್ದ್ವೆನದಱಿಂ ಕ್ಷಳನಂ ॥ ಸಾ. ಪ. ಸೂ. ೫.

ಲಿಂಗಣಾರಾಧ್ಯನ ಪ್ರತಿಯಲ್ಲಿ 'ಪೇೞ್ದ್ವೆನ್' ಎಂಬುದರ ಸ್ಥಾನದಲ್ಲಿ ಪೇೞ್ವೆನ್ ಎಂಬ ಪಾಠವಿದೆ.

ಎಲ್ಲಾ ಪ್ರತಿಗಳಲ್ಲಿಯೂ 'ಪೇೞ್ದಿನ್' ಎಂಬ ಭೂತಕಾಲ ಪ್ರಯೋಗವಿರುವುದರಿಂದ 'ಪೇೞ್ವಿನ್' ಎಂಬುದಕ್ಕೆ ಬದಲಾಗಿ ಪೇೞ್ದಿನ್ ಎಂಬ ಪಾಠವನ್ನು ಅಂಗೀಕರಿಸುವುದೇ ಸೂಕ್ತವೆಂದು ಕಾಣುವುದು. ಅಲ್ಲದೆ ಭೂತಕಾಲ ಪ್ರಯೋಗದಿಂದ ಕಾರ್ಯದ ಪೂರ್ಣತೆ ಅಭಿವ್ಯಕ್ತವಾಗುತ್ತದೆ. ಈ ಸೂತ್ರದ ಆರಂಭದ ಮೂರು ಚರಣಗಳಲ್ಲಿ ಕುಳಕ್ಷಳಗಳ ಪ್ರಾಸದ ಪ್ರಸಕ್ತಿ ಬಂದಿರುವುದರಿಂದ ಕೇಶಿರಾಜನು ಆದನ್ನು ಪೇೞ್ದಿನ್ ಎಂದು ಭೂತಾರ್ಥದಲ್ಲಿ ಬರೆದಿರಬೇಕು. ಪೇೞ್ವಿನ್ ಎಂಬ ಭವಿಷ್ಯತ್ಪ್ರಯೋಗವು ಮುಂದೆ ಹೇಳಲಾಗುವ ವೃತ್ತಿ ಪ್ರಯೋಗಗಳ ವಿಷಯವನ್ನು ಕುರಿತದ್ದು ಎಂದು ಹೇಳುವುದು ಯುಕ್ತವಾಗಲಾರದು.

ಸಾಹಿತ್ಯ ಪರಿಷತ್ತಿನ ಪ್ರಕಟನೆಯ ವೃತ್ತಿಯು "ಕುಳಪ್ರಾಸಮೂಗೆ ಪೇೞ್ದ ಕಬ್ಬಂ ಸೆಱೆಗೆಯ್ವುದಾಗಿ" ಎಂಬ ಪಾಠದಲ್ಲಿ ಏನನ್ನು ಎಂಬ ಪ್ರಶ್ನೆಯುಂಟಾಗುವುದರಿಂದ ಅಲ್ಲಿ ಕ್ಷಳನಂ ಎಂಬ ಪದ ಬಿಟ್ಟುಹೋಗಿದೆ. ಪ್ರಾಯಶಃ ಇದು ಅಚ್ಚಿನ ತಪ್ಪಿರಬೇಕು.

ಮೊದಲು ಈ ಸೂತ್ರವನ್ನು ಒಡೆದು ವಾಕ್ಯಗಳನ್ನು ಬಿಡಿಸಿ ನೋಡಬೇಕು

ಕುಳದ ನಿಯಾಮದೊಳ್ ಕ್ಷಳಕ್ಕೆ ಲಾಕ್ಷರವಿಕಲ್ಪಂ ಎಂದುಂ ಇಲ್ಲ ಕ್ಷಳಂ ಅಲ್ಲದೆ ವಿಕಲ್ಪಂ ಇಲ್ಲ. ಅದಱಿಂ ಸಂಸ್ಕೃತದೊಳ್ ಆಲಕಾರಕ್ಕೆ ಕ್ಷಳನಂ ಪೇೞ್ದಂ. ಎಂದು ಅನ್ವಯ ಕ್ರಮವನ್ನಿಟ್ಟುಕೊಂಡು ಅರ್ಥವನ್ನು ಹೇಳಿದರೆ, ಕುಳದ ಪ್ರಾಸಕ್ಕೆ ಕ್ಷಳವನ್ನಲ್ಲದೆ ಲಕಾರವನ್ನಿಡಕೂಡದು. ಕ್ಷಳಂ ಅಲ್ಲದೆ ವಿಕಲ್ಪಂ ಇಲ್ಲ. ಅದರಿಂದ ಸಂಸ್ಕೃತದಲ್ಲಿ ಆ ಲಕಾರಕ್ಕೆ ಕ್ಷಳವನ್ನು ಹೇಳಿದೆ ಎಂದು ಅಭಿಪ್ರಾಯವಾಗುವುದು. ಇಲ್ಲಿ 'ಕ್ಷಳಂ ಅಲ್ಲದೆ ವಿಕಲ್ಪಂ ಇಲ್ಲ' ಎಂಬುದು ಸುಲಭಗ್ರಾಹ್ಯವಾಗಿಲ್ಲ. ಕ್ಷಳ ಅಲ್ಲದೆ ವಿಕಲ್ಪವಿಲ್ಲ ಎಂಬ ಮಾತಿಗೆ ಕ್ಷಳವನ್ನಿಟ್ಟುಕೊಳ್ಳಬೇಕೆಂದು ಅರ್ಥವನ್ನು ಹೇಳಬೇಕಾಗುತ್ತದೆ. ಇದು ಮೇಲಿನ ಮಾತನ್ನೇ ಮತ್ತೆ ಹೇಳಿದಂತೆ ಆಯಿತು ವೃತ್ತಿಯಲ್ಲಿ "ಲಕಾರ ಪ್ರಾಸಮಾಗಿ ಪೇೞ್ದ ಕನ್ನಡ ಕಬ್ಬದೊಳ್ ಕ್ಷಳನಂ ವಿಕಲ್ಪದಿಂ ಇರಿಸಬಾರದು" ಎಂಬ ವಿವರಣೆ ಇದೆ. ಎಂದರೆ ಲ ಕಾರಕ್ಕೆ ಲಕಾರವನ್ನೇ ಪ್ರಾಸವಾಗಿಡಬೇಕು, ವಿಕಲ್ಪವಾಗಿ ಕ್ಷಳವನ್ನಿಡಬಾರದು ಎಂದಿದರಭಿಪ್ರಾಯ. ಆದರೆ ಕಿಟಲ್ ಅವರ ಪ್ರಯೋಗದಲ್ಲಿ,

ಲಕಾರಕ್ಕೆ ಕ್ಷಳನನಿರಿಸಬಾರದುದಕ್ಕೆ

ಎಂದು ಹೇಳಿ,

ಓಲಗದೊಳೊರ್ಮೆ ನತನರ

ಪಾಲಕಚೂಡಾಮಣಿದ್ಯುತಿಪ್ಲುತಚರಣಂ — ಇತ್ಯಾದಿಯಾಗಿ ಕೊಟ್ಟಿದೆ. ಇಲ್ಲಿ ಲಕಾರ ಪ್ರಾಸವನ್ನೇ ಇಟ್ಟು ಹೇಳಿದೆಯಾಗಲಿ, ಕ್ಷಳಪ್ರಾಸವನ್ನಿಟ್ಟು ಹೇಳಿಲ್ಲ. ಇಲ್ಲಿ ದೋಷವಿಲ್ಲ. ದೋಷಕ್ಕೆಂದು ಎತ್ತಿಕೊಂಡ ಉದಾಹರಣೆ ಗುಣವಾಗಿದೆ. ಸಾಹಿತ್ಯ ಪರಿಷತ್ತಿನ ಪ್ರಕಟನೆಯಲ್ಲಿಯೂ ಇದೇ ಪ್ರಯೋಗವನ್ನು ಮೇಲಿನ ಮೇಲುಪಂತಿಯೊಡನೆ ಕೊಡಲಾಗಿದೆ. ಇದು ಸರಿಯಾದ ದಾರಿ

ಯಾವುದೆಂದು ಕೇಳಿದರೆ ಅಡ್ಡದಾರಿಯನ್ನು ತೋರಿಸಿ ಸರಿಯಾದ ದಾರಿಯೆಂದು ಹೇಳಿದಂತೆ ಇದೆ. ಲಿಂಗಣಾರಾಧ್ಯನ ಪ್ರತಿಯಾದರೋ ಇದನ್ನೇ ಪ್ರಯೋಗವಾಗಿ ಹೇಳುತ್ತದೆಯಾಗಲಿ ಅದರಿಂದ ಹೊಸ ಬೆಳಕು ಕಾಣುವುದಿಲ್ಲ. ಮದ್ರಾಸಿನ ಪ್ರಕಟನೆಯ ಅವತರಣಿಕೆಯಲ್ಲಿ "*ಕನ್ನಡ ಪದದ ಲ ಕಾರಕ್ಕೂ ಸಂಸ್ಕೃತ ಪದದ ಲ ಕಾರಕ್ಕೂ ಪ್ರಾಸವಿಡಬಾರದು" ಎಂದು ಹೇಳಿದ ಮಾತು ಆಶ್ಚರ್ಯಜನಕವಾಗಿದೆ. ಮಾನ್ಯ ಲೇಖಕರು ಈ ಮಾತನ್ನು ಪ್ರಯೋಗವನ್ನು ನೋಡಿ ಬರೆದಿರುವಂತೆ ಕಾಣುತ್ತದೆ. ಏಕೆಂದರೆ ಪ್ರಯೋಗವು ತಪ್ಪಿಗಾಗಿ ಉದಾಹೃತವಾಗಿದೆ. ಕಿಟಲ್ ಅವರ ಪ್ರತಿಯನ್ನು ಶೋಧಿಸಿ ಮುದ್ರಿಸಿದ ಶ್ರೀಮಾನ್ ಪಂಜೆ ಮಂಗೇಶರಾಯರ ಶಬ್ದಮಣಿದರ್ಪಣದ ಆವೃತ್ತಿಯಲ್ಲಿ ಈ ಸೂತ್ರದ ವಿವರಣೆ ಅಡಿಟಿಪ್ಪಣಿಯಲ್ಲಿ (ಇಂಗ್ಲಿಷಿನಲ್ಲಿ) ಮಾಡಲಾಗಿದೆ.

"The Kannada ಳ್ i. e, the ಕುಳ ಳ ಕಾರ and the Sanskrit ಲ್ for which ಳ್ can be substituted i.e, the ಕ್ಷಳ ಳ ಕಾರ do stand to form a right ಪ್ರಾಸ. In the first instance quoted ಳ in ಕಿಳಿರೆ is ಕುಳ ಳ ಕಾರ, while ಲ in ಜಲದ can have ಳ substituted for it. Hence the ಪ್ರಾಸ is permissible. In the second instance though the same letter ಲ occurs in each of the lines the ಪ್ರಾಸ is wrong, for ಲ್ in ಓಲಗ cannot interchange with ಳ್ and thus the combination of ಲ್ i.e, the Kannada ಲಕಾರ and the Sanskrit ಲ್ in ಪಾಲಕ for which ಳ can be substituated is not admissible" (ಮಂಗೇಶರಾಯರ ಪ್ರತಿ. ಪುಟ ೧೫). ಎಂದರೆ ಕನ್ನಡ ಕುಳ ಳ ಕಾರಕ್ಕೆ ಸಂಸ್ಕೃತದ ಲಕಾರವನ್ನಿಟ್ಟು ಪ್ರಾಸಮಾಡಬಹುದು. ಏಕೆಂದರೆ ಅದು ಕ್ಷಳ 'ಳ' ಕಾರವಾಗಿ ಮಾರ್ಪಡುವುದು—ಎಂದಹಾಗಾಯಿತು. ಇದನ್ನವರು ಪ್ರಯೋಗದಲ್ಲಿರುವ ಕಿಳಿರೆ—ಜಲದ ಎಂಬುದನ್ನು ಸರಿ ಎಂದು ಒಪ್ಪಿಕೊಂಡು ಬರೆದಂತೆ ಕಾಣುತ್ತದೆ. ಆದ್ದರಿಂದಲೇ ಅವರು ಇದಕ್ಕೆ ಮೊದಲು "But Kesava lays down that under certain conditions ಲ್ and ಳ್ shall be allowed as ಪ್ರಾಸ letters ಎಂದು ಹೇಳಿರಬೇಕು. ಅವರ ಅಭಿಪ್ರಾಯದಂತೆ ಕನ್ನಡ ಕುಳದೊಡನೆ ಸಂಸ್ಕೃತದ ಲಕಾರವನ್ನು ಪ್ರಾಸವಾಗಿ ಉಪಯೋಗಿಸಬಹುದೆಂದು ಆಗುವುದು. ಇದು ಸರಿಯಲ್ಲ. ಕನ್ನಡ ಕುಳ ಳ ಕಾರವೂ ಸಂಸ್ಕೃತ ಲ ಕಾರವೂ ಪ್ರಾಸವಾಗಬಹುದೆಂಬ ಅಭಿಪ್ರಾಯ ಕೇಶಿರಾಜನದಲ್ಲ. ಇದು "ಕುಳದ ನಿಯಾಮದೊಳೆಂದುಂ ಕ್ಷಳಕ್ಕೆ ಲಾಕ್ಷರ ವಿಕಲ್ಪಮಿಲ್ಲ" ಎಂಬ ಮಾತಿನಿಂದ ಸ್ಪಷ್ಟವಾಗಿದೆ. ಹಾಗೆಯೇ ಉತ್ತರ ವಾಕ್ಯಗಳಿಂದ ಓಲಗ, ಪಾಲಕ ಎಂಬ ಪ್ರಾಸವು ತಪ್ಪೆಂದು ಹೇಳಲಾಗಿದೆ.

* ಲಿಂಗ. ಆವೃತ್ತಿ. ಅವತರಣಿಕೆ. ಪುಟ ೧೬.

ಏಕೆಂದರೆ ಓಲಗದಲ್ಲಿರುವ ಕನ್ನಡ ಲಕಾರವು ಳಕಾರವಾಗಿ ಮಾರ್ಪಡುವುದಿಲ್ಲ. ಪಾಲಕದಲ್ಲಿರುವ ಲಕಾರವಾದರೋ ಕ್ಷಳವಾಗಿ ಮಾರ್ಪಡುವುದಾಗಿದೆ. ಆದ್ದರಿಂದ ಇದು ತಪ್ಪು ಎಂಬ ನಿರ್ಣಯವು ಪ್ರಯೋಗ ವಾಕ್ಯಗಳ ಆಧಾರವನ್ನು ಅವಲಂಬಿಸಿದೆ. ಇದರಿಂದ ಮದ್ರಾಸ್ ಆವೃತ್ತಿಯ ಅವತರಣಿಕಾಕಾರರ—ಸಂಸ್ಕೃತ ಕನ್ನಡ ಲಕಾರಗಳು ಪ್ರಾಸವಾಗವು—ಎಂಬ ಅಭಿಪ್ರಾಯವೇ ಹೊರಡುತ್ತದೆ. ಎಂದರೆ ಕನ್ನಡ ಲಕಾರ ಪ್ರಾಸದಲ್ಲಿ ಎಲ್ಲಾ ಎಡೆಗಳಲ್ಲೂ ಕನ್ನಡದ ಲಕಾರವೇ ಇರಬೇಕೆಂದು ನಿರ್ಧಾರಮಾಡಿದಂತಾಗುವುದು. ಹೀಗೆ ಕನ್ನಡದ ಲಕಾರ ಸ್ಥಾನಕ್ಕೆ ಸಂಸ್ಕೃತ ಲಕಾರವನ್ನಿಡಬಾರದೆಂಬುದಕ್ಕೆ ಆಧಾರವೇನೋ ತಿಳಿಯದು. ಈ ನಿರ್ಬಂಧವು ಮೊದಲಿಂದಲೂ ಇದ್ದುದಾಗಿದ್ದರೆ, ಮುಂದಿನ ರಾಮಾವತಾರ ಅಂದೇ ಆಗುತ್ತಿದ್ದಂತೆ ಈಗಿನವರು ಪ್ರಾಸಕ್ಕೆ ವಿರೋಧವಾಗಿ ಎಬ್ಬಿಸಿದ್ದ ದಂಗೆಯನ್ನೆಂದೋ ಆಗಿನ ಕವಿಗಳು ಎಬ್ಬಿಸಿಬಿಡುತ್ತಿದ್ದರು. ಕನ್ನಡ ಲಕಾರ ಸಂಸ್ಕೃತ ಲಕಾರಗಳಲ್ಲಿ ಭೇದವನ್ನು ಕಲ್ಪಿಸಿ ಪ್ರಾಸವನ್ನು ಪರಿಪಾಲಿಸುವುದು ತುಂಬ ಕಷ್ಟ. ಯಾವ ಕವಿಯೂ ಹೀಗೆ ಮಾಡಿದಂತೆ ಕಾಣುವುದಿಲ್ಲ. (ಪಂಪನ ಆದಿ ಪುರಾಣವಲ್ಲಿ ಈ ಕೆಳಗೆ ತೋರಿಸಿದ ಪದ್ಯಗಳಲ್ಲಿ ಕನ್ನಡ ಸಂಸ್ಕೃತ ಲಕಾರಗಳು ಪ್ರಾಸಸ್ಥಾನದಲ್ಲಿ ಬಂದಿವೆ.*) ಇದು ಶಬ್ದಮಣಿ ದರ್ಪಣದ ಓಲೆಗರಿಯ ಪಾಠವನ್ನು ನೋಡಿ ಉಂಟಾದ ಪ್ರಮಾದವಾಗಿರಬೇಕು. ಇಲ್ಲಿ ಇದನ್ನು ಮುಖ್ಯವಾಗಿ ಹೇಳುವ ತಾತ್ಪರ್ಯವೇನೆಂದರೆ ಸೂತ್ರ, ವೃತ್ತಿ, ಪ್ರಯೋಗ ಇವುಗಳಲ್ಲಿ ಏಕವಾಕ್ಯತೆ ಇರದುದರಿಂದ ಸರಿಯಾದ ಅರ್ಥವೇರ್ಪಡುವುದಿಲ್ಲವೆಂಬುದನ್ನು ತಿಳಿಸುವುದು. ಹಾಗೆಯೇ ವೃತ್ತಿಯಲ್ಲಿರುವ “ಕ್ಷಳನೆಂಬುದಿಲ್ಲದೆ ಸಂಸ್ಕೃತ ಪದದ ಲಕಾರಕ್ಕೆ ವಿಕಲ್ಪಮಂ ಪೇೞಲ್ ಬಾರದಾಗಿ ಕ್ಷಳನ ನಿದರ್ಶನೊಳೆ ಬೆರೆಸಿ ಪೇೞ್ದೆಂ” ಎಂಬುದು ಇಲ್ಲಿ ಸ್ಪಷ್ಟವಾಗಿಲ್ಲ. ಇಲ್ಲಿ ಕ್ಷಳವನ್ನು ಬೆರೆಸಿ ಹೇಳಿದುದಕ್ಕೆ ಕಾರಣವನ್ನೂ, “ಕ್ಷಳವಿಲ್ಲದೆ ಸಂಸ್ಕೃತಪದದ ಲಕಾರಕ್ಕೆ ವಿಕಲ್ಪವನ್ನು ಹೇಳಬಾರದು” ಎಂಬುದನ್ನೂ ಹೇಳಿರುವುದರ ಅಭಿಪ್ರಾಯವೇನು? ಇವೆಲ್ಲವೂ ಅಲ್ಲಲ್ಲಿ ಅಸ್ಪಷ್ಟತೆಯಿಂದ ತುಂಬಿ ಹೋಗಿವೆ. “ವೃತ್ತಿ ನ್ಯಾಸಂತದ್ವ್ಯಾಕುಳಮೆಂದಾ ಸೂತ್ರಕ್ಕರ್ಥ ವೃತ್ತಿ ವರ್ತಿಸೆ ಬರೆದೆಂ” ಎಂದು ಹೇಳಿದ ಕೇಶಿರಾಜನು ವೃತ್ತಿಯನ್ನೂ

---

| | | | | | | | | | |
|---|---|---|---|---|---|---|---|---|---|
| 1* | ಆಶ್ವಾಸ | ೩ | ಪದ್ಯ | ೧೯ | 7 | ಆಶ್ವಾಸ | ೧೧ | ಪದ್ಯ | ೧೨೮ |
| 2 | ಆಶ್ವಾಸ | ೩ | ಪದ್ಯ | ೬೪ | 8 | ಆಶ್ವಾಸ | ೧೧ | ಪದ್ಯ | ೧೪೬ |
| 3 | ಆಶ್ವಾಸ | ೪ | ಪದ್ಯ | ೬ | 9 | ಆಶ್ವಾಸ | ೧೨ | ಪದ್ಯ | ೧೦೩ |
| 4 | ಆಶ್ವಾಸ | ೫ | ಪದ್ಯ | ೫ | 10 | ಆಶ್ವಾಸ | ೧೩ | ಪದ್ಯ | ೨೦ |
| 5 | ಆಶ್ವಾಸ | ೭ | ಪದ್ಯ | ೪೬ | 11 | ಆಶ್ವಾಸ | ೧೪ | ಪದ್ಯ | ೨೦ |
| 6 | ಆಶ್ವಾಸ | ೧೧ | ಪದ್ಯ | ೯೦ | 12 | ಆಶ್ವಾಸ | ೧೫ | ಪದ್ಯ | ೧೦ |

( ಒಂದು ಎಡೆಯಲ್ಲಿ ಮಾತ್ರ ಲಕಾರ, ಕುಳ, ಕ್ಷಳಗಳ ಪ್ರಾಸವಿದೆ. ಆಶ್ವಾಸ. ೧೬ ಪದ್ಯ ೪೫ )

ವ್ಯಾಕುಳವಾಗಿ ಬರೆದನೇ? ಆ ವೃತ್ತಿಯ ಜಾಡುಹಿಡಿದು ಪ್ರಯೋಗಕ್ಕೆ ಹೋದರೆ ಅದೂ ವ್ಯಾಕುಳವಾಗಬೇಕೇ? ಆದ್ದರಿಂದ ಪ್ರಚಲಿತ ವೃತ್ತಿಪ್ರಯೋಗಗಳ ಪಾಠವೂ ವಿವರಣೆಯೂ, ಸರಿಯಾಗಿಲ್ಲವೆಂದು ಹೇಳಬಹುದಲ್ಲವೇ ? ಶುದ್ಧಪ್ರತಿ ಇದನ್ನು ಸರಿಪಡಿಸಬೇಕು. ಹೊಸಪ್ರತಿಯಿಂದ ಈ ವ್ಯಾಕುಲತೆ ತಕ್ಕಮಟ್ಟಿಗೆ ನಿವಾರಣವಾಗುವ ಹಾಗಿದೆ. ಆ ವೃತ್ತಿ ಈ ಮುಂದಿನ ಪ್ರಕಾರ ಇದೆ.

ವೃತ್ತಿ:—

"ಕುಳಂ ಪ್ರಾಸಮಾಗಿ ಪೇೞ್ದ ಕನ್ನಡದ ಕಬ್ಬಂ (ಇಲ್ಲಿ ಕನ್ನಡದ ಕಬ್ಬಂ ಎಂಬ ಪ್ರಯೋಗವನ್ನುಗಮನಿಸಬೇಕು) ಕ್ಷಳನಂ ಸೆಱಗೆಯ್ದು ದಾಗಿ ಕ್ಷಳನನೇ (ಅವಧಾರಣೆಯನ್ನು ಗಮನಿಸಬೇಕು) ಇರಿಸವೇೞ್ಪು ದಲ್ಲದೆ ವಿಕಲ್ಪದಿಂ ಲಕಾರಮನಾ ಕುಳ ಪ್ರಾಸದೊಳ್ ಬೆರೆಸಲಾಗದು. ಇನ್ನಾ ಲಕಾರ ಪ್ರಾಸಮಾಗಿಪೇೞ್ದ ಕನ್ನಡದ ಶಬ್ದಕ್ಕೆ ಸಕ್ಕದದ ಪದದ ಲಕಾರಮನಿರಿಸಿ ಪೇೞ್ವುದಲ್ಲದೆ ವಿಕಲ್ಪದಿಂ ಕ್ಷಳನನಿರಿಸಲಾಗದು. ಪ್ರಾಸಮಲ್ಲದಲ್ಲಿಯುಂ ಸಕ್ಕದದ ಲಕಾರಕ್ಕೆ ಕ್ಷಳನನಲ್ಲವೆ ವಿಕಲ್ಪ ಮಾಗಿ ಲಕಾರಮುಂ ಪೇೞಿಸಲ್ಲ. ದೇಶೀಯದಾಕುಳನುಂ, ಕ್ಷಳನು ಮೇಕಸ್ಥಾನೀಯಗಳಾವ ಕಾರಣಂ ಕ್ಷಳಮನದಱೊಳ್ ಬೆರೆಸಿ ಪೇೞ್ದಂ."

ಈ ವೃತ್ತಿ ಮೇಲಿನ ಸಂದೇಹಗಳನ್ನು ಕಳೆಯುತ್ತದೆ. ಕುಳಕ್ಕೆ ಕ್ಷಳಪ್ರಾಸ ಸರಿ. ಕನ್ನಡ ಲಕಾರದಲ್ಲಿ ಸಂಸ್ಕೃತ ಲಕಾರ ಪ್ರಾಸ ಉಚಿತ. ಇಷ್ಟು ಮಾತು ಸಮಂಜಸವಾಗಿದೆ. ಆದರೆ

"ಪ್ರಾಸವಲ್ಲದೆಡೆಯಲ್ಲಿ ಸಂಸ್ಕೃತ ಲಕಾರಕ್ಕೆ ಕ್ಷಳವನ್ನೇ ಇರಿಸಬೇಕು, ವಿಕಲ್ಪವಾಗಿ ಲಕಾರವನ್ನು ಹೇಳಸಲ್ಲದು" ಎಂಬ ಅಭಿಪ್ರಾಯದ ಮಾತು ಹೊಸದಾಗಿದೆ. ಇಲ್ಲಿ ಕ್ಷಳವನ್ನುಹೇಳಿದುದರ ಕಾರಣವೆಂದರೆ ದೇಶೀಯ ಕುಳವೂ, ಸಂಸ್ಕೃತದ ಕ್ಷಳವೂ ಏಕಸ್ಥಾನೀಯಗಳಾಗಿರುವುವೆಂಬುದು. ಮುಂದೆ ಸಾಹಿತ್ಯ ಪರಿಷತ್ತಿನ ಪ್ರಕಟನೆಯ ಸೂತ್ರ ೧೮-೧೯ರ ವೃತ್ತಿಯಲ್ಲಿ ಕುಳವು ದಂತ್ಯವೆಂದು ಹೇಳಲಾಗಿದೆ. ಸಂಸ್ಕೃತಲಕಾರವೂ ದಂತ್ಯವಾಗಿರುವುದರಿಂದ ಕ್ಷಳವೂ ದಂತ್ಯವಾದಂತಾಯಿತು. ಆದರೆ ಕನ್ನಡ ಲಕಾರ ಪ್ರಾಸಕ್ಕೆ ಆ ಕುಳ ಕ್ಷಳಗಳು ಆಗವು. ಮದ್ರಾಸ್ ಪ್ರತಿಯ ಅವತರಣಿಕೆಯಲ್ಲಿ ಹೇಳಿರುವ ಕನ್ನಡವ ಲಕಾರಕ್ಕೆ ಸಂಸ್ಕೃತದ ಲಕಾರ ಪ್ರಾಸವನ್ನಿಡಕೂಡದೆಂಬ ಮಾತು ಸರಿಯಲ್ಲ. ಆ ಅಭಿಪ್ರಾಯಕ್ಕೆ ಇಲ್ಲಿ ವಿರೋಧಾಭಿಪ್ರಾಯವಾಗಿ ಸಂಸ್ಕೃತ ಕನ್ನಡ ಲಕಾರಗಳು ಪ್ರಾಸಸ್ಥಾನದಲ್ಲಿ ಬರುತ್ತವೆಯೆಂಬುದು ಖಂಡಿತವಾಗಿದೆ.

ಪ್ರಯೋಗೋದಾಹರಣೆ:–

ಗುಣಕ್ಕೆ:—

(೧) ಕೊಳಗಳ್ ದಳಿತಾಬ್ಜಂಗಳ್ |
ದಳಿತಾಬ್ಜಂಗಳ್ ಸಮೃದ್ಧಮಧುಗಳ್ ಮಧುಗಳ್ ||
ಚಳದಳಿಕುಳಾಕುಳಂಗಳ್ |
ವಿಳಸದಳಿ ಪ್ರತತಿ (ಪಾಠಾಂತರ: ಪ್ರಕರ) ಮಧುರವಿರುತಿಯೆ
ಬನದೊಳ್ || ಇದುಗುಣಂ.

ಇದರಲ್ಲಿ ಕುಳಕ್ಕೂ ಕ್ಷಳಕ್ಕೂ ಪ್ರಾಸವಿದೆ. ಈ ಪದ್ಯ ಈಗ ಅಚ್ಚಾಗಿರುವ ಯಾವ ಪ್ರತಿಯಲ್ಲಿಯೂ ಇಲ್ಲ. (ಇದು ಕಾವ್ಯಾವಲೋಕನದಲ್ಲಿದೆ. ಪದ್ಯ ೬೨೩)

ದೋಷಕ್ಕೆ:–

(೨) ಕಿಳಿಱಿಹಯಂಗಳ್ ಘ(ಗ)ರ್ಜಿಸೆ |
ಜಲದ ನಿಭಂಗಳೆನಸಲ್ಲದು

ಇಲ್ಲಿ 'ಕಿಳಿಱಿ'ಜೊತೆಯಲ್ಲಿ ಜಲದ ಎಂಬುದು ಬಂದು ಕುಳ ಲಕಾರಪ್ರಾಸವಾಗಿರುವುದರಿಂದ ತಪ್ಪು.

ಸಾಹಿತ್ಯಪರಿಷತ್ತಿನ ಪ್ರಕಟನೆಯಲ್ಲಿ "ಕುಳಕ್ಷಳ ಪ್ರಾಸಕ್ಕೆ" ಎಂದು ಹೇಳಿ,
ಕಿಳಿಱಿಹಯಂಗಳ್‌ಗರ್ಜಿಸೆ
ಜಳದನಿಭಂಗಳ್ ಗಜಂಗಳ್ ಎಂದು ಬರೆದು ಕೆಳಗಡೆಯಲ್ಲಿ

(ಕಿಳಿಱಿ–ಜಲದ, ಎಂದಾಗದು) ಎಂದು ಇದೆ. ಪದ್ಯವನ್ನೇ ಹೀಗೆ ಇಟ್ಟುಕೊಂಡು ಇದು ದೋಷವೆಂದು ಹೇಳುವ ಪಾಠ ಸರಿಯಷ್ಟೆ.

(೩) ಅಲರ್ದುವೊಡನೊಡನೆ ಕೈರವ |
ಕುಲಮುಂ ಕುಲಟಾಮುಖಂಗಳುಂ ಮುನಿದುವು ನಿ ||
ಶ್ಚಲಯೋಗನಿರತಸಂಧ್ಯಾಂ |
ಜಲಿಯುಂ ಸರಸಿರುಹವನಮುವೊಡನೊಡನಾಗಳ್ || ಇದುಗುಣಂ.
(ಕಾವ್ಯಾವಲೋಕನ ಪದ್ಯ ೬೧೪)

ಇದೂ ಇಲ್ಲಿ ಹೊಸಪದ್ಯ. ಇದರಲ್ಲಿ ಪ್ರಾಸಸ್ಥಾನಗಳಲ್ಲಿ ಎಲ್ಲ ಲಕಾರಗಳಿವೆ. ಕನ್ನಡ ಲಕಾರವು ಅಲರ್ ಎಂಬುದರಲ್ಲಿಯೂ, ಸಂಸ್ಕೃತಲಕಾರವು ಕುಲ, ನಿಶ್ಚಲ, ಸಂಧ್ಯಾಂಜಲಿ ಎಂಬುವುಗಳಲ್ಲಿಯೂ ಬಂದಿದೆ.

(೪) ಓಲಗದಳೊರ್ಮೆ ನರ(ತ)ನತ(ರ) |
ಪಾಳಕಚೂಡಾಮಣಿದ್ಯುತಿಪ್ಲುತಚರಣಂ || ಎಂದು ದೋಷ.

ಓಲಗ, ಪಾಳಕ—ಈ ಪ್ರಾಸ, ದೋಷ. ಇಲ್ಲಿ ಲಕಾರ ಕ್ಷಳಗಳ ಪ್ರಾಸವಿದೆ.

ಈ ಪ್ರಯೋಗಗಳಿಂದ ಯಾವ ವಿಧವಾದ ಸಂದಿಗ್ಧತೆಯೂ ಉಳಿಯುವುದಿಲ್ಲ. ಇಲ್ಲಿ ಪ್ರಯೋಗಕ್ಕಾಗಿ ಎತ್ತಿಕೊಂಡಿರುವ ಕ್ರಮವೂ ಅವುಗಳ ವಿವರಣೆಯನ್ನು ಸೂಚಿಸುವ ವಿಧಾನವೂ ಸಂದರ್ಭೋಚಿತವಾಗಿವೆ. ಗುಣಕ್ಕಾಗಿ ಒಂದೊಂದು ಪದ್ಯವನ್ನೂ, ದೋಷಕ್ಕಾಗಿ ಒಂದೊಂದು ಪದ್ಯವನ್ನೂ ಉದಾಹರಿಸಿರುವುದನ್ನು ಇಲ್ಲಿ ಲಕ್ಷಿಸಬೇಕು.

ಹೊಸ ಪ್ರತಿಯ ಪ್ರಕಾರ ಈ ಸೂತ್ರವು ಎರಡು ಅಂಶಗಳನ್ನು ಸ್ಪಷ್ಟ ಮಾಡುವುದಕ್ಕಾಗಿ ಪ್ರಸಕ್ತವಾಗಿದೆಯೆಂದು ಹೇಳಬೇಕಾಗುತ್ತದೆ. ಮೊದಲನೆಯ ಅಂಶದಲ್ಲಿ (೧) ಕನ್ನಡ ಕುಳಕ್ಕೆ ಸಂಸ್ಕೃತದ ಕ್ಷಳಪ್ರಾಸ, ಮತ್ತು (೨) ಕನ್ನಡ ಲಕಾರಕ್ಕೆ ಸಂಸ್ಕೃತಲಕಾರ ಪ್ರಾಸಯುಕ್ತವೆಂಬುದನ್ನು ಹೇಳಲಾಗಿದೆ. ಇದೇನೋ ಪ್ರಾಸ ವಿಷಯಕ್ಕಾಯಿತು. ಕನ್ನಡದಲ್ಲಿ ಸಂಸ್ಕೃತದ ಲಕಾರಯುಕ್ತ ಪದಗಳು ಹೇರಳವಾಗಿ ಉಪಯೋಗವಾಗುವುದರಿಂದ ಪ್ರಾಸವಲ್ಲದಲ್ಲಿ ಹೇಗೆ ವ್ಯವಹರಿಸಬೇಕು, ಲಕಾರವನ್ನು ಇದ್ದುದು ಇದ್ದ ಹಾಗೆಯೇ ಹೇಳಬೇಕೆ, ಅದನ್ನು ಕ್ಷಳವಾಗಿ ಉಪಯೋಗಿಸಬೇಕೆ, ಎಂಬ ಪ್ರಶ್ನೆ ಪ್ರಾಸವಿಲ್ಲದ ಸಂದರ್ಭದಲ್ಲಿ ಬರುತ್ತದೆ. ಅದನ್ನೇ ಕೇಶಿರಾಜನು ಎರಡನೆಯ ಅಂಶದಲ್ಲಿ ಸ್ಪಷ್ಟ ಮಾಡಿದ್ದಾನೆ. "ಸಂಸ್ಕೃತದೊಳ್ ಆ ಲಕಾರಕ್ಕೆ ವಿಕಲ್ಪಂ ಕ್ಷಳನಲ್ಲದಿಲ್ಲ*" ಎಂದು ಅನ್ವಯವನ್ನು ಮಾಡಿ ಅದರ ಜೊತೆಯಲ್ಲಿ ಹೊಸ ಪ್ರತಿಯ ವೃತ್ತಿಯಲ್ಲಿಯ—"ಪ್ರಾಸಮಲ್ಲದಲ್ಲಿಯುಂ ಸಕ್ಕದದ ಲಕಾರಕ್ಕೆ ಕ್ಷಳನಲ್ಲದೆ ವಿಕಲ್ಪಮಾಗಿ ಲಕಾರಮುಂ ಪೇಲಿಸಲ್ಲ" ಎಂಬ ಪಾಠವನ್ನು ಸೇರಿಸಿ ಓದಿದರೆ ಇದರ ಭಾವವು ಸ್ಪಷ್ಟವಾಗುವುದು. ಕನ್ನಡದಲ್ಲಿ ಸಂಸ್ಕೃತದ ಲಕಾರಯುಕ್ತ ಪದಗಳು ಕ್ಷಳವಾಗಿ ಹೇರಳವಾದ ಸಂಖ್ಯೆಯಲ್ಲಿ ಬಳಕೆಯಲ್ಲಿರುವುದನ್ನು ನೋಡಿ ಕೇಶಿರಾಜನು ಈ ನಿಯಮಮಾಡಿರಬೇಕೆಂದು ತೋರುತ್ತದೆ. ಸಂಸ್ಕೃತ ಭಾಷೆಯ ಗ್ರಂಥಗಳನ್ನು ಅವಲೋಕಿಸಿದರೆ ನಮ್ಮ ದೃಷ್ಟಿಗೆ ಬೀಳುವುದು ಹೆಚ್ಚಾಗಿ ಲಕಾರವೇ ಆಗಲಿ ಕ್ಷಳವಲ್ಲ. ಅಲ್ಲಿ 'ಲಳಯೋರಭೇದಃ' ಎಂಬ ನಿಯಮವಿದ್ದರೂ ಲಕಾರವನ್ನು ಳಕಾರವಾಗಿ ಹೆಚ್ಚು ಪ್ರಯೋಗಿಸುವುದಿಲ್ಲ. ಕನ್ನಡದಲ್ಲಿ ಆ ಸಂಸ್ಕೃತ ಲಕಾರಯುಕ್ತ ಶಬ್ದಗಳು ಳಕಾರವಾಗಿ ಪ್ರಯೋಗವಾಗುತ್ತಿರುವುದನ್ನು ನೋಡಿ ಕನ್ನಡ ಬಾರದ ಸಂಸ್ಕೃತ ಪಂಡಿತರಿಗೆ—ಮುಖ್ಯವಾಗಿ ಉತ್ತರ ಭಾರತದವರಿಗೆ–ಆಶ್ಚರ್ಯವಾಗಿರುವುದು ನನ್ನ ಅನುಭವದ ಮಾತಾಗಿದೆ. ಬೇರೆ ದ್ರಾವಿಡ ಭಾಷೆಗಳಲ್ಲಿಯೂ ಸಂಸ್ಕೃತದ ಲಕಾರವನ್ನು ಕನ್ನಡದಲ್ಲಿರುವಂತೆ ಕ್ಷಳವಾಗಿ ಉಪಯೋಗಿಸುವ ಹೆಚ್ಚು ವಾಡಿಕೆಯಿಲ್ಲ. ತೆಲುಗಿನಲ್ಲಿಯಾದರೋ

---

* ಕ್ಷಳನಿಲ್ಲದಿಲ್ಲ—ಎಂದು ಸಾ. ಪ. ಪ್ರತಿಯಪಾಠ. ಈ ಪಾಠಾಂತರಕ್ಕೆ ಆಧಾರವಾವುದೆಂಬುದು ಅಲ್ಲಿ ಉಕ್ತವಾಗಿಲ್ಲ. ಉಳಿದ ಎಲ್ಲ ಪ್ರತಿಗಳಲ್ಲಿ 'ಕ್ಷಳನಲ್ಲದಿಲ್ಲ' ಎಂಬ ಪಾಠವೇ ಇದೆ.

ಕನ್ನಡದ ಕುಳ ಳಕಾರವೇ ಲಕಾರವಾಗಿ ಪ್ರಯೋಗವಾಗುತ್ತದೆ. ನಾವು, ಬೆಳಕು ಎಂಬುದನ್ನು ತೆಲುಗಿನವರು 'ವೆಲುತುರು' ಎನ್ನುತ್ತಾರೆ. ನಮ್ಮ ಬೆಳ್, ಅವರ ವೆಲ್. ನಾವು ಒರಳಿಂದು ಹೇಳಿದರೆ ಅವರು 'ರೋಲು', ಎನ್ನುತ್ತಾರೆ. ನಮ್ಮ ಬಹುವಚನದ 'ಗಳ್' ಪ್ರತ್ಯಯ ಅವರಲ್ಲಿ ' ಅಲ್ ' ಆಗಿದೆ. ಹೀಗೆಯೇ ತೇೞ್, ಒಳ (ಗು), ಚಳಿ, ಮೊಳೆ ಎಂಬ ಮಾತುಗಳು ಅವರಲ್ಲಿ ತೇಲು, ಲೋ, ಚಲಿ, ಮೊಲ ಎಂದಾಗಿವೆ. ಕನ್ನಡದ ಕಳ್, ಕಳ್ಳ, ಏಳ್, ಕೆಳದಿ, ತಳಿರ್, ಗಾಳಿ, ಇವುಗಳು ಕ್ರಮವಾಗಿ ಕಲ್ಲೆ, ಕಲ್ಲರಿ, ಲೇ, ಚೆಲಿ (ಚೆಲಿಯ), ತಲಿರು, ಗಾಲಿ, ಎಂದು ತೆಲುಗಿನಲ್ಲಿ ಉಚ್ಚರಿತವಾಗುತ್ತವೆ. ಅಷ್ಟೇಕೆ, ಹಳಗನ್ನಡದ ಲಕಾರಯುಕ್ತ ಶಬ್ದಗಳು ಹೊಸಗನ್ನಡದಲ್ಲಿ ಳಕಾರವಾಗಿ ಮಾರ್ಪಟ್ಟಿವೆ. ಕೇಶಿರಾಜನು

> ಬೆರಲೆರಲೊರಲ್ ಕೊರಲ್ ಸರ |
> ಲರಲ್ ಪರಲ್ ಮರಲುಮಂತೆ ನರಲುಂ ಸುಂಗ್ರೈ ||
> ಸರಲುಂ ಲಾಂತಮಿವಂ ಗ್ರಾ |
> ಮ್ಯರಱಿಯದುಚ್ಚರಿಸುವರ್ ಕುಳಾಂತಭ್ರಮೆಯಿಂ ||

ಎಂದು ಈ ಶಬ್ದಗಳಲ್ಲಿ ಲಕಾರವೇ ಇರಬೇಕೆಂದು ಕಡಿದಾಗಿ ವಿಧಿಸಿದ್ದರೂ ನಾವುಗಳು ಬೆರಳು, ಒರಳು, ಕೊರಳು, ಅರಳು, ಹರಳು, ಮರಳು, ನರಳು, ಸರಳು, ಎಂದು ಉಚ್ಚರಿಸಿ ನಾವೆಲ್ಲರೂ ಅವನಿಂದ ಗ್ರಾಮ್ಯರೆಂದೆನಿಸಿಕೊಳ್ಳಬೇಕಾಗಿದೆ. ಇಷ್ಟೆಲ್ಲವನ್ನೂ ಮಥಿಸುವುದರಿಂದ, ಕನ್ನಡಿಗರು ' ಳ ' ಕಾರ ಪ್ರಿಯರೆಂಬಂಶವು ಹೊರಪಡುತ್ತದೆ. ಸಂಸ್ಕೃತದಲ್ಲಿಯೂ ಇತರ ದ್ರಾವಿಡ ಭಾಷೆಗಳಲ್ಲಿಯೂ ಹೆಚ್ಚು ಬಳಕೆಯಲ್ಲಿಲ್ಲದ ಈ ಕ್ಷಳ ಳಕಾರದ ಪ್ರಾಶಸ್ತ್ಯವು ಕನ್ನಡದಲ್ಲಿರುವುದನ್ನು ಲಕ್ಷಿಸಿ ಈ ಸೂತ್ರದ ಉತ್ತರಾಂಶವು ಕನ್ನಡ ಭಾಷೆಯ ಕನ್ನಡ ಜನಾಂಗದ ಉಚ್ಚಾರಣೆಯ ವೈಶಿಷ್ಟ್ಯವನ್ನು ವ್ಯಕ್ತಗೊಳಿಸಲು ಹೊರಟಿದೆ ಎಂದು ಹೇಳಬಹುದು.

ಈ ಸೂತ್ರವಾದೊಡನೆಯೇ ಮತ್ತೊಂದು ಸೂತ್ರವಿದೆ. ಅದು ೞ, ಕುಳ, ಕ್ಷಳಗಳ ವಿಚಾರವನ್ನು ಹೇಳುವ ಸ್ವಾರಸ್ಯವಾದ ಸೂತ್ರ. ಸೂತ್ರಾಭಿಪ್ರಾಯವು ಈ ಕೆಳಗಿನಂತಿದೆ.

> ಳಾಕೆಂಬುದು ಕುಳ ಳಕಾರ, ೞಾೞ ಎಂಬುದು ೞಳಕಾರ.
> ಳಕ್ಷವೆಂಬುದು ಕ್ಷಳ ಳಕಾರ ಎಂದು ಬಾಳಶಿಕ್ಷೆ

ವೃತ್ತಿಯ ಭಾವ:—

ಬಾಳಬೋಧೆಯಲ್ಲಿ ದೂಳಕ್ಕರವನ್ನು (ಎಂದರೆ ವ್ಯಂಜನವನ್ನು) ಬರೆಯಿಸುವಲ್ಲಿ ಅಣ್ಣಗಳು ಳಾಕು ಎಂದರೆ ಕುಳನ ಳಕಾರ. ಅದರ ರೂಪ ಳ. ಇದು ಕ್ಷಳದೊಡನೆ

ಪ್ರಸಕ್ಕೆ ಬರುವುದರಿಂದ ಕ್ಷಳ ಳತ್ವವನ್ನು ಬರೆವಂತೆ ಇದನ್ನು ಬರೆಯಿಸುವರು. ಸಂಸ್ಕೃತಶಬ್ದನಿಯುಕ್ತ ಲಕಾರದ ನೆಲೆಗೆ ನಿಂತು ಸರಿಯಾಗಿ ಸಲ್ಲುವುದನ್ನು ಕ್ಷಳ ನೆಂಬರೆಂದು ಮೊದಲೇ ಹೇಳಿದೆ. ಱಾಟ ಎಂಬುದು ಱಟನದರ ರೂಪ ||ಱ||. ಇದನ್ನು ಲೇಖಕರು ಬರೆಯಲರಿಯದೆ ಱಕಾರವನ್ನು ಮಾಡುವರು, ಇಲ್ಲವೆ ಕ್ಷಳನ ಳಕಾರದಂತೆ ಬರೆವರು. ಇದು ಅಬದ್ಧಂ. ಅದನ್ನು ನಂಬದೆ ಆದಿಮಾರ್ಗವಿದರು ಇದನ್ನು ತಿಳಿವುದು. ಳಕ್ಷ ಎಂಬಿದು ಕ್ಷಳನದರ ರೂಪ || ಳ ||

ಈ ಸೂತ್ರವೃತ್ತಿಗಳ ಪಾಠದಿಂದ ಆ ಕಾಲದಲ್ಲಿ ಱಟ, ಕುಳ, ಕ್ಷಳಗಳನ್ನು ಈ ಸಂಕೇತಗಳಿಂದ ಬಾಲಶಿಕ್ಷೆಯಲ್ಲಿ ಅಣ್ಣಗಳು ಎಂದರೆ ಉಪಾಧ್ಯಾಯರು ಬೋಧಿಸು ತ್ತಿದ್ದಿಲ್ಲವೆಂಬ ಅಂಶವು ವ್ಯಕ್ತವಾಗುತ್ತದೆ. ಮಕ್ಕಳಿಗೆ ಆರಂಭಪಾಠದಲ್ಲಿ ಱಟ, ಕುಳ, ಕ್ಷಳಗಳೆಂಬ ಪರಿಭಾಷೆ ಅರ್ಥವೂ ಆಗುವಹಾಗಿಲ್ಲ, ಅವುಗಳ ಪರಸ್ಪರ ವ್ಯತ್ಯಾಸಜ್ಞಾನವೂ ಕಠಿನವಾಗುತ್ತದೆ. ಆದ್ದರಿಂದ ಉಪಾಧ್ಯಾಯರುಗಳು ಸುಲ ಭೋಪಾಯದಿಂದ ಈ ಅಕ್ಷರಗಳನ್ನು ಬೋಧಿಸುತ್ತಿದ್ದಂತೆ ಕಾಣುತ್ತದೆ. ತಾನು ಚಿಕ್ಕಂದಿನಲ್ಲಿ ಕಲಿತುದನ್ನೇ ಕೇಶಿರಾಜನು ದೊಡ್ಡವನಾಗಿ ವೈಯಾಕರಣನೆಂದೆನಿಸಿ ಕೊಂಡಮೇಲೆ ಅವುಗಳನ್ನು ಈ ರೀತಿ ವಿವರಿಸಿದ್ದಾನೆ ಇವನಿಗೆ ಮುಂಚೆ ಇದ್ದ ನಾಗವರ್ಮನು ತನ್ನ ಭಾಷಾಭೂಷಣದಲ್ಲಿಯೇ ಆಗಲಿ, ಶಬ್ದಸ್ಮೃತಿಯಲ್ಲಿಯೇ ಆಗಲಿ, ಈಮೂರು ಅಕ್ಷರಗಳನ್ನು ಪ್ರತಿಪಾದಿಸಿಲ್ಲ. ಮುಂದೆ ಶಬ್ದಾನುಶಾಸನ ಕಾರನ ಹೊತ್ತಿಗೆ ಱಟ, ಕುಳ, ಕ್ಷಳಗಳು ತಮ್ಮ ವೈಶಿಷ್ಟ್ಯವನ್ನು ಕಳೆದುಕೊಂಡಿದ್ದು ದರಿಂದ ಇವುಗಳ ವಿವರಣೆಯ ಗೋಜಿಗೆ ಭಟ್ಟಾಕಲಂಕದೇವನು ಹೋಗಲಿಲ್ಲ. ಕೇಶಿರಾಜನ ಕಾಲದಲ್ಲಿ ಈ ಪರಿಭಾಷೆ ಬಿದ್ದುಹೋಗಿ ಬರಿಯುಗ್ರಾಮ್ಯರೂಪದ ಪರಿ ಪಾಠವಿದ್ದಿರಬೇಕು. ಅದನ್ನು ಕೇಶಿರಾಜನು ತನ್ನ ವ್ಯಾಕರಣದಲ್ಲಿ ಹೇಳುವ ಮೂಲಕ ಆಗಿನ ಪದ್ಧತಿಯನ್ನು ಸೂತ್ರವಾಗಿ ರಚಿಸಿ ಶಾಶ್ವತವಾಗಿ ಇರುವಂತೆ ಮಾಡಿದ್ದಾನೆ. ಕುಳವನ್ನು 'ಳಾಕು' ಎಂದೂ, ಱಟವನ್ನು 'ಱಾಟ' ಎಂದೂ ಕ್ಷಳವನ್ನು 'ಳಕ್ಷ' ಎಂದೂ ಬೋಧಿಸುವಲ್ಲಿ ಮಕ್ಕಳಿಗೆ ಅವುಗಳಲ್ಲಿರುವ ಪರಸ್ಪರ ಭೇದ ತಟ್ಟನೆ ಹೊಳೆಯುವಂತಿದೆ. ಳಾಕು ಎಂಬುದು ಶುದ್ಧಕನ್ನಡದ ಪರಿಭಾಷೆ. ಹಾಗೆಯೇ ಱಾಟವೂ ಆಗಿದೆ. ಳಕ್ಷ ಎಂಬುದರಲ್ಲಿ ಸಂಸ್ಕೃತದ ಒತ್ತಕ್ಕರವಿರುವುದರಿಂದ ಅದು ಸಂಸ್ಕೃತದ ಅಕ್ಷರ ವೆಂದು ಸಹಜವಾಗಿ ಮನವರಿಕೆಯಾಗುವುದು.

ಈ ಸೂತ್ರದಲ್ಲಿ ಈ ಅಕ್ಷರಗಳ ಆಕಾರ ಸ್ವರೂಪವನ್ನು ಕೇಶಿರಾಜನು ಹೇಳಿರುವುದೂ ಇಲ್ಲಿ ನವೀನವಾಗಿದೆ. ಅನುಸ್ವಾರ, ವಿಸರ್ಗ, ಜಿಹ್ವಾಮೂಲೀಯ, ಉಪಧ್ಮಾನೀಯಗಳ ಉಚ್ಚಾರಗಳನ್ನೂ, ಸ್ವರೂಪಗಳನ್ನೂ ಹೇಳಿರುವಂತೆ ಱಟ, ಕುಳ, ಕ್ಷಳಗಳ ಉಚ್ಚಾರಗಳನ್ನೂ, ಆಕಾರಗಳನ್ನೂ ಕೇಶಿರಾಜನು ಹೇಳುವುದು ಸ್ವಾಭಾವಿಕವಾಗಿದೆ. ಶಕಟರೇಫ, ಱಟಕುಳಗಳ ಉಚ್ಚಾರಣೆಯನ್ನು ಸೂತ್ರ೧೮–೧೯ರ

ವೃತ್ತಿಯಲ್ಲಿ (ಸಾಹಿತ್ಯಪರಿಷತ್ಪ್ರತಿಯ ಸೂತ್ರಸಂಖ್ಯೆ) ಸ್ಪಷ್ಟಮಾಡಿದ್ದಾನೆ. ಇಲ್ಲಿ ಮೊದಲ ನೂರು ಅಕ್ಷರಗಳ ಆಕಾರವನ್ನೂ ಹೇಳಿದ್ದಾನೆ.

ಱವನ್ನು ಬರೆಯುವಾಗ ಆಗಿನ ಕಾಲದ ಜನರು ತಪ್ಪು ಮಾಡುತ್ತಿದ್ದಂತೆ ಕಾಣುತ್ತದೆ. ಆದ್ದರಿಂದ ಕೆಲವರು ಱವನ್ನು ಶಕಟ ರೇಫೆಯ ಆಕಾರದಂತೆ ಬರೆಯುತ್ತಾರೆಂದು ಹೇಳಿದ್ದಾನೆ. ಇದರಿಂದ ಕೇಶಿರಾಜನ ಕಾಲದಲ್ಲಿ ಶಕಟ ರೇಫೆಯ ಬರೆವಣಿಗೆಯ ಪ್ರಾಬಲ್ಯವು ಹೆಚ್ಚಾಗಿದ್ದಿತೆಂಬಂಶವು ವ್ಯಕ್ತವಾಗುತ್ತದೆ. ಇದು ಆಕೃತಿಯ ಭ್ರಮೆಯಿಂದಾದ ದೋಷ. ಉಚ್ಚಾರಣೆಯ ಸಾಮ್ಯತೆಯಿಂದ ಅದನ್ನು ಳಕಾರದ ಆಕೃತಿಯಂತೆ ಬರೆಯುತ್ತಿದ್ದರೆಂದು ಕಾಣುತ್ತದೆ. ಇದು ಅಬದ್ಧ ವೆಂದು ಕೇಶಿರಾಜನು ಕಠಿನವಾಗಿ ನಿಷೇಧಿಸಿದ್ದಾನೆ ಇದರಿಂದ ಱವನ್ನು ಆ ಕಾಲದಲ್ಲಿ ಳದಂತೆಯೇ ಉಚ್ಚರಿಸುತ್ತಿದ್ದರೆಂಬಂಶವು ಅನುಮಿತವಾಗುತ್ತದೆ. ಇದನ್ನು ಲಕ್ಷ್ಯದಲ್ಲಿಟ್ಟುಕೊಂಡು ಕೇಶಿರಾಜನು "ಡಕಾರಂ ಪುಟ್ಟುವ ತಾಣಮುಂ ಜೆಟ್ಟಿತ್ತಾನುಚ್ಚರಿಸೆ, ಱಂ ಪುಟ್ಟುಗುಂ" ಎಂದು ಹೇಳಿರುವುದು. ಈ ಲಕ್ಷಣ ವಿವರಣೆಯಿಂದ ಱವನ್ನು ಹೇಗೆ ಉಚ್ಚರಿಸಬೇಕೋ ನಿರ್ಧರಿಸುವುದು ಈಗಿನ ಕಾಲದಲ್ಲಿ ಕಷ್ಟ ಆದ್ದರಿಂದ ಕನ್ನಡದ ಱದ ಉಚ್ಚಾರಣೆಗಾಗಿ ತಮಿಳಿನಲ್ಲಿ ಪ್ರಚಲಿತವಾಗಿ ಉಳ್ಳ 'ಟ'ಕಾರದ ಅನುಕರಣ ಮಾಡಲಾಗುತ್ತದೆ ಡಕಾರ, ಱ ಗಳು ಏಕಸ್ಥಾನೀಯಗಳೆಂಬುದಂತೂ ಸ್ಪಷ್ಟವೇ. ಇದನ್ನು, ಕನ್ನಡದಲ್ಲಿ ಡಕಾರವು ಱವಾಗಿ ಪರಿಣಮಿಸುವುದರಿಂದಲೂ ನಿರ್ಧರಿಸಿಕೊಳ್ಳಬಹುದಾಗಿದೆ. ಉರ್ದು ಭಾಷೆಯಲ್ಲಿಯೂ ಇದೇ ವಿಧವಾದ ಉಚ್ಚಾರಣೆ ಇರುವುದು. ಆ ಭಾಷೆಯಲ್ಲಿ ಎರಡು ವಿಧದ ಡಕಾರಗಳಿವೆ. ಅವೆರಡರ ಉಚ್ಚಾರಣೆಯಲ್ಲಿ ಸಂದಿಗ್ಧತೆಯಿದೆ. ಇದರಿಂದ ಈ ವಿಷಯವಾಗಿ ಪಂಡಿತರಲ್ಲಿ ಮತಭೇದವೂ ಉಂಟಾಗಿದೆ. ಈ ಎರಡು ಅಕ್ಷರಗಳನ್ನು ಬಾಲಶಿಕ್ಷೆಯಲ್ಲಿ ಡಾಲ್ ಎಂದೂ, ಅಡೆ ಎಂದೂ ಬೋಧಿಸ ಲಾಗುತ್ತದೆ. ಡಾಲ್ ಎಂಬುದರ ಉಚ್ಚಾರವು ಕನ್ನಡದ ಡಕಾರದ ಉಚ್ಚಾರ ವಿರುವ ಹಾಗೆ. ಅಡೆ ಎಂಬುದರ ಉಚ್ಚಾರವು ಡಕಾರದಂತೆಯೂ ಳಕಾರದಂತೆಯೂ ಆಗುತ್ತದ ಎರಡರ ಆಕಾರವೂ ಬೇರೆ ಬೇರೆಯಾಗಿದ. ಡರ್. ಡಂಕಾ, ಮುಂಡಲನಾ, ಖಂಡರ್, ನಡೂಲ, ಈ ಪದಗಳಲ್ಲಿ ಡಕಾರವಿದೆ. ಆಡ್ ಮುಂತಾದ ಪದಗಳನ್ನು ಳಕಾರವಾಗಿ ಉಚ್ಚರಿಸುತ್ತಾರೆ. ಆದರೂ ಆ ಳಕಾರದಲ್ಲಿ ಡಕಾರ ಅಡಕವಾಗಿದೆ ಯೆಂಬುದು ಅವರ ಉಚ್ಚಾರಣೆಯ ಕಾಲದಲ್ಲಿ ಸೂಕ್ಷ್ಮವಾಗಿ ಪರಿಕಿಸಿದರೆ ಗೋಚರ ವಾಗುವುದು ಗಾಡಿ, ಲಡಕಾ, ಕಪಡಾ, ಮುಂತಾದ ಪದಗಳಲ್ಲಿ ಳಕಾರವಾಗಿ ಉಚ್ಚರಿಸಬಹುದಾದ ಡಕಾರವಿದ್ದರೂ ಅವುಗಳನ್ನು ಡಕಾರವಾಗಿಯೇ ಉಚ್ಚರಿಸು ತ್ತಾರೆ. ಇದರಿಂದ ಡಕಾರದ ಸ್ಥಾನದಲ್ಲಿ ಹುಟ್ಟುವ ಈ ಳಕಾರದ ಉಚ್ಚಾರಣೆ ಯಲ್ಲಿ ಅವರಲ್ಲಿ ತುಂಬ ತೊಡಕಿದೆ ಎಂಬುದು ಗೊತ್ತಾಗುವುದು. ಕನ್ನಡದ ಡಕಾರ ಸ್ಥಾನದಲ್ಲಿ ಹುಟ್ಟುವ ಱವಾದರೋ ಈಗ ಶುದ್ಧಾಂಗವಾಗಿ ಳಕಾರವಾಗಿ ಬಿಟ್ಟಿದೆ.

ಅವರಲ್ಲಿ ಅದೇ ಳಕಾರದ ಉಚ್ಚಾರವು ಡಕಾರವಾಗಿದೆ. ಇದರಿಂದ ದ್ರಾವಿಡ ಭಾಷೆಯ ಪರಿಣಾಮವು ಉರ್ದು ಭಾಷೆಯ ಮೇಲೆ ಈ ಅಂಶದಲ್ಲಿ ಆಗಿದೆ ಎಂದು ಹೇಳಲು ಅವಕಾಶವಿದೆ.*

ಇಲ್ಲಿ ಈ ವಿಷಯವನ್ನು ವಿಸ್ತರಿಸಿದುದರ ಉದ್ದೇಶವು ಡಕಾರ ಸ್ಥಾನದಲ್ಲಿ ಉಚ್ಚರಿಸಲಾಗುವ ೞವು ಹೇಗೆ ತನ್ನ ಮೂಲ ರೂಪವನ್ನು ಬೇರೆ ಬೇರೆ ಭಾಷೆಗಳಲ್ಲಿ ಕಳೆದುಕೊಂಡಿದೆ ಎಂಬುದನ್ನು ಸ್ಪಷ್ಟಗೊಳಿಸುವುದಾಗಿದೆ. ಕೇಶಿರಾಜನ ಕಾಲದಲ್ಲಿಯೇ ಇದರ ಉಚ್ಚಾರಣೆಯಲ್ಲಿ ತೊಂದರೆಯೂ, ಅಸ್ಪಷ್ಟತೆಯೂ ಇದ್ದುದರಿಂದ ಕೇಶಿರಾಜನು ತನ್ನ ಅನುಭವದ ಬಲದಿಂದ ೞದ ಉಚ್ಚಾರವನ್ನು ಸ್ಪಷ್ಟಗೊಳಿಸಿದನು. ಆದರೆ ಅದು ಈಗ ಬಳಕೆಯಿಂದ ಬಿದ್ದು ಹೋಗಿ ಳಕಾರವಾಗಿ ಉಚ್ಚರಿತವಾಗುತ್ತದೆ.

ಕೊನೆಯಲ್ಲಿ ಕ್ಷಳದ ವಿಷಯ ಒಂದು ಮಾತು ಹೇಳಿ ಈ ಸೂತ್ರವಿವರಣೆಯನ್ನು ಇಲ್ಲಿಗೆ ಮುಗಿಸಬಹುದಾಗಿದೆ. ಕೇಶಿರಾಜನು ಕ್ಷಳವನ್ನು ಳಕ್ಷವೆಂದು ಬಾಲಪಾಠದಲ್ಲಿ ಬೋಧಿಸುತ್ತಾರೆಂದು ಹೇಳಿದ್ದಾನಷ್ಟೇ ಈ ಪದ್ಧತಿ ಮೊನ್ನೆಮೊನ್ನೆಯವರೆಗೂ ರೂಢಿಯಲ್ಲಿದ್ದಿತು. ಅವರ್ಗೀಯಗಳನ್ನು ಹೇಳುವಾಗ ಬಾಲಬೋಧೆಯಲ್ಲಿ ಹಳ್ಳಿಯ ಪಾಠಶಾಲೆಯ ಅಯ್ಯನವರು ಶ ಷ ಸ ಹ ಳ ಳಕ್ಷ ಎಂದು ಮುಗಿಸುತ್ತಿದ್ದರು. ಇದನ್ನು ಳಕಾರ ಬೇರೆ ಕ್ಷಕಾರ ಬೇರೆ ಎಂದು ತಿಳಿದುಕೊಳ್ಳಲಾಗಿತ್ತು. ಕೇಶಿರಾಜನ ವಿವರಣೆಯಿಂದ ಳಕ್ಷವೆಂಬುದು ಸಂಸ್ಕೃತದ 'ಳ'ಕಾರ ಕ್ಷಳವೆಂದು ಈಗ ಸ್ಪಷ್ಟವಾಗಿದೆ.

## ಸ್ವರಾಧಿಕಾರದಲ್ಲಿ ಹೆಚ್ಚಿನ ಅಂಶಗಳು

ಹೊಸಪ್ರತಿಯಲ್ಲಿ ವ್ಯಾಖ್ಯಾನಕಾರನು ನಾಗವರ್ಮನ ಶಬ್ದಸ್ಮೃತಿಯನ್ನು ವಿಷಯವಿವರಣೆಗಾಗಿಯೂ, ಪ್ರಯೋಗಗಳಿಗಾಗಿಯೂ ಹೇರಳವಾಗಿ ಉಪಯೋಗಿಸಿಕೊಂಡಿದ್ದಾನೆ. ಶಬ್ದಮಣಿ ದರ್ಪಣದಲ್ಲಿಯ ಪ್ರಯೋಗಗಳನ್ನೆಷ್ಟೋ ಕೇಶಿರಾಜನು ಶಬ್ದಸ್ಮೃತಿಯಿಂದ ಎತ್ತಿಕೊಂಡಿರುವುದು ಸರ್ವವಿದಿತವಾಗಿದೆ. ಇಂಥ ಪ್ರಯೋಗಗಳಲ್ಲಿ ಕೆಲವು ಅಪೂರ್ಣವಾಗಿಯೂ, ಕೆಲವು ಓಲೆಯಗರಿಯ ಪಾಠದಲ್ಲಿರುವಂತೆಯೂ ಮುದ್ರಿತವಾಗಿವೆ. ಇದರಿಂದ ವ್ಯಾಸಂಗ ಮಾಡುವವರಿಗೆ ಪ್ರಯೋಗಗಳ ಅರ್ಥವು

---

* ಕನ್ನಡದ ಡಕಾರ ರೇಫಗಳೂ, ಉರ್ದುವಿನಲ್ಲಿ ರೇಫ ಡಕಾರಗಳಾಗಿ ಉಚ್ಚರಿತವಾಗುತ್ತವೆ. ಹಾಗೆಯೇ ಅಲ್ಲಿಯ ಡಕಾರ ರೇಫೆಗಳನ್ನು ನಾವು ರೇಫ ಡಕಾರಗಳಾಗಿ ಉಚ್ಚರಿಸುತ್ತೇವೆ. ಉರ್ದು ಎಂಬುದನ್ನು ನಾವು ಉಡುದು ಎಂದು ಹೇಳುತ್ತೇವೆ. ನಮ್ಮ ಉರ್ದು ಎಂದರೆ ಉದ್ದು (ಧಾನ್ಯ) ಅವರಲ್ಲಿ ಉಡದ್ ಆಗಿದೆ. ಇದು ಕನ್ನಡದಿಂದ ಉರ್ದು, ಮರಾಠಿ, ಹಿಂದಿ ಭಾಷೆಗಳಿಗೆ ಹೋದ ಶಬ್ದ. ಕೊಡಗನ್ನು ಅವರು ಕುರಗ್ ಎಂದು ಉಚ್ಚರಿಸುತ್ತಾರೆ. ಹಾಗೆಯೇ ನಮ್ಮ ಧಾರವಾಡವನ್ನು ಅವರು ಧಾರವಾರವೆಂದು ಹೇಳುತ್ತಾರೆ. ಇಂಗ್ಲಿಷಿನಲ್ಲಿಯೂ ಇದನ್ನೇ ಬಳಸಿಕೊಂಡಿದೆ. ಇದು ಅಕ್ಷರಗಳು ಏಕಸ್ಥಾನೀಯಗಳಾಗಿರುವುದರಿಂದಾದ ಪರಿಣಾಮ. ಡಕಾರ ರೇಫಗಳು ಮೂರ್ಧನ್ಯಗಳು.

ಸ್ಪಷ್ಟವಾಗುವುದಿಲ್ಲ. ಅದಕ್ಕಾಗಿ ಶಬ್ದಸ್ಮೃತಿಯನ್ನು ಎದುರಿಗೆ ಇಟ್ಟುಕೊಂಡು ಸರಿಯಾದ ಪ್ರಯೋಗಗಳನ್ನು ತಿಳಿದುಕೊಳ್ಳಬೇಕಾಗುತ್ತದೆ. ಹೊಸಪ್ರತಿಯಲ್ಲಿ ಯಾದರೋ ನಾಗವರ್ಮನ ಶಬ್ದಸ್ಮೃತಿಯಿಂದ ಪದ್ಯಗಳನ್ನು ಪೂರ್ತಿಯಾಗಿ ಕೊಟ್ಟಿದೆ. ಇಲ್ಲಿ ಕೆಲಕೆಲವೆಡೆಗಳಲ್ಲಿ ಪಾಠಾಂತರಗಳು ಇರುವುದರಿಂದ ಶಬ್ದಸ್ಮೃತಿಯ ಪಾಠಗಳ ಸಂದೇಹಾಂಶಗಳನ್ನು ಹೊಸ ಪ್ರತಿಯ ಸಹಾಯದಿಂದ ಕಳೆದುಕೊಳ್ಳಬಹು ದಾಗಿದೆ. ಉದಾಹರಣೆಗಾಗಿ ಪ್ಲುತಕ್ಕಾಗಿ ಕೊಟ್ಟಿರುವ ಪ್ರಯೋಗೋದಾಹರಣೆ ಯನ್ನು ತೆಗೆದುಕೊಳ್ಳೋಣ. ಸಾಹಿತ್ಯಪರಿಷತ್ತಿನ ಪ್ರತಿಯಲ್ಲಿ (ಸೂ. ೧೦ ರ ಪ್ರಯೋಗ) "ಕುಕೂಕೂ ೩ ಎಂದು ಕೋೞಿ ಕೂಗಿದುವಾಗಳ್'' ಎಂಬ ಕಂದದ ಕೊನೆಯಭಾಗವಿದೆ. ಇದನ್ನು ಕೇಶಿರಾಜನು ಶಬ್ದಸ್ಮೃತಿಯಿಂದ ತೆಗೆದುಕೊಂಡಿ ದ್ದಾನೆ. ಇದರ ಪೂರ್ಣ ಪಾಠವನ್ನು ಮದ್ರಾಸ್ ಪ್ರತಿಯಲ್ಲಿ ಶಬ್ದಸ್ಮೃತಿಯನ್ನು ನೋಡಿಕೊಟ್ಟಿದ್ದಾರೆ. ಅಲ್ಲಿಯ ಪಾಠಕ್ಕೂ ಹೊಸ ಪ್ರತಿಯ ಪಾಠಕ್ಕೂ ಸ್ವಲ್ಪ ವ್ಯತ್ಯಾಸವಿದೆ. ಈ ವ್ಯತ್ಯಾಸದಿಂದ ಅರ್ಥಕ್ಕೆ ಹಾನಿಯುಂಟಾಗದಿದ್ದರೂ ಔಚಿತ್ಯದ ದೃಷ್ಟಿಯಿಂದ ಹೊಸಪ್ರತಿಯ ಪಾಠ ಗ್ರಾಹ್ಯವಾದುದೆಂದು ತೋರುವುದು. ಕಾವ್ಯಾವ ಲೋಕನದ ಪದ್ಯ ಈ ಮುಂದಿನಂತಿದೆ.

> ಮೊಕ್ಕಳಮೆಸೆದಿಪ್ಪಿನವೊಳ |
> ವೊಕ್ಕುಚಿತಂ ಹ್ರಸ್ವದೀರ್ಘಸಹಿತಂ ಪ್ಲುತಮೆ ||
> ಕ್ಕೆಕ್ಕೆಯೆ ನೆಗೞ್ದ್ದುಮೊರ್ಮೊದಲೊಳೆ
> ಕುಕ್ಕೂಕೂ ಎಂದು ಕೋೞಿಕೂಗಿತ್ತಾಗಳ್ || (ಪದ್ಯ ೧೧)

ಹೊಸಪ್ರತಿಯಪಾಠ:—

> ಮೊಕ್ಕಳಮೆಸೆದಿಪ್ಪಿನವೊಳ |
> ಪೊಕ್ಕುವಚಿತ ಹ್ರ (ಸ್ವದೀ) ರ್ಘಸಹಿತಂಪ್ಲುತಮೆ ||
> ಕ್ಕೆಕ್ಕೆಯಿನೆೞ್ದ್ದುಮೊರ್ಮೊದಲೊಳೆ |
> ಕುಕ್ಕೂಕೂ ಎಂದು ಕೋೞಿಕೂಗಿತ್ತಾಗಳ್ ||

ಎಕ್ಕೆಕ್ಕೆಯೆನೆಗೞ್ದು ಎಂದು ಮೊದಲ ಪದ್ಯದಪಾಠ. ಇಲ್ಲಿ ನೆಗೞ್ ಎಂಬುದಕ್ಕೆ ಉಚಿತಾರ್ಥವಿಲ್ಲ. "ನೆಗೞ್ ಉದ್ಯೋಗಖ್ಯಾತಯೋಃ, ನಕ್ರೇಚ'' ಎಂದು ಕೇಶಿರಾಜನ ಧಾತುಪಾಠ. ಎಕ್ಕೆಕ್ಕೆಯೆ—ಎಕ್ಕೆಕ್ಕೆ ಎಂಬುದು • ಅತಿಶಯಾರ್ಥದಲ್ಲಿ ಪ್ರಯೋಗವಾಗುವುದು. ಅದನ್ನು ತೃತೀಯಾ ವಿಭಕ್ತಿಯಾಗಿಟ್ಟುಕೊಂಡು ಅರ್ಥ ಹೇಳಿದರೆ, ಅತಿಶಯದಿಂದ ಮಾಡಿ ಕೋಳಿಕೂಗಿತು ಎಂದಾಗುವುದು. ಇದು ಸರಿ ಯಲ್ಲ. ಅದನ್ನೇ ೨ನೆಯ ಪಾಠದಿಂದ ಎಕ್ಕೆಕ್ಕೆಯಿನೆೞ್ದು—ಕೋೞಿ ಮೊದಲೇ ಎದ್ದು ಅತಿಶಯವಾಗಿ ಕೂಗಿತು—ಎಂದು ಅರ್ಥಹೇಳಬಹುದು. ಅಥವಾ ಹೆಚ್ಚು ಸಂಖ್ಯೆ ಯಲ್ಲಿ ಎದ್ದು ಕೋಳಿಕೂಗಿತು ಎಂದೂ ಅರ್ಥ ಮಾಡಬಹುದು.

ಇದೇ ಸಂದರ್ಭದಲ್ಲಿ ಹೊಸಪ್ರತಿಯಲ್ಲಿ ಮತ್ತೊಂದು ಉದಾಹರಣೆಯನ್ನು ಕೊಟ್ಟಿದೆ.

ಕ್ರೂರಾತ್ಮಂ ವಂಚಕನವಿ |
ಚಾರಿ ದುರಾಚಾರಿ ಬಗೆಯದುಯ್ದಪನೆನ್ನಂ
ಹಾರಾಮಾ ಹಾರಾಮಾ
ಹಾರಾಮಾ ಎಂದು ಸೀತೆ ಬಾಯಟಿಂದತ್ತಳ್ || ಇದು

ನಾಗಚಂದ್ರನ ರಾಮಚಂದ್ರ ಚರಿತಪುರಾಣದ ಪದ್ಯ. ಅದರಪಾಠ ಹೀಗಿದೆ.

ಕ್ರೂರಾತ್ಮಂ ವಂಚಕನವಿ |
ಚಾರಿ ದುರಾಚಾರಿ ಬಗೆಯದುಯ್ದಪನೆನ್ನಂ |
ಹಾರಾಮಾ ಹಾರಾಮಾ |
ಬಾರಿಪರಾರೆಂದುಸೀತೆ ಶೋಕಂಗೆಯ್ದಳ್.

ಆಶ್ವಾಸ. ೯. ಪದ್ಯ ೧೧೩.

ಈ ಪದ್ಯದಲ್ಲಿ ಪ್ಲುತವಿಲ್ಲ. ಪ್ಲುತವಿಲ್ಲದೆ ಈ ಪದ್ಯದಲ್ಲಿ ಸ್ವಾರಸ್ಯವಿಲ್ಲ. ಸೀತೆ ದುಷ್ಟರಾವಣನು ಒಯ್ಯುತ್ತಿದ್ದಾನೆ ಹಾರಾಮಾ ಹಾರಾಮಾ ಎಂದು ಕೂಗಿ ಕೊಂಡಳು ಎಂದು ಹೇಳುವಲ್ಲಿ ಕವಿಯ ಮುಖ್ಯೋದ್ದೇಶವು ವ್ಯಕ್ತವಾಗದು. ಅಲ್ಲದೆ ಆ ರೋದನದಲ್ಲಿ ಉಚ್ಚಧ್ವನಿ ಇರಬೇಕಾದುದರಿಂದ ನಾಗಚಂದ್ರನು ಪ್ಲುತ ಪ್ರಯೋಗ ಮಾಡಿರಬೇಕು ಹೊಸಪ್ರತಿಯಲ್ಲಿ ಸರಿಯಾದ ಮೂಲಪಾತ್ಯಕೆಯಿಂದ ಈಪದ್ಯವನ್ನು ಸಂದರ್ಭೋಚಿತವಾಗಿ ಉದಾಹರಿಸಿದೆ. ಇದನ್ನು ಹೊಸಪ್ರತಿಯಲ್ಲಿ ವ್ಯಾಖ್ಯಾನಕಾರನು ಹೊಸದಾಗಿ ಸೇರಿಸಿದ್ದಾನೆ ಎಂದು ಹೇಳಬಹುದ? ಇದು ವರೆಗೆ ಸಿಕ್ಕಿದ ಪ್ರತಿಗಳಲ್ಲಿ ಈ ಪ್ರಯೋಗವೇ ಇಲ್ಲವೆಂಬ ಕಾರಣದಿಂದ ಇದು ಪ್ರಕ್ಷಿಪ್ತವೆಂದು ಹೇಳಲಾಗದು. ಕೇಶಿರಾಜನು ಈ ಪದ್ಯದ ಕೊನೆಯ ಭಾಗವನ್ನು ಪ್ಲುತಕ್ಕಾಗಿ ಬೇರೆಡೆಯಲ್ಲಿ ಉಪಯೋಗಿಸಿದ್ದಾನೆ. ಪ್ಲುತಕ್ಕೆ ಸ್ವರ ಪರವಾದಾಗ ಸಂಧಿಯಾಗದೆಂಬ ಪ್ರಕೃತಿಭಾವ ನಿರೂಪಣ ಪ್ರಕರಣದಲ್ಲಿ ( ಸಾ. ಪ. ಪ್ರ ). ಸೂ ೫೬ರ ಕೆಳಗೆ ಹಾರಾಮೋ ಎಂದು ಸೀತೆ ಬಾಯಟಿಂದತ್ತಳ್ ಎಂಬ ಪ್ರಯೋಗವಿದೆ. ಇಲ್ಲಿ ಪ್ಲುತಕ್ಕಾಗಿ ಈ ಪಾಠವನ್ನು ಉದಾಹರಿಸಿರುವುದರಿಂದ ನಾಗಚಂದ್ರನು ಪ್ಲುತದ ಉದಾಹರಣೆಯನ್ನು ದೃಷ್ಟಿಯಲ್ಲಿಟ್ಟುಕೊಂಡು ಈ ಪದ್ಯ ವನ್ನು ರಚಿಸಿರುವನೇನೋ ಎಂದೆನ್ನಿಸುವುದು.

## —:ವರ್ಗಪ್ರಕರಣ:—

ವರ್ಗಪ್ರಕರಣವೆಂಬ ವಿಭಾಗ ಮಾಡಿಕೊಂಡು ಹೊಸಪ್ರತಿಯಲ್ಲಿ ಪಂಚವರ್ಗ ಗಳನ್ನು ಹೇಳಿದೆ. ಮಹಾಪ್ರಾಣಾಕ್ಷರಗಳ ಪ್ರಯೋಗಕ್ಕಾಗಿ ನಾಗವರ್ಮನ ಶಬ್ದಸ್ಮೃತಿಯಿಂದ ಪದ್ಯಗಳನ್ನು ಉದಾಹರಿಸಿದೆ. ಶಬ್ದಸ್ಮೃತಿಯಲ್ಲಿ ಸಕಾರವು ಛಕಾರವಾಗುವುದೆಂಬುದಕ್ಕೆ ಉದಾಹೃತವಾದ

(೧) ಪದಿನೆಣ್ಛಾಸಿರಲೋಹವಕ್ಕರೆಯ ಜಾತ್ಯಶ್ವಂಗಳ್ | ಎಂಬ ೭೭ನೆಯ ಪದ್ಯವನ್ನೂ

(೨) ತ್ರ್ಯಂಬಕಲೋಚನಾರ್ಚ್ಚಿಗಮಿದಗ್ಗಳಂ | ಎಂಬ ೨೮ನೆಯ ಪದ್ಯವನ್ನೂ ಹೆಚ್ಚಿಗೆ ಉದಾಹರಣೆಗಾಗಿ ಎತ್ತಿಕೊಂಡಿದೆ.

ಕನ್ನಡದಲ್ಲಿ "ಒಳವು ಮಹಾಪ್ರಾಣಂಗಳ್" ಎಂಬ ಸೂ. ೧೫ರ ಕೆಳಗೆ "ಭಾವಂ, ಕುಂಭಂ, ಭಾಷೆ ಇವು ಮೂಱಕ್ಕಂ ವಿಕಲ್ಪದಿನಲ್ಪಪ್ರಾಣಮುಂಟು" ಎಂಬ ಹೆಚ್ಚಿನ ಪಾಠವಿದೆ. ಸಾಹಿತ್ಯ ಪರಿಷತ್ತಿನ ಪ್ರತಿಯಲ್ಲಿ ಕಂಭಕ್ಕಂ ಭಾಸೆಗಂ ವಿಕಲ್ಪ ಮೆಂದೂ, ಲಿಂಗಣಾರಾಧ್ಯನ ಪ್ರತಿಯಲ್ಲಿ ಭಾಸೆಗಂ ಕಂಭಕ್ಕಂ ವಿಕಲ್ಪಂ ಎಂದೂ ಇದೆ. ಇಲ್ಲಿ ಇವುಗಳ ಜೊತೆಗೆ ಭಾವಂ ಎಂಬುದನ್ನು ಸೇರಿಸಿದೆ. ಇದೇ ಸೂತ್ರದ (೧೫ ಸಾ. ಪ. ಪ್ರ.) ಉತ್ತರಾರ್ಧದಲ್ಲಿ ಹೇಳಿದ ವರ್ಗಪಂಚಮಾಕ್ಷರವನ್ನು ಕುರಿತು ಬಿಂದುವಿನ ವಿಚಾರವಾಗಿ ಹೇಳುವ ಸಂದರ್ಭದಲ್ಲಿ ಪರಿಶೀಲಿಸಲಾಗುವುದು.

ಇಷ್ಟಕ್ಕೆ ವರ್ಗಪ್ರಕರಣವು ಮುಗಿದು ಅವರ್ಗದಲ್ಲಿರುವ ಯ,ಲ,ವ, ಅಕ್ಷರಗಳ ವೈಶಿಷ್ಟ್ಯವನ್ನು ಹೇಳುವ ಸೂತ್ರವು (೧೬. ಸಾ. ಪ. ಪ್ರ) ಪ್ರಸಕ್ತವಾಗಿದೆ. ಕನ್ನಡದಲ್ಲಿ ಯ ಲವಗಳು ಅನುನಾಸಿಕಗಳೂ, ಅನನುನಾಸಿಕಗಳೂ ಆಗಿವೆಯಷ್ಟೇ! ಇವುಗಳ ಪ್ರಯೋಗಕ್ಕಾಗಿ ಅಚ್ಚಿನ ಪ್ರತಿಗಳಲ್ಲಿ ಬರಿಯ ಬಿಡಿಬಿಡಿಯಾದ ಪದಗಳು ಉದಾಹೃತವಾಗಿವೆ. ಶಬ್ದ ಸ್ಮೃತಿಯಲ್ಲಿಯಾದರೋ ಇವುಗಳಲ್ಲಿ ಒಂದೊಂದಕ್ಕೂ ಒಂದೊಂದು ಪದ್ಯವು ಪ್ರಯೋಗವಾಗಿದೆ. ಹೊಸಪ್ರತಿಯಲ್ಲಿ ಕಾವ್ಯಾವಲೋಕನದ ಪದ್ಯವೊಂದನ್ನು ಯಕಾರದ ಅನುನಾಸಿಕೋದಾಹರಣೆಗಾಗಿ ಎತ್ತಿಕೊಂಡಿದೆ. ಲಕಾರಕ್ಕೂ ಅಲ್ಲಿಯ ಉದಾಹರಣೆಯ ಜೊತೆಗೆ ಮತ್ತೊಂದು ಉದಾಹರಣೆಯಿದೆ. ವಕಾರಕ್ಕಾಗಿ ಇಲ್ಲಿರುವ ಪದ್ಯವಿದು:—

ಕಾವಂಗೆಂದು ವಸಂತಂ |
ಭಾವಿಸಿ ತಂದಿಟ್ಟನೀಳದರಸುನೆಯೆನಿಕುಂ ||
ಮಾವಿನ ಪೂವಿನ ಕಾವಿನ |
ತಾವಿನ ಮೊದಲಲ್ಲಿತೀವಿದಳಿಗಳ ಬಳಗಂ |

ಲಕಾರಕ್ಕಾಗಿ ಉದಾಹೃತವಾದ ಹೊಸಪದ್ಯವು ಅಭಿನವ ಪಂಪನನ್ನು ಕುರಿತದ್ದಾಗಿದೆ.

ಕಲ್ಲೊಸರ್ಗುಂ ಕೊರ್ಯ್ದೊಣಗಿದ |
ಪುಲ್ಲೆಲ್ಲಂ ಚಿಗುರ್ಗುಮಿಳೆಯೊಳಡಿಗೆಡೆದ ಮರಂ ||
ಪಲ್ಲವಿಕುಮುಮುಮು ಕವಿಗಜ |
ಮಲ್ಲಂ ಹಂಪುಗನ ವಚನರಚನಾಮೃತದೊಳ್ ||

ಈ ಪದ್ಯವು ಕವಿಚರಿತೆಯಲ್ಲಿ ಕಂತಿಯನ್ನು (ಕ್ರಿ. ಶ. ೧೧೦೫) ಕುರಿತು ಚರ್ಚಿಸುವಾಗ ಉದಾಹೃತವಾಗಿದೆ. ಅಲ್ಲಿನ ಪಾಠ ಹೀಗಿದೆ:—

ಕಲ್ಲೊಳಸರ್ಗುಂ ಕೊಯ್ದೊಣಗಿದ | ಪುಲ್ಲೆಲ್ಲಂ ಚಿಗುರ್ಗುಮುಡಿವಿಗಡಿದ
ಮರಂಗಳ್ |
ಪಲ್ಲವಿಕುಮುಮು ಕವಿಗಜ | ಮಲ್ಲನ ಪಂಪುಗನ ಕಾವ್ಯ ರಸತಾ
ಮೃತದಿಂ ||

ಈ ಪದ್ಯವು ನಾಗಚಂದ್ರನ ಕವಿತಾಸಾಮರ್ಥ್ಯವನ್ನು ಮುಕ್ತಕಂಠದಿಂದ ಕೊಂಡಾಡು ವುದು. ಈ ಪದ್ಯವು ಜಗನ್ನಾಥದಾಸರ ಹರಿಕಥಾಮೃತಸಾರದ ವಿಷಯವಾಗಿ ದಾಸರೊಬ್ಬರು ಕಳೆದ ಶತಮಾನದಲ್ಲಿ ಇದೇ ಅಭಿಪ್ರಾಯ ಬರುವಂತೆ ಹಾಡಿದು ದನ್ನು ಜ್ಞಾಪಕಕ್ಕೆ ತರುವುದು

ಹೊಸ ಪ್ರತಿಯಲ್ಲಿ ಸ್ವರಪ್ರಕರಣ, ವರ್ಗಪ್ರಕರಣ, ಅವರ್ಗಪ್ರಕರಣ ಇವು ಗಳು ಕ್ರಮವಾಗಿ ಉಕ್ತವಾಗಿ ಆಮೇಲೆ ಯೋಗವಾಹಗಳಲ್ಲಿ ಬಿಂದು, ವಿಸರ್ಗ, ಜಿಹ್ವಾಮೂಲೀಯ ಉಪಧ್ಮಾನೀಯಗಳನ್ನು ಹೇಳಿದೆ. ಇಲ್ಲಿ ಬಿಂದುವನ್ನು ಕುರಿತು ಸ್ವಲ್ಪ ವಿಚಾರ ನಡೆಸಿದೆ.

## ಕನ್ನಡದಲ್ಲಿ ಬಿಂದುವಿನ ಆವಶ್ಯಕತೆ

ಕೇಶಿರಾಜನು ಬಿಂದುವನ್ನು ಒಪ್ಪಿಕೊಂಡಿದ್ದಾನೆ. ಅದರ ಸ್ವರೂಪವನ್ನೂ ನಿರೂಪಿಸಿದ್ದಾನೆ. ಬಿಂದುಮನುಸ್ವಾರಂ ಎಂಬ ೧೧ನೆಯ ಸೂತ್ರದಲ್ಲಿಯೂ, ೧೭ನೆಯ ಸೂತ್ರದ ವೃತ್ತಿಯಲ್ಲಿಯೂ ಬಿಂದುವಿನ ಸ್ವರೂಪಸ್ಥಾನಗಳನ್ನು ಪ್ರತಿ ಪಾದಿಸಿದ್ದಾನೆ. ಇದನ್ನು ವಿಸರ್ಗ, ಜಿಹ್ವಾಮೂಲೀಯ, ಉಪಧ್ಮಾನೀಯಗಳ ಜೊತೆಯಲ್ಲಿ ಸೇರಿಸಿ ಯೋಗವಾಹವೆಂದು ಹೆಸರಿಸಿದ್ದಾನೆ. ವಿಸರ್ಗ, ಜಿಹ್ವಾ ಮೂಲೀಯ, ಉಪಧ್ಮಾನೀಯಗಳು ಕನ್ನಡಗಲ್ಲಿ ಇಲ್ಲವೆಂಬುದನ್ನು ಸೂತ್ರ ೩೩ ರಲ್ಲಿ ಹೇಳಿ ಕನ್ನಡದ ದೇಶೀಯಾಕ್ಷರಗಳಲ್ಲಿ ಬಿಂದುವನ್ನು ಒಪ್ಪಿಕೊಂಡು ಒಟ್ಟಿಗೆ ೪೭ ಅಕ್ಷರಗಳು ಶುದ್ಧಗೆ ಅಚ್ಚಗನ್ನಡಕ್ಕೆ ಎಂದು ನಿರ್ಧರಿಸಿದ್ದಾನೆ. ಇಷ್ಟೆಲ್ಲವನ್ನೂ ವಿಚಾರಿ ಸಿದರೆ ಸೊನ್ನೆಯನ್ನು ಕೇಶಿರಾಜನು ಒಪ್ಪಿದಂತಾಗುತ್ತದೆ. ಅಲ್ಲದೆ ಕೆಲವು ಶಬ್ದ ಗಳು 'ನಿಜ ಬಿಂದುಗಳ್,' 'ಕೆಲಕೆಲವು ವಿಕಲ್ಪಾರ್ಥ ಬಿಂದುಗಳ್' ( ಸೂತ್ರ ೩೬ ) ಎಂದು ಹೇಳುವ ಮೂಲಕವಾಗಿ ಕನ್ನಡ ಶಬ್ದಗಳಲ್ಲಿ ಬಿಂದು ಸ್ವಾಭಾವಿಕವಾಗಿ— ಕೇಶಿರಾಜನ ಮಾತಿನಲ್ಲಿ ಹೇಳಬೇಕಾದರೆ —'ನಿಜದಿಂ' ಇದೆ ಎಂದು ನಿರ್ಧರಿಸಿ ದಂತಾಗುವುದು. ಅಷ್ಟೇ ಅಲ್ಲ, ಮನಕಾರಗಳ ಪರದಲ್ಲಿ ವ್ಯಂಜನವಿರಲಿ, ಇರದಿರಲಿ ಎಂದರೆ ವ್ಯಂಜನವಿಲ್ಲದೆ ಆ ವಾಕ್ಯ ಅಲ್ಲಿಗೆ ಮುಗಿದರೂ (ಸ್ವರ ಮಾತ್ರ ಪರವಾಗ ಕೂಡದು) ಆ ಮನಕಾರಗಳು ಬಿಂದುವಾಗುತ್ತವೆ ಎಂದೂ ( ಸೂ. ೧೬೧ ) ಸಮಾಸ ಪ್ರಕರಣದಲ್ಲಿ ಕ್ರಿಯಾಸಮಾಸವನ್ನೂ ( ಸೂ. ೧೬೭ ) ಕರ್ಮಧಾರಯ ವನ್ನೂ (ಸೂ. ೧೭೦, ೧೭೨) ಹೇಳುವಾಗ ಬಿಂದು ಬರುತ್ತದೆ ಎಂದೂ ಅಭಿಪ್ರಾಯ

ಪಟ್ಟಿದ್ದಾನೆ. ಹಾಗೆಯೇ ನಾಮಪ್ರಕರಣದಲ್ಲಿ ವಿಭಕ್ತಿ ಪ್ರತ್ಯಯಗಳನ್ನು ಪ್ರತಿ ಪಾದಿಸುವಾಗ 'ಬಿಂದುವದಂತಕ್ಕೆ' (ಸೂ. ೧೦೫) ಎಂದೂ, ಬಹು ವಚನ ಪ್ರತ್ಯಯ ಗಳ್ ಎಂಬುದು ಅಕಾರಾಂತ ಶಬ್ದಗಳಿಗೆ ಸೇರುವಾಗ ನಡುವೆ ಬಿಂದು ಬರುವು ದೆಂದೂ (ಸೂ ೧೦೩) ಇದರಂತೆಯೇ ಚತುರ್ಥೀವಿಭಕ್ತಿ ಪ್ರತ್ಯಯ 'ಗೆ' ಅಕಾರಾಂತ ಪದಗಳಿಗೆ ಬಿಂದುವೆರಸು ಹತ್ತುತ್ತದೆ (ಸೂ. ೧೧೩) ಎಂದೂ ನಿರ್ದೇಶಿ ಸಿದ್ದಾನೆ. ಕೆಲವು ತದ್ಧಿತ ಪ್ರತ್ಯಯಗಳು ಸೇರುವಾಗಲೂ ಬಿಂದು ಬರುವುದನ್ನು ತದ್ಧಿತ ಪ್ರಕರಣದಲ್ಲಿ ನಿರೂಪಿಸಿದೆ. ಇಷ್ಟೆಲ್ಲದುದರ ಮಥಿತಾರ್ಥವು ಅಚ್ಚಗನ್ನಡ ದಲ್ಲಿ ಬಿಂದುವಿನ ಆವಶ್ಯಕತೆ ಇದೆಯೆಂದು ಆಗುತ್ತದೆ. ಆದರೆ ವಿಚಾರ ಮಾಡಿ ನೋಡಿದರೆ ಅಚ್ಚಗನ್ನಡಕ್ಕೆ ಬಿಂದು ಅಗತ್ಯವಾದುದೇ ಎಂಬ ವಿಷಯದಲ್ಲಿ ಸಂದೇ ಹವು ತಲೆದೋರುವುದು. ಕೇಶಿರಾಜನ ಮತದಂತೆ ಬಿಂದು ಯೋಗವಾಹದ ಗುಂಪಿಗೆ ಸೇರಿದೆಯಷ್ಟೆ. ವಿಸರ್ಗ, ಜಿಹ್ವಾಮೂಲೀಯ, ಉಪಧ್ಮಾನೀಯಗಳು ಕನ್ನಡಕ್ಕೆ ಬೇಕಾಗಿಲ್ಲವೆಂದು ಹೇಳುವ ಕೇಶಿರಾಜನು ಬಿಂದು ಮಾತ್ರ ಕನ್ನಡಕ್ಕೆ ಬೇಕೆಂದು ಅಭಿಪ್ರಾಯಪಟ್ಟುದು ಆಶ್ಚರ್ಯವಾಗಿದೆ. ಇವು ನಾಲ್ಕನ್ನೂ, ಯೋಗ ವಾಹದ ಗುಂಪಿಗೆ ಸೇರಿಸಿರುವುದರಿಂದ ಬಿಂದುವೂ ಸಂಸ್ಕೃತ ಭಾಷೆಯ ಸೊತ್ತು ಎಂದು ಒಪ್ಪಬೇಕಾಗುತ್ತದೆ. ಅಥವಾ ಕುಳ ಳಕಾರದಂತೆ ಕೇಶಿರಾಜನು, ಕನ್ನಡ ದಲ್ಲಿ ಬಿಂದುವೂ ಇದೆಯೆಂದೂ ಅದು ಸಂಸ್ಕೃತದಿಂದ ಬಂದ ಬಿಂದುವಲ್ಲ, ಉಳಿದ ವರ್ಣಮಾಲೆಯ ಅಕ್ಷರಗಳಂತೆ ಅದೂ ಅಚ್ಚಗನ್ನಡದ ಅಕ್ಷರವೆಂದೂ ಹೇಳಬಹು ದಾಗಿದ್ದಿತು. ಹಾಗಿಲ್ಲದೆ, ಯೋಗವಾಹದ ಗುಂಪಿಗೆ ಅದನ್ನು ಸೇರಿಸಿಯೂ, ಅದು ಅಚ್ಚಗನ್ನಡದ ಶುದ್ಧಗೆಯಲ್ಲಿರುವಂತೆ ಹೇಳಿರುವುದು ಕುತೂಹಲವನ್ನು ಹುಟ್ಟಿ ಸುವ ಮಾತಾಗಿದೆ. ಬಿಂದು ಯೋಗವಾಹದ ಗುಂಪಿಗೆ ಸೇರಿರುವ ಕಾರಣವೊಂದ ರಿಂದಲೇ ಅದು ಕನ್ನಡದ ಅಕ್ಷರವಲ್ಲವೆಂದು ಹೇಳಿ ಬಿಡಬಹುದು. ಹಾಗಾದರೆ ಕನ್ನಡ ಮಾತಿನಲ್ಲಿ ಬರುವ ಬಿಂದುವಿನ ಗತಿಯೇನು ? ಅದೀಗ ವಿಚಾರಣೀಯಾಂಶ. ಈ ಬಿಂದು ಎಲ್ಲೆಲ್ಲಿ ಯಾವ ಸ್ವರೂಪದಿಂದ ಬರುತ್ತದೆ ಎಂಬುದನ್ನು ನೋಡೋಣ. ಇದು ಕನ್ನಡದಲ್ಲಿ ಎರಡು ವಿಧವಾಗಿದೆ; ಒಂದು ಶಬ್ದಾಂತರಾಳದಲ್ಲಿ, ಇನ್ನೊಂದು ಬಾಹ್ಯಾಂಗದಲ್ಲಿ—ಎಂದರೆ ಆದೇಶವೋ ಆಗಮವೋ ಆಗಿ ಶಬ್ದದ ಕೊನೆಯಲ್ಲಿ ಬರುತ್ತದೆ. ಮೊದಲು ಬಾಹ್ಯಾಂಗದಲ್ಲಿಯ ಬಿಂದುವನ್ನು ನೋಡೋಣ.

ಅಕಾರಾಂತ ಪುಲ್ಲಿಂಗ ಪದಗಳಿಗೆ ಗಳ್ ಪ್ರತ್ಯಯ ಸೇರುವಾಗ ಇದು ಬರುತ್ತದೆ. ಈ ಬಿಂದು ಸಂಸ್ಕೃತ ಪದಗಳಲ್ಲಿ ನಿತ್ಯ. ಇಲ್ಲಿ ಸಂಸ್ಕೃತ ಪದದಲ್ಲಿ ಬಿಂದು ನಿತ್ಯ ಎಂಬ ಮಾತು ಮುಖ್ಯವಾದುದು. ಅದೇ ಕನ್ನಡದಲ್ಲಿ ಐಚ್ಛಿಕವಾಗಿದೆ; ಎಂದರೆ ಇದು ಅಗತ್ಯವಿಲ್ಲವೆಂದ ಹಾಗಾಯಿತು. ಐಚ್ಛಿಕವಾಗಿಯಾದರೂ ಏಕೆ ? ಎಂದು ಕೇಳಿದರೆ, ಅದು ಸಂಸ್ಕೃತದ ಸಾರೂಪ್ಯದ ಪ್ರಭಾವವೆಂದು ಹೇಳಬೇಕು ಅಷ್ಟೆ. ಚತುರ್ಥೀ ವಿಭಕ್ತಿಯ 'ಗೆ' ಪ್ರತ್ಯಯ ಸೇರುವಾಗಲೂ ಹೀಗೆಯೇ. ಅಲ್ಲದೆ ಪುಲ್ಲಿಂಗ ಅಕಾರಾಂತ

ಪದಗಳನ್ನು ಆಧುನಿಕ ಮತದಂತೆ 'ನ್' ಅಂತವಾಗಿ ಇಟ್ಟುಕೊಂಡರೆ ಈ ಬಿಂದು ಎಷ್ಟು ಅನಾವಶ್ಯಕವೆಂದು ಹೊಳೆಯದಿರದು. ಆಗ ಆಕ್ಷೇಪಣವೊಂದು ತಲೆದೋರ ಬಹುದಾಗಿದೆ. ರಾಮಂಗೆ, ಅರಸಂಗೆ, ಆತಂಗೆ ಎಂದು ಬರೆಯುವಾಗ 'ನ್' ಕಾರ ವನ್ನಿಡದೆ ಬಿಂದುವನ್ನೇತಂದು ಬರೆಯಲಾಗುತ್ತದೆ, ಇದನ್ನು ಬಿಡಲಾದೀತೇ? ಎಂಬುದೇ ಆ ಆಕ್ಷೇಪ. ಇದು ಸಮಂಜಸವಾದ ಆಕ್ಷೇಪವಲ್ಲ. ಇದಕ್ಕೆ ಕೇಶಿ ರಾಜನೇ ದಾರಿ ತೋರಿಸಿದ್ದಾನೆ. ಅದು ಕನ್ನಡ ಭಾಷೆಯ ಜಾಯಮಾನಕ್ಕೆ ಅನುಗುಣವಾಗಿದೆ. ಸೂತ್ರ ೧೫ ರ ಕೆಳಗೆ ಅನುನಾಸಿಕೆಗಳಿಗೆ ಉದಾಹರಿಸಿರುವ ಪದ್ಯದಲ್ಲಿ ಕೇಶಿರಾಜನು ವ್ಯಾಸಸ್ಥಾನದಲ್ಲಿ ಬಂದಿರುವ ಅನುನಾಸಿಕೆಗಳನ್ನು ಹೇಳಿದ್ದಾನೆ. ಅಲ್ಲಿ ಉದ್ದೇಶಪೂರ್ವಕವಾಗಿ ಅನುಸ್ವಾರದ ಸ್ಥಾನದಲ್ಲಿ ಅನುನಾ ಸಿಕವನ್ನಿಟ್ಟಿರುವುದು ಗಮನಿಸತಕ್ಕ ವಿಷಯವಾಗಿದೆ. ಆ ಪದ್ಯವಾವುದೆಂಬದನ್ನು ಎಲ್ಲರೂ ಬಲ್ಲರು. ಸಂದರ್ಭ ಸ್ಮರಣೆಗಾಗಿ ಅದನ್ನು ಇಲ್ಲಿ ಉದಾಹರಿಸಿದೆ.

ಬಿಙ್ಕಂಪೆತ್ತೆಸೆವಞ್ಚಿಯ ।
ಸಙ್ಕುಳಮುನ್ ತೊಣ್ಡುಗೆಡೆವ ಶುಕಸಾರಿಕೆಯಂ ||
ಸೊಙ್ಕಿ ಬಲವನ್ದು ತೀಡುವ
ತೆಙ್ಕಣಗಾಳಿಯುಮುದೇಂ ಮನಞ್ಗೊಳಿಸಿದುದೋ ||

ಬಿಙ್ಕಂ, ಅಞ್ಚಿ, ತೊಣ್ಡು, ಬಲವನ್ದು— ಇಲ್ಲಿ ಕ,ಚ,ಡ,ದ ಇವು ನಾಲ್ಕು ವರ್ಗ ದಕ್ಷರಗಳ ಹಿಂದೆ ಆಯಾ ವರ್ಗಗಳ ಅನುನಾಸಿಕಗಳನ್ನೇ ಇಟ್ಟು ಬರೆಯಲಾಗಿದೆ. ಆದರೆ ಪವರ್ಗಾಕ್ಷರದ ಅನುನಾಸಿಕವು ಇದರಲ್ಲಿ ಅಚ್ಚಾಗಿಲ್ಲ. ಪಂಚವರ್ಗಗಳ ಅಕ್ಷರಗಳ ಜೊತೆಗೆ ಸಂಯೋಗವಾಗುವ ಬಿಂದುವಿನ ಸ್ಥಾನದಲ್ಲಿ ಆಯಾವರ್ಗದ ಅನುನಾಸಿಕಾಕ್ಷರವನ್ನಿಟ್ಟು ಕವಿ ಚಮತ್ಕಾರವಾಗಿ ಈ ಪದ್ಯವನ್ನು ಬರೆದಂತೆ ಕಾಣು ತ್ತದೆ. ಆದರೆ ಪವರ್ಗ ಪಂಚಮಾಕ್ಷರವು ಇಲ್ಲಿ ಅಚ್ಚಾಗಿಲ್ಲ. ಆ ಪವರ್ಗ ಪಂಚಮಾಕ್ಷ ರವು ಈ ಪದ್ಯದಲ್ಲಿದೆ. ಅದರ ಹಿಂದೆ ಬಿಂದುವಿದ್ದುದನ್ನು ಅನುನಾಸಿಕವಾಗಿ ಶಬ್ದಮಣಿ ದರ್ಪಣದ ಯಾವ ಪ್ರಕಟನೆಯಲ್ಲಿಯೂ ಅಚ್ಚು ಹಾಕಿಸಿಲ್ಲ. ಬಿಙ್ಕಮ್ಪೆತ್ತೆಸೆವ ಎಂಬಲ್ಲಿ ಪವರ್ಗದ ಅನುನಾಸಿಕವನ್ನಿಟ್ಟರೆ ಈ ಪ್ರಯೋಗದ ಔಚಿತ್ಯವು ಪೂರ್ಣವಾಗುವುದು. ನಾಗವರ್ಮನ ಶಬ್ದ ಸ್ಮೃತಿಯಲ್ಲಿ ಈ ಪದ್ಯವು ಸೂತ್ರ ೫ ಕ್ಕಾಗಿ ಉದಾಹೃತವಾಗಿದೆ. ಅಲ್ಲಿಯೂ 'ಬಿಙ್ಕಮ್ಪೆತ್ತೆಸೆವ' ಎಂಬಲ್ಲಿ ಬಕಾರ ಪೂರ್ವದಲ್ಲಿಯ ಬಿಂದುವಿಗೆ ವರ್ಗ ಪಂಚಮಾಕ್ಷರವನ್ನಿಟ್ಟು ಅಚ್ಚು ಹಾಕಿಸಿರುವುದು ನಮ್ಮೀ ಅಭಿಪ್ರಾಯವನ್ನು ಬಲಪಡಿಸುತ್ತದೆ. ಹೊಸ ಪ್ರತಿಯಲ್ಲಿಯೂ ಹೀಗೆಯೇ ಬರೆದಿದೆ. ಅಲ್ಲಿಯ ವಿವ ರಣೆ ಎಷ್ಟು ಪ್ರಶಸ್ತವಾಗಿದೆ ಎಂಬುದನ್ನು ಈ ಮುಂದಿನ ವಾಕ್ಯಗಳಿಂದ ಅರಿಯ ಬೇಕು ''ಬಿಙ್ಕಸಙ್ಕುಳಮೆಂಬಲ್ಲಿ, ಅಞ್ಚಿಯೆಂಬಲ್ಲಿ, ತೊಣ್ಡ ಎಂಬಲ್ಲಿ, ಬನ್ದು ಎಂಬಲ್ಲಿ, ಏಮ್ಮನಞ್ಗೊಳಿಸಿತೆಂಬಲ್ಲಿ, ವರ್ಗಾಂತ್ಯಾಕ್ಷರಮನನುನಾಸಿಕೆಯೆಂದ ಱಿವುದು.'' ಇಲ್ಲಿ 'ಏಮ್ಮನಞ್ಗೊಳಿಸಿತು' ಎಂಬಲ್ಲಿಯ ಮಕಾರದ ಹಿಂದಿನ

ಬಿಂದುವಿಗೆ ಮಕಾರ ದ್ವಿತ್ವವಾಗಿ ಬರೆದು ವರ್ಗಪಂಚಮಾಕ್ಷರವಾಗಿ ವ್ಯವಹರಿಸಿದೆ. ಈ ಪದ್ಯದಲ್ಲಿ ಬಿಂದುವಿನ ಸ್ಥಾನದಲ್ಲಿ ವರ್ಗ ಪಂಚಮಾಕ್ಷರವನ್ನು ಬಳಸಿದೆ. ಮುಂದೆ ಸೂತ್ರ ೧೬೧ ರಲ್ಲಿ ನೀಮ್, ನೀನ್ ಇವುಗಳಲ್ಲಿರುವ ಕೊನೆಯ ಮ್, ನ್, ಗಳು ಅವುಗಳ ಮುಂದೆ ವ್ಯಂಜನವಿದ್ದಲ್ಲಿ ಬಿಂದುವಾಗುತ್ತವೆ ಎಂದೂ, ಅಥವಾ ಆ ವ್ಯಂಜ ನಾಕ್ಷರವಿರದಿದ್ದರೂ ಇವು ಬಿಂದುವಾಗಿಯೇ ಉಳಿಯುತ್ತವೆ ಎಂದೂ ಹೇಳುತ್ತಾನೆ. ಹೀಗೆ ಹೇಳುವುದರ ಔಚಿತ್ಯವೇನು ? ಇದೇ ಸೂತ್ರದ ಉತ್ತರಾರ್ಧದಲ್ಲಿ, "ವರ್ಗ ಮಿದಿರಿರೆ ತನಗೆ ವಿಕಲ್ಪದೆ ತದೀಯ ಪಂಚಮುಮುಕ್ಕುಂ" ಎಂದು ಹೇಳಿದ್ದಾನೆ. ಇಲ್ಲಿ ಮ್, ನ್, ಕಾರಗಳಿಗೆ ಬಂದ ಬಿಂದು ವಿಕಲ್ಪವಾಗಿ ವರ್ಗಪಂಚಮಾಕ್ಷರವಾಗುವು ದೆಂದು ಕೇಶಿರಾಜನ ಅಭಿಪ್ರಾಯ. ಆದಕ್ಕಾಗಿ ಅವನು ಕೊಡುವ ಉದಾಹರಣೆ ಗಳು :—

ಅವಜ್ಕಡುಗಲಿ, ಅವಞ್ಚಲವಾದಿ, ಕರಣ್ಟಕಂ,
ಕೆನ್ದಳಿರ್, ಕೆಮ್ಮಣ್, ಹೊಮ್ಬಣ್ಣಂ.

ಇಲ್ಲಿ ವರ್ಗಪಂಚಮಾಕ್ಷರಗಳಾದ ಙ, ಞ, ಣ, ನ, ಮಕಾರಗಳ ಉಪಯೋಗ ವಿಕಲ್ಪವೆಂದು ಹೇಳಿದ್ದಾನೆ. ಎಂದರೆ ಬಿಂದುವಿನ ಸ್ಥಾನದಲ್ಲಿ ವರ್ಗಪಂಚಮಾಕ್ಷರ ಗಳು ಬರುವುವೆಂದು ಅವನ ಅಭಿಪ್ರಾಯ. ಇದರಂತೆಯೇ ಮೇಲಿನ ಬಹುವಚನ ಪ್ರತ್ಯಯವಾದ 'ಗಳ್', 'ಚತುರ್ಥಿಯ 'ಗೆ' ಇವುಗಳನ್ನು ಆ ವರ್ಗದ ಅನುನಾಸಿಕ ದೊಡನೆ ಉಪಯೋಗಿಸಿದರೆ ಏನೂ ತಪ್ಪಿಲ್ಲವೆಂದಾಯಿತು. ರಾಮುಙ್ಗೆ, ಅರಸಙ್ಗೆ, ಎಂಬ ವರ್ಗಪಂಚಮಾಕ್ಷರಗಳಿಂದ ಬರೆಯುವುದೇ ಹೆಚ್ಚು ಸೂಕ್ತ.

ಇಷ್ಟೇ ಅಲ್ಲ, ಕೇಶಿರಾಜನು ಪ್ರಯೋಗಕ್ಕಾಗಿ ಎತ್ತಿಕೊಂಡ ಅಚ್ಚಗನ್ನಡದ ಶಬ್ದಗಳಲ್ಲೆಲ್ಲ ಎಲ್ಲೆಲ್ಲಿ ಬಿಂದುವಿದೆಯೋ ಅಲ್ಲಿ ವರ್ಗಾಕ್ಷರಗಳೇ ಇವೆ. ಅವರ್ಗಾಕ್ಷರ ಗಳ ಹಿಂದಿನ ಬಿಂದುವಿನ ಉದಾಹರಣೆಗಳೇ ಇಲ್ಲ. ಕ್ರಿಯಾಸಮಾಸ, ಕರ್ಮ ಧಾರೆಯಗಳಿಗಾಗಿ ಕೊಟ್ಟ ಪ್ರಯೋಗಗಳೆಲ್ಲವೂ ಹೀಗೆಯೇ ಇವೆ.

ಪದಂಗೊಟ್ಟಂ, ಬಳಪಂಗೊಳೆ, ಇವೆಲ್ಲ ಕನ್ನಡದ ಉದಾಹರಣೆಗಳು.

ಸಂಸ್ಕೃತದಲ್ಲಿಯಾದರೋ ಈ ಬಿಂದುನಿತ್ಯ. ಅಲ್ಲಿಯೂ ಗುಣಂಗೊಂಡಂ, ಪ್ರಿಯಂನುಡಿದಂ, ಧನಂಬಡೆದಂ, ರಂಗಂಬೊಕ್ಕಂ, ಈ ಉದಾಹರಣೆಗಳಲ್ಲೆಲ್ಲ ವರ್ಗಾಕ್ಷರಗಳಿವೆ. ಅವುಗಳ ಹಿಂದೆ ಬಿಂದುವಿದೆ. ಆದ್ದರಿಂದ ವರ್ಗಪಂಚಮಾಕ್ಷರ ವನ್ನು ಬಿಂದುವಿನ ಸ್ಥಾನದಲ್ಲಿ ಉಪಯೋಗಿಸಿಕೊಂಡರೆ ಬಾಧಕವಿಲ್ಲ.

ಮತ್ತೊಂದು ಸ್ವಾರಸ್ಯದ ಸಂಗತಿ ಎಂದರೆ ಅವರ್ಗೀಯಾಕ್ಷರಗಳ ಹಿಂದೆ ಬಿಂದುವಿರುವ ಪ್ರಯೋಗಗಳೇ ಕನ್ನಡದಲ್ಲಿ ಇಲ್ಲ ಎಂಬುದು. ಬಿಂದುವಿನ ಆವಶ್ಯಕತೆ ಅವರ್ಗೀಯಾಕ್ಷರಗಳಲ್ಲಿ ಹೆಚ್ಚು ಕಂಡುಬರುವುದು. ಏಕೆಂದರೆ ವರ್ಗಪಂಚಮಾಕ್ಷರ ಗಳನ್ನು ಅವರ್ಗೀಯಾಕ್ಷರಗಳ ಹಿಂದಿನ ಬಿಂದುವಿನ ಸ್ಥಾನದಲ್ಲಿ ಉಪಯೋಗಿಸಲಾಗ ದಷ್ಟೆ. ಕನ್ನಡದಲ್ಲಿ ಇಂಥ ಪ್ರಯೋಗಗಳೇ ಇಲ್ಲವಾದುದರಿಂದ ಈ ಪ್ರಶ್ನೆಯೇ ತಲೆಯೆ

ತ್ತುವುದಿಲ್ಲ. ಕೇಶಿರಾಜನು ನಾಮ್, ಆನ್, ಎಂಬುವುಗಳು (ಸೂ. ೧೬೧) ವ್ಯಂಜನಾಕ್ಷರಗಳ ಹಿಂದೆ ಬಿಂದುವಾಗುವುವೆಂದೇನೋ ಹೇಳುತ್ತಾನೆ ಆದರೆ ಅವುಗಳಿಗೆ ಉದಾಹರಣೆ ಕೊಡುವಾಗ ಕನ್ನಡದ ಬರಿಯ ವರ್ಗಾಕ್ಷರಗಳನ್ನು ಕೊಟ್ಟು ಆ ವರ್ಗಗಳ ಪಂಚಮಾಕ್ಷರವಾಗುವುದೆಂದು ಹೇಳಿದ್ದಾನೆ. ಅವರ್ಗೀಯಾಕ್ಷರಗಳು ಪರವಾದ ಸಂದರ್ಭದಲ್ಲಿ ಬಿಂದು ಆಗುವುದಕ್ಕಾಗಿ ಅವನು ಕೊಟ್ಟಿರುವ ಉದಾಹರಣ ಪ್ರಯೋಗಗಳೆಲ್ಲವೂ ಸಂಸ್ಕೃತದವುಗಳಾಗಿವೆ

ನೀವ್ ಯೊಗ್ಯರ್, ನೀಂ ಯೋಗ್ಯರ್
ಆಂ ಸುಖಿಗಳ್, ತಾಂಸೇವ್ಯರ್
ಆಂವಾದಿ, ನೀಂಶುಚಿ
ತಾಂ ಸುಜನಂ

ಇಲ್ಲಿ ಪರಪದಗಳೆಲ್ಲವೂ ಸಂಸ್ಕೃತದ ಮಾತಾಗಿವೆ. ಆದ್ದರಿಂದ ಇಲ್ಲಿ ಕನ್ನಡದ ಬಿಂದುವಿನ ಪ್ರಶ್ನೆ ಇಲ್ಲ. ಎಲ್ಲೆಲ್ಲಿ ಸಂಸ್ಕೃತ ಪದಗಳು ಬರುವುವೋ ಅಲ್ಲಲ್ಲಿ ಬಿಂದು ನಿತ್ಯವೆಂಬುದು ಹಿಂದಿನ ಸೂತ್ರಗಳಿಂದ ತಿಳಿದುಬಂದಿದೆ. ಅಥವಾ ಈ ಸಂದರ್ಭಗಳಲ್ಲಿ ಆನ್, ಆಮ್ ಎಂಬ ಪದಗಳ ಮೂಲ ರೂಪವನ್ನೇ ಇಟ್ಟುಕೊಳ್ಳುವುದರಿಂದ ಯಾವಬಾಧಕವೂ ಕಂಡು ಬರುವುದಿಲ್ಲ.

ಕ್ರಿಯಾಸಮಾನದಲ್ಲಿ ಒಂದು ಉದಾಹರಣೆ ಮಾತ್ರ ಮಸಂ ನಂದಂ ಎಂಬುದು ಕನ್ನಡವಾಗಿದೆ ಇಲ್ಲಿಯೂ ಇದು ಐಚ್ಛಿಕವಾಗಿದೆ

ಬಾಹ್ಯಾಂಗದಲ್ಲಿ ಬರುವ ಬಿಂದುವಿನ ಆವಶ್ಯಕತೆಯನ್ನು ಪರಿಶೀಲಿಸಿದ್ದಾಯಿತು ಇನ್ನು ಶಬ್ದಾಂತರಾಳದಲ್ಲಿ ಬರುವ ಬಿಂದುಗಳನ್ನು ನೋಡಬೇಕು. ಕೇಶಿರಾಜನು ಸೂತ್ರ ೩೬ರಲ್ಲಿ, "ಕೆಲವು ಪದಂಗಳ್ ಸ್ವಭಾವದಿಂ ನಿತ್ಯ ಬಿಂದುಗಳ್" ಎಂಬುದಕ್ಕೆ ಹೇಳಿದ ಪ್ರಯೋಗಗಳೆಲ್ಲವೂ ವರ್ಗಾಕ್ಷರದ ಹಿಂದೆ ಬಿಂದುವುಳ್ಳುವುಗಳಾಗಿವೆ. ನಿತ್ಯ ಬಿಂದುವೆಂದು ಹೇಳಿದ ಶಬ್ದಗಳು ಒಟ್ಟು ೬೩. ಇವುಗಳಲ್ಲಿ ಬಿಂದುವಿನ ಮುಂದೆ ಅವರ್ಗೀಯಾಕ್ಷರವೆಲ್ಲಿಯೂ ಬಂದಿಲ್ಲವಾದ್ದರಿಂದ ಇಲ್ಲಿಯ ಬಿಂದು ವರ್ಗ ಪಂಚಮಾಕ್ಷರವನ್ನು ತಾಳತಕ್ಕುದಾಗಿದೆ. ಹಾಗೆಯೇ ವಿಕಲ್ಪಬಿಂದುಗಳಿಗಾಗಿ ಹೇಳುವ ಪ್ರಯೋಗಗಳೆಲ್ಲವೂ ಹೀಗೆಯೇ ಇವೆ. ಇಲ್ಲಿಯೂ ಬಿಂದುವಿನ ಮುಂದೆ ವರ್ಗಾಕ್ಷರವೇ ಇದೆಯಾಗಲಿ ಅವರ್ಗೀಯಾಕ್ಷರವಿಲ್ಲ. ಆದ್ದರಿಂದ ವರ್ಗದ ಅನುನಾಸಿಕವೇ ಇಲ್ಲಿಯ ಬಿಂದುವಿನ ಸ್ಥಾನದಲ್ಲಿರುವುದು ಹೆಚ್ಚು ಉಚಿತ.

ಈ ಬಿಂದುವಿನ ಪ್ರಭಾವ, ಉಪಟಳ ಎಷ್ಟರ ಮಟ್ಟಿಗೆ ಬೆಳೆದು ಹೋಗಿದೆಯೆಂದರೆ ಅನಾವಶ್ಯಕವಾದ ಕಡೆಯಲ್ಲಿಯೂ ಇದನ್ನು ಉಪಯೋಗಿಸುವ ವಾಡಿಕೆಯಾಗಿದೆ. ಕಣ್ಣು ಎಂಬುದನ್ನು ಕಂ ಎಂದು ಬರೆದು ಅದರ ಮುಂದೆ ಣುಕಾರವನ್ನಿಡುವುದನ್ನೂ, ಇದರಂತೆಯೇ ಹಣ್ಣು, ಅಣ್ಣ, ತಿನ್ನು ಮುಂತಾದ ಕಡೆಯಲ್ಲೆಲ್ಲಾ ಬಿಂದುಯುಕ್ತವಾಗಿ ಬರೆಯುತ್ತಿರುವುದನ್ನು ಅಲ್ಲಲ್ಲಿ ಕಾಣಲಾಗುತ್ತಿದೆ. ಈ

ರೂಪಗಳು ತಪ್ಪೆಂದು ಪ್ರತ್ಯೇಕವಾಗಿ ಹೇಳುವ ಕಾರಣವಿಲ್ಲ. ಕಣ್, ಮಣ್, ತಿನ್ ಇವು ವ್ಯಂಜನಾಂತ ಪದಗಳು. ಇವುಗಳು ಹೊಸಗನ್ನಡದಲ್ಲಿ ಬರುವಾಗ ಉಚ್ಚಾರಣೆಯ ಸೌಲಭ್ಯಕ್ಕಾಗಿ ಉಕಾರವು ಇವುಗಳಿಗೆ ಸೇರುವುದುಂಟು. ಇವು ಹ್ರಸ್ವಾದಿಯಾದ ಏಕಾಕ್ಷರಗಳಾಗಿರುವುದರಿಂದ ಉಕಾರ ಸೇರುವಾಗ ಇವುಗಳ ಕೊನೆಯ ಅಕ್ಷರ ದ್ವಿತ್ವವಾಗುವುದು. ಕಲ್ ದ್ವಿತ್ವವಾಗಿ ಕಲ್ಲು ಆದಂತೆ ಕಣ್, ತಿನ್ ಮುಂತಾದುವುಗಳು ದ್ವಿತ್ವವಾಗಿ ಕಣ್ಣು, ತಿನ್ನು ಎಂದು ಆಗಬೇಕೇ ಹೊರತು ಅಲ್ಲಿ ಬಿಂದು ಬರಲೆಡೆಯಿಲ್ಲ. ಇದರಂತೆಯೇ ಅಣ್ಣ ಎಂಬ ಪದವು 'ಅಣ್' ಎಂಬ ಲೇಪನ, ಲಾಕ್ಷಣಿಕವಾಗಿ ಸ್ನೇಹಾರ್ಥದ ಧಾತುವಿನಿಂದ ಹುಟ್ಟಿದ ಪದ. ಇದಕ್ಕೆ ಭಾವನಾಮ ಪ್ರತ್ಯಯ ಅಕಾರ ಸೇರಿ 'ಕಳ್' ಎಂಬುದು ಕಳ್ಳ ಆದಂತೆ ಅಣ್ಣನೆಂದಾಗಿದೆ. ಇಲ್ಲಿಯೂ ಣಕಾರ ದ್ವಿತ್ವಬೇಕು. ಇಂಥ ಬಿಂದುಯುಕ್ತ ರೂಪಗಳು ಸಾಹಿತ್ಯ ಪರಿಷತ್ತಿನವರು ಪ್ರಕಟಿಸಿದ ಪಂಪಭಾರತದಲ್ಲಿಯೂ ಕಂಡುಬರುತ್ತಿವೆ.

> ನೀಂ ನಿನ್ನ ಸಾವನದನೆನ|
> ಸುಂ ನೆನೆಯದೆ ನೆರೆವೆನೆಂಬ ಬಗೆಯೊಳ್ ಬಂದೈ ||
> ನಿಂ ನೊಡನೆ ವಂದು ದಿವದೊಳ್ |
> ನಿಂನ ಮನೋರಥ ಮನರಸ! ನೆಱಪದೆಮಾಣೆಂ ||

(ಪಂಪ ಭಾರತ ಆಶ್ವಾಸ ೨. ಪ. ೨೧)

'ಇಲ್ಲಿ ನಿಂ ನೊಡನೆ, ನಿಂನ' ಎಂಬಲ್ಲಿ ಬಿಂದುವಿನಿಂದ ಬರೆದದ್ದು ಸಾಧುವಲ್ಲ. ಮೇಲೆ ನೀಂ, ಸುಂ, ಬಂದಿರುವುದರಿಂದ ಪ್ರಾಸಕ್ಕಾಗಿ ಹೀಗೆ ರೂಪಗಳನ್ನು ತಿದ್ದಿಕೊಂಡಿರುವಂತಿದೆ. ನಾಗವರ್ಮ, ಕೇಶಿರಾಜರಿಗೆ ಪ್ರಮಾಣಭೂತನಾದ ಪಂಪನು ಇಂಥ ಅಬದ್ಧವನ್ನು ಬರೆದಿರುವನೆಂದು ಹೇಳಲಾಗದು. ಅಲ್ಲದೆ ಮೇಲೆ ನೀಂ, ಸುಂ ಎಂದು ಬಿಂದು ಅಂತವಾಗಿ ಅಚ್ಚಾಗಿರುವುದೂ ಭ್ರಮೆಯಿಂದಲೇ ಬಿಂದುವಿನ ಮುಂದೆ ವರ್ಗಾಕ್ಷರವಾದ ನಕಾರ ಬಂದಿರುವುದರಿಂದ ಅದರ ಜೊತೆಯಲ್ಲಿ ನೀನ್ನಿನ್ನ, ಎನಸುನ್ನೆನೆಯದೆ ಎಂದು ಬರೆದರೆ ಪ್ರಾಸವೂ ಸರಿ ಹೋಗುತ್ತದೆ, ಕೆಳಗಿನ ನಿನ್ನೊಡನೆ, ನಿನ್ನ ಎಂಬ ಶುದ್ಧರೂಪಗಳಿಗೂ ಬಾಧೆ ಬರುವುದಿಲ್ಲ.

ಕೇಶಿರಾಜನು ಕೆಲವೆಡೆಗಳಲ್ಲಿ ಆದೇಶವಾಗಿ ಮ್, ನ್, ಕಾರಗಳು ಬರುವುವೆಂದು ಹೇಳಿದ್ದಾನೆ. ಸೂತ್ರ ೧೮೨ ರಲ್ಲಿ "ಪಚ್ಚನೆ, ಕೆಚ್ಚನೆ, ಬೆಚ್ಚನೆ ಎಂಬಿವಱ ಚಕಾರಕ್ಕೆ ಮ್ ಎಂಬುದಕ್ಕುಂ" ಎಂದು ಹೇಳಿ, ಪಂದೋಲ್, ಪಂದೊವಲ್, ಪಂದಲೆ, ಪಂದಿಳಿರ್, ಕೆಂಗಾಱೆ, ಕೆಂಗಱು, ಕೆಂಜಡೆ, ಕೆಂಗೊಡೆ, ಕೆಂದಳಿರ್, ಕೆಂಬಿಸಿಲ್, ಬೆಂಗಲ್, ಬೆಂಗದಿರ್, ಬೆಂನೀರ್, ಚೆಂಗಣಿಗಿಲೆ, ಚೆಂದೆಂಗು, ಚೆಂನೆಯ್ದಿಲ್, ಚೆಂಬೊನ್, ಚೆಂದುಟಿ, ಇತ್ಯಾದಿಯಾದ ಪದಗಳನ್ನು ಉದಾಹರಿಸಿದ್ದಾನೆ. ಇಲ್ಲಿ ಮ್ ಕಾರ ಬರುವುದೆಂದು ಹೇಳಿದ್ದರೂ ಬಿಂದುವಿನಿಂದಲೇ ಅಚ್ಚಾಗಿರುವುದು. ಸೂತ್ರ ೧೭೬ ರಲ್ಲಿ 'ಕೆಳಗು' ಎಂಬುದು 'ಕಿನ್,' ಆಗುವುದೆಂದು

ಹೀಳಿ ಕಿನ್ನೆಲ, ಎಂಬುದನ್ನು ಉದಾಹರಿಸಿದ್ದಾನೆ. ಈ ಎರಡು ಸ್ಥಾನಗಳಲ್ಲಿ ಮ್, ನ್, ಕಾರಗಳು ಬರುವುವೆಂದು ಹೇಳಿಗುವಂತೆ, ಉಳಿದೆಡೆಗಳಲ್ಲಿಯೂ ಹೀಗೆಯೇ ಹೇಳಬಹುದಾಗಿತ್ತಲ್ಲವೆ ? ಕೇಶಿರಾಜನಿಗೂ ಬಿಂದುವಿನ ವಿಷಯವಾಗಿ ಅಷ್ಟು ನಿಷ್ಕೃಷ್ಟಾಭಿಪ್ರಾಯವಿದ್ದಂತೆ ತೋರುವುದಿಲ್ಲ.

ಇಷ್ಟೆಲ್ಲವೂ ಬಿಂದುವಿನ ಭ್ರಮೆ, ಪ್ರಮಾದದಿಂದ ನಡೆದು ಹೋಗಿದೆ. ಆದ್ದರಿಂದ ಈ ಬಿಂದು ಕನ್ನಡದಲ್ಲಿಲ್ಲವೆಂದೂ ಸಂಸ್ಕೃತದಿಂದಲೇ ಕನ್ನಡಕ್ಕೆ ಒತ್ತಂಬದಿಂದ ತರಲಾಗಿದೆಯೆಂದೂ ನಿರ್ಧರಿಸಬೇಕಾಗಿದೆ. ಹೀಗೆ ಸೊನ್ನೆಗೆ ಸೊನ್ನೆ ಸುತ್ತಿದ್ದರಿಂದ ಮುತ್ತಿನಂಥ ಅಕ್ಷರ ಹೋಯಿತೆಂದು ವ್ಯಥೆಪಡಬೇಕಾಗಿಲ್ಲ. ಕನ್ನಡಕ್ಕೆ ಸೊನ್ನೆ ಬೇಕಾಗಿಲ್ಲ. ಅನುನಾಸಿಕದಿಂದಲೇ ಅದರ ಉದ್ದೇಶವು ನೆರವೇರುತ್ತದೆ. ಅಥವಾ ಬರೆವಣಿಗೆಯ ಸೌಕರ್ಯಕ್ಕಾಗಿ ಆ ಅನುನಾಸಿಕಗಳ ಪ್ರತಿರೂಪವಾಗಿ ಅದನ್ನು ಇಟ್ಟುಕೊಳ್ಳಬೇಕೇ ಹೊರತು, ಅದನ್ನು ಅಕ್ಷರಮಾಲೆಯಲ್ಲಿ ಸೇರಿಸಿ ಕನ್ನಡದ ಅಕ್ಷರಗಳ ಸಂಖ್ಯೆಯನ್ನು ಬೆಳೆಸುವ ಅಗತ್ಯ ಕಂಡುಬರುವುದಿಲ್ಲ.

## ವಿಸರ್ಗ

ವಿಸರ್ಗದ ವಿಷಯವಾಗಿ ಲಿಂಗಣಾರಾಧ್ಯನ ಪ್ರತಿಯ ಪ್ರಯೋಗದಲ್ಲಿ ಇರುವಂತೆ ಹೊಸ ಪ್ರತಿಯಲ್ಲಿಯೂ "ಅಃ ಸಂದೆಯಮಿಲ್ಲ, ಮೆಚ್ಚಿದೆಂ" ಎಂಬ ಪ್ರಯೋಗವು ಇದೆ. ಇದರ ಜೊತೆಗೆ "ನಿಪಾತಾರ್ಥದೊಳಲ್ಲದೆ ಕನ್ನಡದೊಳ್ ವಿಭಕ್ತ್ಯಾದಿಗೆ ವಿಸರ್ಗ್ಗಮಿಲ್ಲ" ಎಂಬುದನ್ನು ಹೆಚ್ಚಿಗೆ ಸೇರಿಸಿದೆ. ಕನ್ನಡದಲ್ಲಿ ವಿಸರ್ಗವೂ ಇದೆ ಎಂಬ ಮಾತು ಶಬ್ದಮಣಿದರ್ಪಣ ಪ್ರಕಟವಾದ ಮೇಲೆ ಇಷ್ಟು ದಿವಸಕ್ಕೆ ತಿಳಿದುಬಂದಿದೆ. ಶಬ್ದಾನುಶಾಸನದಲ್ಲಿ ವಿಸರ್ಗ, ಜಿಹ್ವಾಮೂಲೀಯ, ಉಪಧ್ಮಾನೀಯಗಳ ವಿಷಯವಾಗಿ, "ವಿಸರ್ಗ ಜಿಹ್ವಾಮೂಲೀಯ ಉಪಧ್ಮಾನೀಯಗಳು ಅಚ್ಚಗನ್ನಡ ಶಬ್ದಗಳಲ್ಲಿಲ್ಲದಿದ್ದರೂ ಅನುಕರಣಗಳಲ್ಲಿಯೂ ಭಾಷೆಯಲ್ಲಿ ಉಪಯೋಗಿಸುವ ಕೆಲವು ಸಂಸ್ಕೃತ ಶಬ್ದಗಳಲ್ಲಿಯೂ ಇರುವುದರಿಂದ" (ಬೊಂಬಾಯಿ ಸರಕಾರದವರ ಪ್ರಕಟನೆ-ಶಬ್ದಾನುಶಾಸನ ಪುಟ ೧೪) ಎಂದು ಕನ್ನಡದ ಟೀಕೆಯಲ್ಲಿ ಹೇಳಿದೆ. ಅಲ್ಲಿ ವಿಸರ್ಗನಿಪಾತಕ್ಕಾಗಿ ಯಾವ ಉದಾಹರಣೆಯನ್ನೂ ಕೊಟ್ಟಂತೆ ಕಾಣುವುದಿಲ್ಲ. ಹೊಸಪ್ರತಿಯ ದೃಷ್ಟಿಯಿಂದ ಕನ್ನಡದಲ್ಲಿ ವಿಸರ್ಗವನ್ನು ನಿಪಾತವೊಂದರಲ್ಲಿಯಾದರೂ ಒಪ್ಪಿಕೊಳ್ಳಬೇಕೆಂದು ದ್ಯೋತವಾಗುತ್ತದೆ. ಈ ವಿಸರ್ಗಾಕ್ಷರವು ಕನ್ನಡದಲ್ಲಿದ್ದುದಾದರೆ ಇದರ ಸ್ಥಾನವೇನೆಂಬುದು ಗೋಚರವಾಗುವುದಿಲ್ಲ. ಕೇಶಿರಾಜನು

ಸ್ವರಪರದೊಳಿರ್ಪತೆಱದಿಂ |
ದುರುಮುಖ್ಯೋಚ್ಚಾರಣಕ್ಕೆ ಬಾರದಕತದಿಂ ||
ಪರಿಕಿಸೆ ಬಿಂದುವಿಸರ್ಗಂ |
ಸ್ವರಾಂಗಮುಂ ವ್ಯಂಜನಾಂಗಮುಂ ತಾವೆಂಬರ್ ||

(ಸಾ. ಪ. ಪ್ರ. ಸೂ. ೧೨)

ಎಂಬ ಸೂತ್ರದಲ್ಲಿ ಬಿಂದು ವಿಸರ್ಗಗಳನ್ನು (ಇವುಗಳ ಜೊತೆಗೆ ಜಿಹ್ವಾಮೂಲೀಯ ಉಪಧ್ಮಾನೀಯಗಳನ್ನು ಸೇರಿಸಿಕೊಳ್ಳಬಹುದು) ಸ್ವರಾಂಗಗಳೆಂದೂ, ವ್ಯಂಜನಾಂಗ ಗಳೆಂದೂ ಹೇಳಿದ್ದಾನೆ. ಬಿಂದುವಿಗೆ ಸ್ವರಪರವಾದರೆ ಅದು 'ಮ್', ನ್, ವ್'ಕಾರ ಗಳಾಗಿ ಪರಿಣಮಿಸುತ್ತದೆ ಎಂಬ ಅಂಶವನ್ನು ಸೂ. ೧೦೪ರಲ್ಲಿ ವಿಶದೀಕರಿಸಿದ್ದಾನೆ. ಬಿಂದುವಿನಂತೆ ವಿಸರ್ಗವೂ ಸ್ವರವಾಗಿರುವುದರಿಂದ ಇದಕ್ಕೆ ಸ್ವರಪರವಾದಾಗ ಸಂಧಿಯಾಗುವ ವಿಷಯದ ಪ್ರಸಕ್ತಿ ಇಲ್ಲ. ವಿಸರ್ಗಾಂತ ಪದಗಳು ಸಂಸ್ಕೃತದಿಂದ ಕನ್ನಡಕ್ಕೆ ಬರುವಾಗ ಅವುಗಳ ವಿಸರ್ಗ ಲೋಪವಾಗುತ್ತದೆ ಎಂಬ ಅಂಶವು "ಲುಬ ನವ್ಯಯಾನುಕರಣಸ್ಯ ವಿಸರ್ಗಸ್ಯ" ಎಂಬ ಶಬ್ದಾನುಶಾಸನದ ೮೧ನೆಯ ಸೂತ್ರದಿಂದ ವ್ಯಕ್ತವಾಗಿದೆ. ಕನ್ನಡದ ವಿಸರ್ಗವಾದರೋ ಬರಿಯ ಅವ್ಯಯಗಳಲ್ಲಿರುವುದರಿಂದ ಅದನ್ನು ಲೋಪಮಾಡಬಾರದೆಂದಾಯಿತು. ಅಲ್ಲದೆ, ಕನ್ನಡದ ಈ ಅವ್ಯಯ ಎಂದರೆ ನಿಪಾತ ವಿಸರ್ಗವು ಸಂಸ್ಕೃತದ ವಿಸರ್ಗದಂತೆ ಅಲ್ಲವೆಂದು ಕಾಣುತ್ತದೆ. ಇದು ಕೇವಲ ನಿಪಾತದಲ್ಲಿರುವುದರಿಂದ ನಿಪಾತಗಳ ಅಂತ್ಯದಲ್ಲಿಯ ಸ್ವರದಂತೆ ವ್ಯವ ಹೃತವಾಗಿ ಸಂಧಿಯಾಗಲಾರದೆಂದು ಗ್ರಹಿಸಿಕೊಳ್ಳಬೇಕು. ಇದರ ಉದಾಹರಣೆ ಗಳನ್ನು ಆರಿಸಿ ನೋಡಿದರೆ ಮೇಲೆ ಉದಾಹೃತವಾದ 'ಅಃಸಂದೆಯಮಿಲ್ಲ ಮೆಚ್ಚಿದೆಂ' ಎಂಬಲ್ಲಿ ವಿಸರ್ಗಕ್ಕೆ ಅವರ್ಗೀಯಾಕ್ಷರ ಪರವಾಗಿರುವುದರಿಂದ ಇಲ್ಲಿ ಸಂಧಿಕಾರ್ಯ ವಿಲ್ಲ. ಕೇಶಿರಾಜನು ವಿಶಂಕೆಗೆಂದು (ಸೂ. ೫೬) ಎತ್ತಿಕೊಂಡಿರುವ ಉದಾಹರಣೆ ಯಲ್ಲಿ "ಅಃ ಪಿರಿದೀವಂ," "ಚಿಃ ಅದಂ ನೆನೆಯಂ," ಹೀಗೆ ಎರಡು ಪ್ರಯೋಗ ಗಳಿವೆ. ಇವೆರಡರಲ್ಲಿಯೂ ವಿಸರ್ಗವಿದೆ. 'ಚಿಃ' ಎಂಬುದರ ಪರದಲ್ಲಿ ಸ್ವರವಿದೆ. ಇಲ್ಲಿ ಸಂಧಿಯಿಲ್ಲ. ಇತರ ಕನ್ನಡ ಸ್ವರಗಳಂತೆ ನಿಪಾತಗಳಲ್ಲಿ ಮಾತ್ರ ವಿಸರ್ಗವನ್ನು ಕನ್ನಡ ಸ್ವರದಂತೆ ಗ್ರಹಿಸಬೇಕೆಂದು ನಿರ್ಧರಿಸಬಹುದಾಗಿದೆ. ಇದಕ್ಕೆ ಸ್ವರಪರ ವಾದರೆ ಸಂಸ್ಕೃತದಲ್ಲಿರುವಂತೆ ರೇಫೆಯಾಗದೆ ಅದು ಹಾಗೆಯೇ ಉಳಿವುದೆಂಬುದನ್ನು ಲಕ್ಷ್ಯದಲ್ಲಿಡಬೇಕಾದುದು.

## ವರ್ಣಸಂಜ್ಞೆಯ ಸಮಾಹಾರ ಸೂತ್ರಗಳು

ಹೊಸಪ್ರತಿಯಲ್ಲಿ ಅನಸ್ವಾರ, ವಿಸರ್ಗ, ಜಿಹ್ವಾಮೂಲೀಯ ಉಪಧ್ಮಾನೀಯ ಗಳನ್ನು ಸ್ವರ ವ್ಯಂಜನ ಪ್ರಕರಣಗಳಾದ ಮೇಲೆ ಹೇಳಿದೆ. ಅಚ್ಚಾದ ಪ್ರತಿಗಳಲ್ಲಿ ಯಾದರೋ ಬಿಂದು ವಿಸರ್ಗಗಳ ವಿಷಯವು ಸ್ವರಗಳ ತರುವಾಯ ಬಂದಿದೆ. ಈ ಅಂಶವನ್ನು ಈ ಮೊದಲೇ ವಿವರಿಸಿದೆ ಇವಾದ ಮೇಲೆ ಕನ್ನಡದಲ್ಲಿರುವ ವರ್ಣ ಗಳ ಮೊತ್ತ ಸಂಖ್ಯೆಯನ್ನು ಹೇಳುವ

(೧) ತರದಿಂದಂ ಪದಿನಾಲ್ಕುಂ ೧೪

(೨) ತಿಳಿ ದೇಶೀಯಮಬುಷ್ಟೈದಂ ೫

ಎಂದು ಆರಂಭವಾಗುವ ಎರಡು ಸೂತ್ರಗಳು ಸಮಾಹಾರ ಸೂತ್ರಗಳಾಗಿ ಬಂದಿವೆ.

ಇವುಗಳಿಗೆ ಮುಂಚೆ ಮತ್ತೊಂದು ಹೊಸ ಸೂತ್ರವಿದೆ. ಆ ಸೂತ್ರಾಭಿಪ್ರಾಯವು ಹೀಗಿದೆ:– ಹ್ರಸ್ವದ ಎತ್ವ, ಎಲವ, ಒತ್ವ, ಕುಳ, ಱಟ, ೞಕಾರ ಹೀಗೆ ಕನ್ನಡದಲ್ಲಿ ಐದು ಪ್ರಜ್ವಲಿಸುವ ದೇಶೀಯಾಕ್ಷರಗಳೆಂದು ತಿಳಿ. ಮುಂದೆ ಕುಳ ಱಟಗಳತೆರವನ್ನು ಹೇಳುವೆನು.

ಈಸೂತ್ರಕ್ಕೆವೃತ್ತಿಯೂ ಇದೆ.ಅದನ್ನು ಈಕೆಳಗಿನಂತೆ ಅನುವಾದಿಸಬಹುದಾಗಿದೆ.

ಎಲೆ, ಎಲವ, ಎಂಬಂತಿದ್ದ ಹ್ರಸ್ವದ ಎತ್ವವೂ, ಒರಲೊನಕೆಯೆಂಬಂತಿದ್ದ ಹ್ರಸ್ವದ ಒತ್ವವೂ, ಬೆಳಗುಗಳ ಬಳೆದ ಬಳಗದ ಬಳಗಂಗಳೆಂಬಂತಿದ್ದ ಕುಳವೂ, ಕಱಕುಱ, ತಲ್ಲಱ ಸುಱು, ಎಂಬಂತಿದ್ದ ಱಟವೂ, ಮೂೞಾೞು ನೂೞೆಂಬಂತಿದ್ದ ೞಕಾರವೂ, ಹೀಗೆ ಇವ್ವೈದು ದೇಶೀಯಾಕ್ಷರಗಳು. ಅವುಗಳ ರೂಪು ಎ,ಒ,ಳ,ಱ, ೞ. ಮುಂದೆ ಱಟ, ಕುಳ ಪ್ರಪಂಚವು ವಿಸ್ತಾರವಾಗಿ ಪೇಳಲ್ಪಡುವುದು.

ಹೀಗೆ ಐದು ವಿಧವಾದ ವರ್ಣಗಳು ಎನಿತು ಎಂದರೆ, ಎಂದು ಹೇಳಿ ಮುಂದೆ, "ತರದಿಂ ಪದಿನಾಲ್ಕಕ್ಕುಂ'' ಎಂಬ ಸೂತ್ರವನ್ನು ಕೊಟ್ಟಿದೆ.

ಕನ್ನಡದಲ್ಲಿ ಒಟ್ಟಿನಲ್ಲಿ ಅಕ್ಷರಗಳ ಸಂಖ್ಯೆ ಎಷ್ಟೆಂಬುದನ್ನು ಲೆಕ್ಕಿಸಿ ಹೇಳುವ ಸಂದರ್ಭದಲ್ಲಿಯೇ ದೇಶೀಯಾಕ್ಷರಗಳ ವಿವರಣೆ ಸಮಯೋಚಿತವಾಗುತ್ತದೆ. ಮುಂದೆ ಸೂತ್ರ ೩೩ ರಲ್ಲಿ 'ಕನ್ನಡದೊಳ್ ದೇಶೀಯಮೈದುಂತೆಱಂ' ಎಂದು ಹೇಳಿದೆ ಯಾವರೂ ಅದರ ಸ್ಪಷ್ಟೀಕರಣವಿಲ್ಲ. ಹೊಸ ಪ್ರತಿಯ ದೃಷ್ಟಿಯಿಂದ ಸಾಹಿತ್ಯ ಪರಿಷತ್ತಿನ ೧೮, ೧೯ ಸೂತ್ರಗಳು ಅಕ್ಷರ ಪ್ರಕರಣ ಸಮಾಪ್ತಿಸಂದರ್ಭದಲ್ಲಿ ಉಕ್ತವಾಗಿರುವುದರಿಂದ ತತ್ಪೂರ್ವದಲ್ಲಿ ಬರುವ ಉಪಸಂಹಾರ ಸೂತ್ರಗಳಿಗೆ ಮುಂಚೆ ದೇಶೀಯಾಕ್ಷರಗಳ ವಿವರಣೆ ಆವಶ್ಯಕವಾಗಿರುತ್ತದೆ. ಆದ್ದರಿಂದ ಈ ಹೊಸ ಸೂತ್ರವು ಇಲ್ಲಿ ಪ್ರಸಕ್ತವಾಗಿದೆ. ಅನುಸ್ವಾರ, ವಿಸರ್ಗ, ಕ್ಷಳ, ಜಿಹ್ವಾಮೂಲೀಯ ಉಪಧ್ಮಾನೀಯಗಳ ಆಕೃತಿವಿಶೇಷವನ್ನು ಹೇಳಿದ ಕೇಶಿರಾಜನು ಕನ್ನಡದಲ್ಲಿ ಸಹಜವಾಗಿ ಇರುವ ದೇಶೀಯಾಕ್ಷರಗಳ ಸ್ವರೂಪವನ್ನು ಹೇಳುವುದೂ ಸಹಜವಾಗಿದೆ. ಅದನ್ನು ಈ ಸೂತ್ರ ವೃತ್ತಿಯಲ್ಲಿ ಸ್ಪಷ್ಟಗೊಳಿಸಿದ್ದಾನೆ. ಹೀಗೆ ಅನುಸ್ವಾರ, ವಿಸರ್ಗ, ಉಪಧ್ಮಾನೀಯ. ಜಿಹ್ವಾಮೂಲೀಯ, ಕ್ಷಳ, ಎ, ಒ, ಕುಳ, ಱ (ಶಕಟ ರೇಫೆ) ಱಟ ಇವೆಲ್ಲವುಗಳ ವೈಶಿಷ್ಟ್ಯವೂ, ಅವವುಗಳ ಆಕೃತಿ ವಿಶೇಷವೂ ವಿಶದವಾಗಿಯೂ, ನಿಸ್ಸಂದೇಹವಾಗಿಯೂ ಈ ಪ್ರತಿಯಲ್ಲಿ ನಿರೂಪಿತವಾಗಿವೆ.

ಸೂತ್ರ ೩೨ರ ಪಾಠವು ಹೊಸ ಪ್ರತಿಯಲ್ಲಿ ಸ್ವಲ್ಪ ವ್ಯತ್ಯಸ್ತವಾಗಿದೆ. ಸಾ. ಪ. ಪ್ರತಿಯ ಪಾಠವು 'ತರದಿಂದಂ ಪದಿನಾಲ್ಕುಂ' ಎಂದು ಇದೆ. ಹೊಸ ಪ್ರತಿಯಲ್ಲಿ 'ತರದಿಂ ಪದಿನಾಲ್ಕಕ್ಕುಂ' ಎಂದು ಲಿಂಗಣಾರಾಧ್ಯನ ಪ್ರತಿಯಂತೆ ಇದೆ. ಸಾ. ಪ. ಪ್ರತಿಯ ಪಾಠದಂತೆ ಇದು ಕ್ರಿಯಾಪದವಿಲ್ಲದ ಸೂತ್ರವಾಗುತ್ತದೆ. ಇವೆರಡು ಪ್ರತಿಗಳಲ್ಲಿ ಕ್ರಿಯಾಪದವಿರುವುದರಿಂದ ಅದನ್ನು ಅಧ್ಯಾಹಾರ ಮಾಡಿಕೊಳ್ಳುವ ಆವಶ್ಯಕತೆ ಇಲ್ಲ. ಕ್ರಿಯಾಪದವಿಲ್ಲದೆಯೂ ಕನ್ನಡದಲ್ಲಿ ವಾಕ್ಯರಚನೆ ನಡೆಯುತ್ತಿದೆ

ಯಾದುದರಿಂದಲೂ, 'ವಲಂ' ನಿರ್ಧಾರಣಾವ್ಯಯವು ಕೊನೆಯಲ್ಲಿರುವುದರಿಂದ ಕ್ರಿಯಾರ್ಥವನ್ನು ಅದರಿಂದ ಹೊರಡಿಸಿಕೊಳ್ಳಬಹುದಾದುದರಿಂದಲೂ ಈ ಹೊಸ ಪ್ರತಿಯ ಪಾಠ, ಲಿಂಗಣಾರಾಧ್ಯನ ಪ್ರತಿಯ ಪಾಠಗಳಿಂದ ಅಂಥ ಅರ್ಥ ವ್ಯತ್ಯಾಸ ವೇನೂ ಆಗುವುದಿಲ್ಲ.

ಕೊನೆಯ ಸೂತ್ರವಾದ 'ತಿಳಿದೇಶೀಯನುಮ್ಮೈದಂ' ಎಂಬುದಕ್ಕೆ ವೃತ್ತಿಯನ್ನು ಬರೆಯುತ್ತ ವರ್ಣಸಂಜ್ಞೆ ಉಪಸಂಹರಿಸಿದುದನ್ನು ಇಲ್ಲಿ ಮೂಲದಲ್ಲಿದ್ದಂತೆ ಎತ್ತಿ ಕೊಂಡಿದೆ.

ವೃತ್ತಿ:—"ಸಕ್ಕದಮಂ ಪೊರ್ದ್ದದೆ ಪೇೞ್ವ ಅಚ್ಚಗನ್ನಡದಲ್ಲಿ ಋ ೠ ಌ ೡ, ಶ, ಷಮೆಂಬಾಱುಂ, ವಿಸರ್ಗ್ಗಮುಂ, ೱ, ೲ ಮುಂ, ಕ್ಷಳನುಂ ಇಂತೀ ಪತ್ತಕ್ಕರಂಗಳ್ ಇಲ್ಲ. ನಾಲ್ವತ್ತೇಳಕ್ಕರಂಗಳ್ ಇಲ್ಲಿ ವರ್ತಿಸುಗುಂ. ನಿಪಾತಮಲ್ಲದೆ ವಿಸರ್ಗ್ಗಂ ಕನ್ನಡದೊಳ್ ಇಲ್ಲ. ಸಂಸ್ಕೃತ ಬಂದಲ್ಲಿಯಲ್ಲದೆ ಕ್ಷಳನಿಲ್ಲ.—ಇದು ವರ್ಣಸಂಜ್ಞೆ— ಕವಿಗಳ್, ಸ್ವರದಿಂ, ವರ್ಗ್ಗದಿನವರ್ಗ್ಗದಿಂ ಎಂಬ ಸೂತ್ರೋದ್ದೇಶಂ ಸಂಪೂರ್ಣ ಮಾದುದು. ಪ್ರಾಸ ಪ್ರಸಂಗಮುಂ ಮುಂದೆ ವಿವರಿಪೆಂ"

ಇದು ವರೆಗೆ ಅಚ್ಚಾಗಿರುವ ಪ್ರತಿಗಳಲ್ಲಿಯ ವೃತ್ತಿಯನ್ನೂ, ಇದನ್ನೂ ಹೋಲಿಸಿ ನೋಡಿದರೆ, ಈ ಪ್ರತಿಯಲ್ಲಿ, ವ್ಯಾಖ್ಯಾನಕಾರನ ಕೈವಾಡವೆಷ್ಟಿದೆಯೆಂಬುದು ಗೋಚರವಾಗುವುದು. ವಿಸರ್ಗವನ್ನು ಕನ್ನಡ ನಿಪಾತದಲ್ಲಿ ಒಪ್ಪಿಕೊಂಡಿದ್ದರೂ, ಅದನ್ನು ಕನ್ನಡದ ಅಕ್ಷರಗಳ ಸಂಖ್ಯಾಗಣನೆಯಲ್ಲಿ ಸೇರಿಸಿಲ್ಲ. ಒಟ್ಟಿನಲ್ಲಿ ೪೭ ಅಕ್ಷರ ಗಳು ಕನ್ನಡಕ್ಕೆ ಸರಿಯೆಂಬುದು ವ್ಯಾಖ್ಯಾನಕಾರನ ಅಭಿಪ್ರಾಯ. "ಕವಿಗಳ್ ಸ್ವರದಿಂ ವರ್ಗ್ಗದಿನವರ್ಗ್ಗದಿಂ ಎಂಬ ಸೂತ್ರೋದ್ದೇಶಂ ಸಂಪೂರ್ಣಮಾದುದು" ಎಂದು ಉಪಸಂಹರಿಸಿರುವುದರಿಂದ ಸಾಹಿತ್ಯಪರಿಷತ್ ಪ್ರಕಟನೆಯಲ್ಲಿರುವಂತೆ ಈ ಸೂತ್ರವು ಕೊನೆಯಲ್ಲಿರಬಾರದೆಂದೂ, ಇದು ಅಕ್ಷರ ಸಂಜ್ಞಾಧಿಕರಣಕ್ಕೆ ಪೀಠಿಕಾ ರೂಪವಾದ ಆರಂಭಸೂತ್ರವಾಗಿರಬೇಕೆಂದೂ ನಿರ್ಧರವಾಗುತ್ತದೆ. ಮುಂದೆ 'ಪ್ರಾಸಪ್ರಸಂಗಮುಂ ವಿವರಿಪೆಂ' ಎಂಬ ಭವಿಷ್ಯದ್ವಿಷಯ ನಿರೂಪಣೆಯ ಸೂಚನೆ ವ್ಯಾಖ್ಯಾನಕಾರನದಾಗಿದೆ.

## ಪ್ರಾಸಪ್ರಸಂಗ

ಅಕ್ಷರಪ್ರಕರಣವಾದ ಮೇಲೆ 'ಪ್ರಾಸಪ್ರಸಂಗಮುಂ ಮುಂದೆ ವಿವರಿಪೆಂ' ಎಂದು ಹೇಳಿ ಈ ವಿಷಯವನ್ನು ವ್ಯಾಖ್ಯಾನಕಾರನು ಸ್ವಲ್ಪವಿಸ್ತರವಾಗಿ— ಸ್ವತಂತ್ರ ವಾಗಿಯಲ್ಲದಿದ್ದರೂ— ನವೀನವಾಗಿ ಈ ಪ್ರತಿಯಲ್ಲಿ ಅನುವಾದ ಮಾಡಿದ್ದಾನೆ. ಇದಕ್ಕೆ ಕಾರಣವೇನು? ಶಬ್ದಮಣಿದರ್ಪಣದಲ್ಲಿ ಛಂದಶ್ಶಾಸ್ತ್ರಕ್ಕೆ ಸಂಬಂಧಪಡುವ ಪ್ರಾಸವನ್ನು ಪ್ರಸ್ತಾಪಿಸಲಾಗಿದೆ. ಕೇಶಿರಾಜನು ಈ ವಿಷಯವನ್ನು ಭಾಷೆಯ

ದೃಷ್ಟಿಯಿಂದ ಹೇಳಿದ್ದಾನೆ ಅದೂ ಕೇವಲ ಕನ್ನಡದಲ್ಲಿಯೇ ಬಳಕೆಯಿರುವ ವ್ಯಂಜನಾಕ್ಷರಗಳಾದ ಱಟಿ, ಕುಳ, ಱಕಾರಗಳಿಗಾಗಿ. ಇವು ಸಂಸ್ಕೃತದಲ್ಲಿಲ್ಲದ ಕಾರಣ ಸಂಸ್ಕೃತದ ಛಂದಸ್ಸನ್ನನುಸರಿಸಿ ಕನ್ನಡ ಛಂದಸ್ಸಿನ ಗ್ರಂಥನಿರ್ಮಾಣವಾಗಿರುವುದರಿಂದ ಛಂದೋಗ್ರಂಥಗಳಲ್ಲಿ ಈ ವಿಷಯವು ಪ್ರಸ್ತಾಪಿತವಾಗಿಲ್ಲ. ಕೇಶಿರಾಜನಿಗೆ ಹಿಂದೆ ಇದ್ದ ಛಂದೋಂಬುಧಿಕಾರನಾದ ನಾಗವರ್ಮನು ಈ ವಿಷಯವನ್ನು ಕನ್ನಡ ಭಾಷೆಯನ್ನು ಅನುಸರಿಸಿ ಪ್ರಸ್ತಾಪಿಸಬಹುದಾಗಿತ್ತೇನೋ? ಆದರೆ ಈವಿಷಯಕ್ಕವನು ಕೈಹಾಕಲಿಲ್ಲ. ಸೂಕ್ಷ್ಮಜ್ಞನಾದ ಕೇಶಿರಾಜನು ಈ ಕೊರತೆಯನ್ನು ತಿಳಿದು ಈ ಪ್ರಾಸವಿಷಯವನ್ನು ಪ್ರತಿಪಾದಿಸಲು ವ್ಯಾಕರಣದಲ್ಲಿ ಅವಕಾಶವನ್ನು ಕಲ್ಪಿಸಿಕೊಂಡನು. ಪ್ರಾಸ, ಯಮಕ, ವರ್ಣಾವೃತ್ತಿ ಇವುಗಳ ವಿಷಯದಲ್ಲಿ ಶಕಟರೇಫ, ರೇಫ, ಱಟಿ, ಕುಳ, ಕ್ಷಳ ಇವುಗಳನ್ನು ಹೇಗೆ ಸಲ್ಲಿಸಬೇಕು ಎಂಬುದನ್ನು ಸಂಪ್ರದಾಯಬದ್ಧನೂ ಪ್ರಾಚೀನ ಮಾರ್ಗಾನುಸಾರಿಯೂ ಆದ ಕೇಶಿರಾಜನು ವಿಚಾರಕ್ಕಾಗಿ ಇಟ್ಟುಕೊಂಡನು. ಸೂತ್ರ ೫ರಲ್ಲಿ ಕುಳ, ಕ್ಷಳಗಳ ಪ್ರಾಸವನ್ನು ನಿರೂಪಿಸಿದ್ದಾಯಿತು. ಉಳಿದ ಅಕ್ಷರಗಳ ಪ್ರಾಸವಿವರಣೆಗಾಗಿ ೧೮-೧೯ ಈ ಎರಡು ಸೂತ್ರಗಳು ಉದ್ಯುಕ್ತವಾಗಿವೆ. ಇವುಗಳ ಪ್ರಾಸವು ಈ ಮುಂದಿನ ವಿಷಯವಾಗುತ್ತದಾದ್ದರಿಂದ ವ್ಯಾಖ್ಯಾನಕಾರನು ಪ್ರಾಸವಿಷಯಕವಾದ ಸಾಧಾರಣ ಜ್ಞಾನವು ವ್ಯಾಕರಣಾಭ್ಯಾಸಿಗಳಿಗೆ ಇರಬೇಕೆಂದು ಬಗೆದು ನೃಪತುಂಗನ ಕವಿರಾಜಮಾರ್ಗದಲ್ಲಿ ಉಕ್ತವಾದಂತೆ ಷಟ್ಪ್ರಾಸಗಳನ್ನು ಅವುಗಳ ಪ್ರಯೋಗೋದಾಹರಣೆಗಳೊಡನೆ ನಿರೂಪಿಸಿದ್ದಾನೆ. ಕವಿರಾಜಮಾರ್ಗದ ಎರಡನೆಯ ಪರಿಚ್ಛೇದದಲ್ಲಿ ನಿರೂಪಿತವಾದ ಪ್ರಾಸ ಸಂಬಂಧವಾದ ಪದ್ಯಗಳನ್ನು ಸೂತ್ರಗಳೆಂದು ಕರೆದು ಅವುಗಳಿಗೆ ವೃತ್ತಿಯನ್ನು ಕೊಟ್ಟಿದ್ದಾನೆ. ಈ ವೃತ್ತಿಗಳನ್ನು ಈ ವ್ಯಾಖ್ಯಾನಕಾರನು ಬರೆದನೋ ಅಥವಾ ಕವಿರಾಜಮಾರ್ಗಕ್ಕೊಂದು ವೃತ್ತಿ ಮೊದಲಿಂದಲೇ ಇದ್ದುದನ್ನು ಇವನು ಪ್ರತಿವಾದಿದನೋ ಖಂಡಿತವಾಗಿ ಹೇಳುವುದು ಕಷ್ಟ. ಈ ವ್ಯಾಖ್ಯಾನಕಾರನ ಬರೆವಣಿಗೆಯ ಶೈಲಿಯನ್ನೂ, ಇವನು ಉಪಯೋಗಿಸುವ ಭಾಷೆಯನ್ನೂ, ವಿಷಯಗಳನ್ನು ಕ್ರೋಡೀಕರಿಸಿ ಕ್ರಮಬದ್ಧವಾಗಿ ಹೇಳುವ ರೀತಿಯನ್ನೂ ನೋಡಿದರೆ ಇವನಲ್ಲಿ ಸ್ವತಂತ್ರವಾದ ವೃತ್ತಿಯನ್ನು ಬರೆಯುವ ಪಾಂಡಿತ್ಯವೂ, ಶಕ್ತಿಯೂ ಇದ್ದಿತೆಂಬುದನ್ನು ಒಪ್ಪಿಕೊಳ್ಳಬೇಕಾಗುತ್ತದೆ. ಇವನು ಕಾವ್ಯಾವಲೋಕನದ ಸೂತ್ರಗಳನ್ನೂ ಅಲ್ಲಲ್ಲಿ 'ಮತಾಂತರ'ವೆಂದು ಹೇಳಿ ಉದ್ಧರಿಸಿದ್ದಾನೆ. ಆ ಸೂತ್ರಗಳಲ್ಲಿ ಒಂದೆರಡಕ್ಕೆ ಮಾತ್ರ ವೃತ್ತಿಯಿದೆ. ಉಳಿದ ಸೂತ್ರಗಳು ಮೂಲದಲ್ಲಿರುವಂತೆ ಉದಾಹೃತವಾಗಿವೆ. ಈ ವ್ಯಾಖ್ಯಾನಕಾರನೇ ಸೂತ್ರಾಭಿಪ್ರಾಯವನ್ನು ಸ್ಪಷ್ಟಗೊಳಿಸುವುದಕ್ಕಾಗಿ ವೃತ್ತಿಯನ್ನು ಬರೆದನೆಂದು ಊಹಿಸಿದರೆ ತಪ್ಪಾಗಲಾರದು. ಉಳಿದ ಸೂತ್ರಗಳಿಗೆ ವೃತ್ತಿಯನ್ನು ಬರೆಯದಿರಲು ಕಾರಣವೇನು? ಕವಿರಾಜಮಾರ್ಗದ ಸೂತ್ರಗಳಿಗಾದರೋ ಅವು ಬಂದಲ್ಲೆಲ್ಲ ವೃತ್ತಿದೊರೆಯುತ್ತದೆ. ಈ ವ್ಯಾಖ್ಯಾನಕಾರನೇ ಶಬ್ದಮಣಿದರ್ಪಣ, ಕವಿರಾಜ

ಮಾರ್ಗ, ಕಾವ್ಯಾವಲೋಕನ ಈ ಮೂರು ಲಕ್ಷಣ ಗ್ರಂಥಗಳಿಗೆ ಒಂದೊಂದು ವೃತ್ತಿಯನ್ನು ಬರೆದಿರಬಹುದೆ? ಇದನ್ನು ಮುಂದೆ ವಿವರಿಸಿದೆ.

ಕವಿರಾಜಮಾರ್ಗದ ದ್ವಿತೀಯ ಪರಿಚ್ಛೇದದ ಪದ್ಯಗಳು ೨೮–೨೯–೩೦–೪೩ ಇವುಗಳಿಗೆ ವೃತ್ತಿ ಇದೆ. ಪದ್ಯ ೨೮ ರ ವೃತ್ತಿಯಿಂದ ಹೊಸ ಅಂಶವೊಂದು ವ್ಯಕ್ತವಾಗುವುದರಿಂದ ಆ ಪದ್ಯವನ್ನೂ ಅದರ ವೃತ್ತಿಯನ್ನೂ ಇಲ್ಲಿ ಕೊಡಲಾಗಿದೆ.

ನುತಶಬ್ದಾಳಂಕಾರದೊ |
ಳತಿಶಯಮೀ ಕನ್ನಡಕ್ಕೆ ಸತತಂ ಪ್ರಾಸಂ ||
ಕೃತ ಕೃತ್ಯ ಮಲ್ಲ ವಲ್ಲಭ |
ಮತದಿಂದದಱ ಪ್ರಪಂಚಮಿಾತೆಱನಕ್ಕುಂ ||*
(ಕ. ಮಾ. ಪ. ೨೮ ದ್ವಿತೀಯ ಪರಿಚ್ಛೇದ)

ವೃತ್ತಿ:— ಕನ್ನಡ ಕವಿತೆಯೆಂಬ ಪೆಣ್ಗೆ ಪ್ರಾಸಮೆ ಪ್ರಾಣಮಾಪ್ರಾಸಂ ಶಬ್ದಾಳಂಕಾರದೊಳತಿಶಯಮನುವ(ದ)ಱ ಪ್ರಪಂಚಮಂ ನೃಪತುಂಗದೇವನ ಮತದಿಂ ಪೇೞ್ವೆಂ.

ಈ ವೃತ್ತಿಯನ್ನು ಯಾರೇ ಬರೆದಿರಲಿ, ಇದರಿಂದ ದ್ಯೋತವಾಗುವ ಮಹತ್ತ್ವದಂಶವೆಂದರೆ ಕೃತಕೃತ್ಯಮಲ್ಲವಲ್ಲಭನೆಂದರೆ ನೃಪತುಂಗದೇವನೆಂದೂ, ಆ ನೃಪತುಂಗನೇ ಕವಿರಾಜಮಾರ್ಗವನ್ನು ಬರೆದಿರುವನೆಂದೂ ಅದೀಗ ಮತ್ತಷ್ಟು ಬಲಪಡುವುದೆಂಬುದು. ಮುಂದೆ ಬೇರೆ ಎಡೆಯಲ್ಲಿ ಬರುವ ಪ್ರಯೋಗದಿಂದ ಈ ಅಂಶವು ಇನ್ನೂ ದೃಢವಾಗುತ್ತದೆ ಅದನ್ನು ಆ ಸಂದರ್ಭದಲ್ಲಿ ಪ್ರಸ್ತಾಪಿಸಲಾಗಿದೆ.

ಇಲ್ಲಿ, "ಕನ್ನಡ ಕವಿತೆಯೆಂಬ ಪೆಣ್ಗೆ ಪ್ರಾಸಮೆ ಪ್ರಾಣಂ" ಎಂಬ ವಾಕ್ಯದಿಂದ ವೃತ್ತಿಕಾರನು ಕನ್ನಡದ ಪ್ರಾಸ ವಿಷಯವಾಗಿ ವ್ಯಕ್ತಗೊಳಿಸಿರುವ ಅಭಿಪ್ರಾಯವನ್ನು ಪಂಡಿತರು ಗಮನಿಸಬೇಕು.

ಇದೇ ಸಂದರ್ಭದಲ್ಲಿ ಕವಿರಾಜಮಾರ್ಗದಲ್ಲಿ ದೊರೆಯದ ಮತ್ತೊಂದು ಸೂತ್ರವು ಉದಾಹೃತವಾಗಿ ಅದಕ್ಕೆ ವೃತ್ತಿಯನ್ನೂ ಕೊಡಲಾಗಿದೆ. ಈ ಪದ್ಯವು, 'ಶಾಂತಾದಿ ಪ್ರಾಸ ಲಕ್ಷಣಂಗಳಂ ಪೇೞ್ವೆಂ' ಎಂಬ ಶಿರೋಲೇಖನದೊಡನೆ ಬಂದಿದೆ. ಇದು ಕಾವ್ಯಾವಲೋಕನದಲ್ಲಿಯೂ ಇಲ್ಲ; ಛಂದೋಂಬುಧಿಯಲ್ಲಿಯೂ ಇಲ್ಲ.

ನುತ ಸಂಯೋಗಾಕ್ಷರಮುಂ ನೆಗಲ್ದಿವೊಲಿರದಂದಕ್ಕುಮಾ ಶಾಂತ ನಾಮಂ|
ಸತತಂ ವರ್ಗಾಕ್ಷರಂ ನಾಲ್ಕಿರೆ ಶಷ ಸಮಿರಾವರ್ಗಮುಂ ತಾಂ ಸಮೀಪಂ |
ಕೃತವರ್ಣಾವೃತ್ತಿ ತಾಂ ಪದದೊಳನುಗತಮಿನ್ನಂತ್ಯವರ್ಣೋನ್ನಿಯಾಮಂ |
ಸ್ತುತಮಂತ್ಯಪ್ರಾಸಮೆಂದೀ ತೆಱನನಱಿದುಪೇೞ್ಗೊಳ್ಳಿತಂ ಸತ್ಕವೀಂದ್ರರ್||

---

* ಕೃತಕೃತ್ಯಮಪ್ಪುದಲ್ಲರ | ಮತದಿಂದದುತಪ್ಪೆ ಕಾವ್ಯಮೇಂ ಶೋಭಿಪುದೇ ? ||
ಕಿಟಲ್ ಅವರ ಪ್ರತಿ. ನಾಗವರ್ಮನ ಕನ್ನಡ ಛಂದಸ್ಸು (ಪುಟ. ೧೭. ಪದ್ಯ ೫೦.)
ಮತ್ತು ಕರ್ನಾಟಕ ಕಾವ್ಯಕಲಾನಿಧಿಯ ಛಂದೋಂಬುಧಿ (ಪುಟ. ೧೩. ಅಡಿಯ ಪದ್ಯ ೫.)

ಇದರಲ್ಲಿ ಆರು ಪ್ರಾಸ ಭೇದಗಳೂ, ಲಕ್ಷಣಗಳೊಡನೆ ಹೇಳಲ್ಪಟ್ಟಿವೆ. ವೃತ್ತಿ:—ದಡ್ಡಕ್ಕರಮೊಂತಿರ್ದಂತೆ ನಾಲ್ಕು ಪಾದಂಗಳಲ್ಲಿ ನಡೆದೊಡೆ ಸುಪ್ರಾಸಂ. ಪಲ್ಲಟಂಬೋದ[ದೊ]ಡೆ ದಡ್ಡಕ್ಕರ ಪ್ರಾಸಂ ಶಾಂತವೆಂಬುದು. ವರ್ಗಾಕ್ಷರ ನಾಲ್ಕುಮಿರ್ದೊಡೆ ವರ್ಗಪ್ರಾಸಂ. ಶಷಸಂಗಳಾದೊಡೆ ತಾಂ ಸಮೀಪ ಪ್ರಾಸಂ. ಪ್ರಾಸಾಕ್ಷರಾವೃತ್ತಿಯಾದೊಡನುಪ್ರಾಸಂ. ಪ್ರಾಸಾಕ್ಷರಮಿರ್ದುಮಂತ್ಯ ವರ್ಣಮೆ ನೇಮವಾದ[ದೊ]ಡೆ ಅಂತ್ಯ ಪ್ರಾಸಂ.

ಇಲ್ಲಿಂದ ಮುಂದೆ 'ಕ್ರಮ ಪ್ರಯೋಗಂ' ಎಂದು ಹೇಳಿ, 'ಸುಪ್ರಾಸಂ ಮುನ್ನಮೆ ಪೇಳ್ದುದಱಿಂ ಶಾಂತ ಪ್ರಾಸಕ್ಕೆ ಪ್ರಯೋಗೋದಾಹರಣೆ'ಯೆಂದು ಸ್ಪಷ್ಟಗೊಳಿಸಿ ಕವಿರಾಜಮಾರ್ಗದ ದ್ವಿತೀಯ ಪರಿಚ್ಛೇದದಿಂದ ೩೪-೩೭-೩೮-೪೨ನೆಯ ಪದ್ಯಗಳನ್ನು ಶಾಂತ ಪ್ರಾಸ, ವರ್ಗ ಪ್ರಾಸ, ಸಮೀಪ ಪ್ರಾಸ, ಅಂತ್ಯ ಪ್ರಾಸಗಳಿಗೆ ಅನುಕ್ರಮವಾಗಿ ಉದಾಹರಿಸಿದ್ದಾನೆ. ಕಾವ್ಯಾವಲೋಕನದ ೨೩ನೆಯ ಪದ್ಯವನ್ನು ಅನುಪ್ರಾಸಕ್ಕೆ ಉದಾಹರಣೆಯನ್ನಾಗಿ ಎತ್ತಿಕೊಂಡಿದೆ. ಕೊನೆಯಲ್ಲಿ ಕವಿ ರಾಜ ಮಾರ್ಗದ ಎರಡನೆಯ ಪರಿಚ್ಛೇದದ ಪದ್ಯ ೪೩ಕ್ಕೆ

"ಸುಪ್ರಾಸಮುಮನುಪ್ರಾಸಮುಮಂತ್ಯಮುಮುತ್ತಮಂ, ಶಾಂತ ವರ್ಗ ಸಮೀಪಗತ ಪ್ರಾಸಂಗಳ್ ಪ್ರಾಸಾಭಾಸಂಗಳ್"

ಎಂಬ ವೃತ್ತಿಯನ್ನು ಕೊಟ್ಟು ಈ ಪ್ರಾಸಪ್ರಪಂಚದ ಪೀಠಿಕೆಯನ್ನು ಮುಗಿಸಿದೆ. ಮುಂದೆ ಶಬ್ದಮಣಿ ದರ್ಪಣದ ೧೮-೧೯ನೆಯ ಸೂತ್ರಗಳನ್ನು ಕೊಟ್ಟು ಅವುಗಳಿಗೆ ವಿಸ್ತರವಾದ ಪ್ರಯೋಗೋದಾಹರಣೆಗಳನ್ನು ಅನ್ಯಕವಿಗಳ ಕಾವ್ಯಗಳಿಂದ ಉದ್ಧರಿಸಿದೆ. ಈ ಪ್ರಯೋಗಗಳೆಲ್ಲವೂ ಇಲ್ಲಿ ಹೊಸವು. ವ್ಯಾಖ್ಯಾನಕಾರನು ಅನೇಕ ಕವಿಗಳ ಕಾವ್ಯಗಳನ್ನು ಓದಿ ಅವುಗಳಲ್ಲಿಯ ಸಾಧು ಪ್ರಯೋಗಗಳನ್ನು ಆರಿಸಿ ಉದಾಹರಿಸಿದ್ದಾನೆ. ಕೆಲವು ಜನ ಕವಿಗಳು ವಿರುದ್ಧ ಪ್ರಯೋಗಗಳನ್ನು ಮಾಡಿದ್ದಾರೆ. ವ್ಯಾಖ್ಯಾನಕಾರನು ಅವುಗಳನ್ನು ಕೊಟ್ಟು ಇವು ಸರಿಯಾದ ಪ್ರಯೋಗಗಳಲ್ಲವೆಂದು ನಿಷೇಧಿಸಿದ್ದಾನೆ. ಶಬ್ದಮಣಿ ದರ್ಪಣದಲ್ಲಿ ಕೆಲಕೆಲವೆಡೆಗಳಲ್ಲಿ ಬರಿಯ ಪದ್ಯಭಾಗಗಳನ್ನಷ್ಟೇ ಉದಾಹರಣೆಯಾಗಿಕೊಟ್ಟಿರುವುದರಿಂದ ಅವುಗಳ ಅರ್ಥವು ಸರಿಯಾಗಿ ಹೊರಡುವುದಿಲ್ಲವೆಂದು ಹಿಂದೆ ಸೂಚಿಸಿದೆ. ಇಂಥ ಎಡೆಗಳಲ್ಲಿ ಈ ಹೊಸ ಪ್ರತಿಯಲ್ಲಿ ಆದಷ್ಟು ಮಟ್ಟಿಗೆ ಪೂರ್ಣ ಪದ್ಯಗಳನ್ನು ಕೊಟ್ಟಿರುವುದರಿಂದ ಅರ್ಥವೂ ಸ್ಪಷ್ಟವಾಗಿ ಗೋಚರವಾಗುತ್ತದೆ, ಸಂಶೋಧಕರುಗಳಿಗೆ ಅವುಗಳ ಆಕರಗಳನ್ನು ಗೊತ್ತು ಹಿಡಿಯಲು ಇವುಗಳಿಂದ ಸಹಾಯವೂ ಒದಗುತ್ತದೆ. ಇಲ್ಲಿ ಪೂರ್ಣ ಪದ್ಯಗಳನ್ನೂ ಪಾಠಭೇದಗಳನ್ನೂ ಇಷ್ಟೇ ಕೊಟ್ಟು ಸಾಧ್ಯವಾದೆಡೆಯಲ್ಲಿ ಯಾವುದು ಸಾಧು ಯಾವುದು ಅಸಾಧುವೆಂಬುದನ್ನು ವಿಚಾರಿಸಿದೆ.

ರೇಫೆ ಱಕಾರಗಳ ವರ್ಣಾವೃತ್ತಿಯ ಕೆಳಗೆ ಮುದ್ರಿತ ಪ್ರತಿಗಳಲ್ಲಿ ಉದಾಹೃತವಾದ ಪದ್ಯದಲ್ಲಿ ಬರಿಯ ಎರಡು ಚರಣಗಳಿವೆ. ಇಲ್ಲಿ ಈ ಪದ್ಯವು ಪೂರ್ಣವಾಗಿದೆ.

ಸುರಗಿಱಿದೊಱಗಿದ ಬೀರರ |
ಕರುಳಂ ಕೊೞ್ಕೊೞ್ದು ಮರುಳಿರುಳ್ ತಿಂಬಾಗಳ್ ||
ತರತರದೆ ( ಕರಕರದಿ ) ನೆೞ್ದು ನೆೞ್ದುೞ್ |
ಧುರದೊಳ್ ತೆಱಪಱಿಯೆ ರಕ್ಕಸಿಯರುಱುಬಿರ್ದ್ದರ್ ||

ಇಲ್ಲಿ ತಿಂಬೆಡೆಯೊಳ್ ಎಂಬ ಪಾಠಕ್ಕೆ ಬದಲಾಗಿ ತಿಂಬಾಗಳ್ ಎಂದಿದೆ. ಇದರಿಂದ ಅರ್ಥವ್ಯತ್ಯಾಸವಾಗದುದರಿಂದ ಉಭಯ ಪಾಠವನ್ನೂ ಅಂಗೀಕರಿಸಬಹುದಾಗಿದೆ. ಆದರೆ ಮೊದಲ ಚರಣದಲ್ಲಿರುವ 'ಸುರಗಿಱಿದೊಱಗಿದ', ಎಂಬಲ್ಲಿಯ ಸುರಗಿ ಎಂಬ ಪಾಠವು ಸಾಧುವೆಂದು ತೋರುವುದು. ಸಾಹಿತ್ಯ ಪರಿಷತ್ಪ್ರತಿ, ಕಿಟಲ್ ಅವರ ಪ್ರತಿಗಳ 'ಸುರರಿಱಿದು' ಎಂಬ ಪಾಠ ಇಲ್ಲಿ ಅರ್ಥಕ್ಕೆ ಬಲವನ್ನು ಕೊಡುವುದಿಲ್ಲ. ಲಿಂಗಣಾರಾಧ್ಯನ ಪ್ರತಿಯಲ್ಲಿ 'ಸುರರಿ' ಎಂದು ಬರೆದು ಬ್ರಾಕೆಟ್ಟಿನಲ್ಲಿ ( ಗಿ ) ಎಂಬ ಪಾಠವನ್ನು ಕೊಟ್ಟಿದೆ. ಇದು ಸಂಪಾದಕರು ತಿದ್ದಿದ ಪಾಠವಾಗಿ ಕಾಣುತ್ತದೆ. ಶ್ರೀಮಾನ್ ಪಂಜೆ ಮಂಗೇಶರಾಯರ ಪ್ರಕಟನೆಯಲ್ಲಿ, ಇಲ್ಲಿರುವಂತೆ 'ಸುರಗಿ' ಎಂಬ ಪಾಠವೇ ಇದೆ. 'ಸುರಗಿಯಿಂದ ಇರಿದು ಕೆಳಗೆ ಬಿದ್ದ ವೀರರನ್ನು ಮರುಳು ತಿನ್ನುವ ಸಂದರ್ಭದಲ್ಲಿ' ಎಂದು ಮುಂತಾಗಿ ಈ ಪದ್ಯಕ್ಕೆ ಅರ್ಥವಾಗುವುದು. 'ಸುರರಿಱಿದು' 'ದೇವತೆಗಳು ಇರಿದು ಕೆಳಗೆ ಬಿದ್ದ' ಎಂದು ಮುಂತಾಗಿ ಬೇರೆ ಪ್ರತಿಗಳ ಪಾಠದಿಂದ ಹೊರಡುವ ಅರ್ಥ ಇದು ಆಗಿರಲಾರದು. ಮೊದಲಿನ ಚರಣದಿಂದ ವೀರರ ಪ್ರತಾಪವನ್ನು ಹೇಳುವುದು ಕವಿಯ ಉದ್ದೇಶವಾಗಿರಬೇಕಾಗಲಿ, 'ದೇವತೆಗಳಿಂದ ಹತರಾದ ವೀರರು' ಎಂಬುದನ್ನು ಹೇಳುವುದು ಕವಿಯ ಉದ್ದೇಶವಾಗಿರಲಾರದು. ಭಾಷಾಭೂಷಣದ ಹತ್ತನೆಯ ಸೂತ್ರ "ಲರಡಾಏವಳಱಟಾಃ ಪ್ರಯತ್ನಾಶ್ರಯಾತ್" ಎಂಬುದರ ಕೆಳಗೆ ಶಬ್ದಮಣಿದರ್ಪಣದ ಸೂತ್ರ ೧೮-೧೯ರಲ್ಲಿ ಕೊಟ್ಟಿರುವ ಪ್ರಯೊಗಗಳನ್ನು ಕೊಟ್ಟಿದೆಯಷ್ಟೆ. ಅಲ್ಲಿಯೂ 'ಸುರಗಿ' ಎಂಬ ಪಾಠವೇ ಇದೆ. ಆದ್ದರಿಂದ ಸುರಗಿ ಎಂಬ ಪಾಠವೇ ಇಲ್ಲಿ ಹೊಂದಿಕೊಳ್ಳುತ್ತದೆ. ಇವೇ ಸಾಧು ಪಾಠ.

ಡಕಾರ ಱಟಗಳ ವರ್ಣಾವೃತ್ತಿಯ ಉದಾಹರಣ ಪದ್ಯವು ಲಿಂಗಣಾರಾಧ್ಯನ ಪ್ರತಿಯಲ್ಲಿರುವಂತೆ ಇಲ್ಲಿಯೂ ಪೂರ್ಣವಾಗಿದೆ. ಇದು ಕಾವ್ಯಾವಲೋಕನದ ೨೬ನೆಯ ಪದ್ಯ. ಮುಂದೆ ಮುದ್ರಿತ ಪ್ರತಿಗಳಲ್ಲಿರುವಂತೆ ಉದಾಹರಣ ಪದ್ಯಗಳು ಕ್ರಮವಾಗಿ ಬಂದಿವೆ.

ಲಕಾರ ಕುಳಪ್ರಾಸವಾದ ಮೇಲೆ ವ್ಯಾಖ್ಯಾನಕಾರನು,

"ಏಕಸ್ಥಾನಿಗಳಾಗಿಯುಂ ಪ್ರಾಸಕ್ಕೆ ಸಲ್ಲವೆಂದೊಡೆ ಭಿನ್ನಸ್ಥಾನೀಯಗಳೆಂತುಂ ಪ್ರಾಸಕ್ಕೆ ಸಲ್ಲವದಱಿಂ ಱಟಕ್ಕಂ ಕುಳಕ್ಕಂ, ಱಟಕ್ಕಂ ಕ್ಷಳಕ್ಕಂ, ಱಟಕ್ಕಂ ಲಕಾರಕ್ಕಂ ಪ್ರಾಸಮಿಲ್ಲ" ಎಂದು ಹೇಳಿ ಕ್ರಮವಾಗಿ, ಉದಾಹರಣೆಗಳನ್ನು ಕೊಟ್ಟಿದ್ದಾನೆ.

ಱಟ } (೧) ಎಱೆದೊಯ್ದು ರತಿಗೆ ಪಿರಿದೋ |
ಕುಳ } ಕುಳಿವೊಯ್ದಂ ಮದನನೆಂಬ ನಿಯಮಂ ದೂಷ್ಯಂ ||

ಱಟ } (೨) ಜಳದ ಸಮಯದೊಳೆ ಕಮಳಂ |
ಕ್ಷಳ } ಕಱಲ್ದುವೆಂದಿಂತು ಪೇೞ್ವನಿಯಮಂ ದೂಷ್ಯಂ ||

ಱಟ } (೩) ಸಲೆ ಶಿಶಿರದಲ್ಲಿ ಕಮಲಂ |
ಲಕಾರ } ಕಱಲ್ದುವೆಂದಿಂತು ಪೇೞ್ವನಿಯಮಂ ದೂಷ್ಯಂ ||

ಈ ಮೂರು ಉದಾಹರಣೆಗಳಲ್ಲಿ ಱ ಟ ಕುಳ, ಱಟಕ್ಷಳ, ಱಟಲಕಾರಗಳು ಪ್ರಾಸಸ್ಥಾನದಲ್ಲಿರುವುದರಿಂದ ದೋಷವೆಂದು ವ್ಯಾಖ್ಯಾನಕಾರನ ಅಭಿಪ್ರಾಯ. ವೃತ್ತಿ, ಉದಾಹರಣ ಪದ್ಯಗಳನ್ನು ಕೊಟ್ಟಿರುವ ರೀತಿಯನ್ನು ನೋಡಿದರೆ ಕೇಶಿರಾಜನೇ ಇವುಗಳನ್ನು ಬರೆದಿರಬೇಕೆಂದು ತೋರುತ್ತದೆ. ಮೇಲೆ, 'ನಿಯಮಂ ದೂಷ್ಯಂ' ಎಂದು ಕೇಶಿರಾಜನು ಹೇಳಿರುವುದನ್ನು ನಾವು ನೋಡಿದ್ದೇವೆ. ಇಲ್ಲಿಯೂ ಅದೇ ಕ್ರಮವಿದೆ.

ಇನ್ನು ಮುಂದೆ ವ್ಯಾಖ್ಯಾನಕಾರನು ಹೀಗೆಂದು ಕೇಳುವನು. "ಆ ಮರಿಯಾದೆಯಲ್ಲಿ ಱಟದೊಳಂ ಕುಳದೊಳಂ, ಕ್ಷಳದೊಳಂ ಲಕಾರದೊಳಂ ಪ್ರಾಸಕ್ಕೆ ಸಲ್ಲದು. ಅದೆಂತೆಂದೊಡೆ, ಒಂದು ತಾಣದೊಳೆ ಪುಟ್ಟಿದ, ಸಂದ ರಱಂ, ಡ ಱಟಂ, ಲ ಕುಳವೆಂಬಿವು ಪ್ರಾಸಕ್ಕೆಂದುಂ ತಮ್ಮೊಳ್ ಸಲ್ಲವು ಎಂದೊಡೆ ಪ್ರಾಸಮುಱಿದ ವರ್ಣದೊಳುಂಟೆ"? ಎಂಬುದು ಆ ಪ್ರಶ್ನೆ. ಪ್ರಾಸವಿಲ್ಲವೆಂಬುದೇ ಅದಕ್ಕೆ ಉತ್ತರ.

( ಝುಳಕಂ|ಘೞಲನೆ ), ( ಝುಳಕಂ | ( ಓ ) ಕುಳಿ)
( ಝುಳಿಪಿಸಿದಂ| ತೋ| ೞ್ದಲೆ) ಎಂಬಿವು ಪ್ರಾಸಸ್ಥಾನದಲ್ಲಿ ಅನುಚಿತವೆಂಬುದನ್ನು ಉದಾಹರಣ ಪದ್ಯಗಳಿಂದ ವಿವರಿಸಿದೆ

"ಲಳಯೋರಭೇದಮೆಂಬಿದು ಸಂಸ್ಕೃತದೊಳ್ ಕ್ಷಳಾದೇಶಮಂ ಮಾೞ್ಪಲ್ಲಿಯಲ್ಲದೆಲ್ಲಿಯುಮಿಲ್ಲ" ಎಂದು ಈ ವ್ಯಾಖ್ಯಾನಕಾರನ ಸಿದ್ಧಾಂತ. ಹೀಗೆಯೇ "ರೇಫಂ ರೇಫೆಯೊಡನೆ, ಱಕಾರಂ (ಶಕಟರೇಫ) ಱಕಾರದೊಡನೆ, ಡಕಾರಂಡಕಾರದೊಡನೆ ಱ ಟಂ ಱ ಟ ದೊಡನೆ, **ಕುಳಂ ಕುಳದೊಡನೆ, ಕ್ಷಳಂ ಕ್ಷಳದೊಡನೆ, ಱ ಟ ಸಂದೇಹಂ ಱಟಸಂದೇಹದೊಡನೆ,** ಲಕಾರಂ ಲಕಾರದೊಡನೆ ಪ್ರಾಸಂ-" ಎಂದು ವ್ಯಾಖ್ಯಾನಕಾರನು ನಿರ್ಣಯಿಸುತ್ತಾನೆ. ಕುಳವನ್ನು ಕುಳದೊಡನೆಯೂ, ಕ್ಷಳವನ್ನು ಕ್ಷಳದೊಡನೆಯೂ ಪ್ರಾಸವಾಗಿಡಬೇಕಂತೆ. ಇದಲ್ಲದೆ ಱಟ ಸಂದೇಹವನ್ನು ಱಟ ಸಂದೇಹದೊಡನೆಯೇ ಪ್ರಾಸ ಮಾಡಬೇಕಂತೆ. ಈ ವಿವರಣೆಯಿಂದ ವ್ಯಾಖ್ಯಾನಕಾರನು ಪ್ರಾಸ ವಿಷಯದಲ್ಲಿ ಎಷ್ಟು ಪೂಜ್ಯ ಬುದ್ಧಿಯುಳ್ಳವನಾಗಿದ್ದಾನೆ ಎಂಬುದು ಗೊತ್ತಾಗುವುದು. ಇವು ಎಲ್ಲವುಗಳನ್ನು ಪ್ರಾಚೀನ ಕವಿಕಾವ್ಯಗಳಿಂದ ಉದಾಹರಿಸಿದ್ದಾನೆ.

ಇಲ್ಲಿ ನವೀನಾಂಶವನ್ನು ವ್ಯಕ್ತಗೊಳಿಸುವ ಪದ್ಯಗಳನ್ನು ಮಾತ್ರ ಉದಾಹರಿಸಿದೆ. ವ್ಯಾಖ್ಯಾನಕಾರನು ರೇಫ ಪ್ರಾಸಕ್ಕಾಗಿ ಎರಡು ಕಂದ ಪದ್ಯಗಳನ್ನು ಕೊಟ್ಟಿದ್ದಾನೆ ಇವೆರಡು ಪದ್ಯಗಳು ಅಲಂಕಾರ ಲಕ್ಷಣಗಳನ್ನೂ, ಲಕ್ಷ್ಯಗಳನ್ನೂ ಹೇಳುತ್ತವೆ. ಒಂದು ನಿದರ್ಶನಾಲಂಕಾರಕ್ಕೆ ಸಂಬಂಧಿಸಿದ್ದು, ಮತ್ತೊಂದು ಸಮಾಸವನ್ನು ಕುರಿತದ್ದು. ಇವೆರಡು ಉದಯಾದಿತ್ಯಾಲಂಕಾರದ ೬೦, ೩೯ನೆಯ ಪದ್ಯಗಳು.

ವ್ಯಾಖ್ಯಾನಕಾರನು ಉದಾಹರಣ ಪದ್ಯಗಳನ್ನು ಕೊಟ್ಟು ಕೊನೆಯಲ್ಲಿ ತಾನು ತೆಗೆದುಕೊಂಡಿರುವ ಪದ್ಯಗಳ ಆಕರ ಗ್ರಂಥಗಳ ಹೆಸರನ್ನೂ, ಕವಿಯ ಹೆಸರನ್ನೂ ಹೇಳಿದ್ದಾನೆ ಇವುಗಳಲ್ಲಿ ಕಲವು ಲೀಲಾವತಿ, ಪುಣ್ಯಾಶ್ರವಸಂಬೋಧನೆ, ರಾಮ ಚರಿತೆ ಆಗಿವೆ. ಕೆಲವು ಪದ್ಯಗಳ ಮಾತೃಕೆಯನ್ನಾಗಲೀ, ಕವಿಯ ಹೆಸರನ್ನಾಗಲೀ ಹೇಳಿಲ್ಲ

ರೇಫ ಪ್ರಾಸದ ಕೆಳಗೆ ಒಂದು ಪದ್ಯ ಹೀಗಿದೆ:—

"ಪಿರಿದುರಿಗಣ್ಣನಾಣೆಯುನಪೇವೊಗಲಸ್ಸಿಂ ಮುಗುಳೆಂದು ಮುಟ್ಟಬಾ |
ರದು ಬನವೆಂದು ಬಾಯ್ದೆಱೆಯಬಾರದು ಸಂಪಗೆಯೆಂದು ಸೂಡಬಾ ||
ರದು ಕೊಳನೆಂದು ಕೈದುಡುಕಬಾರದು ತಾವರೆಯೆಂದು ತೋರಬಾ |
ರದು ಪೊಸ ಸುಗ್ಗಿಯೆಂದುಸಿರಬಾರದು ತನ್ನಯ ಮಂಜುವೆಟ್ಟದೊಳ್ ||

ಎಂದಾಡಯ್ಯನ ಮತದಿಂ ರೇಫೆ ದಕಾರಕ್ಕಂ ಪ್ರಾಸಮುಂಟು, ಉಂಟಾದೊಡಂ ಪೇೞಲಾಗದು" ಎಂದು ತನ್ನ ಅಭಿಪ್ರಾಯವನ್ನು ವ್ಯಾಖ್ಯಾನಕಾರನು ವ್ಯಕ್ತಗೊಳಿಸಿದ್ದಾನೆ. ಇಲ್ಲಿ ಪ್ರಥಮ ಚರಣವು 'ಪಿರಿದು' ಎಂಬ ರೇಫ ಪ್ರಾಸದಿಂದ ಆರಂಭವಾಗಿ, ಅದಕ್ಕೆ ಸರಿಯಾಗಿ ಮುಂದಿನ ಚರಣಗಳಲ್ಲಿ ಪ್ರಾಸಸ್ಥಾನದಲ್ಲಿ ದಕಾರವು ಬಂದಿರುವುದರಿಂದ ಇವನು ಹೀಗೆ ಹೇಳಿದ್ದಾನೆ. ಈಗಿನ ಅಚ್ಚಿನ ಪ್ರತಿಯಲ್ಲಿ 'ಪಿರಿದು' ಎಂಬ ಪಾಠವಿಲ್ಲ. ಅಲ್ಲಿ, ಮೊದಲಿನಿಂದಲೂ ದಕಾರ ಪ್ರಾಸವೇ ಇದೆ. ಪಿರಿದು ಎಂಬುದರ ಸ್ಥಾನದಲ್ಲಿ, 'ಪುದಿದುರಿಗಣ್ಣನಾಣೆಯಂ' ಎಂಬ ಪಾಠವಿದೆ. ಕವಿ ಹೀಗೆಯೇ ಬರೆದಿರಬೇಕು. ಪ್ರಾಸವನ್ನು ತಪ್ಪದೆ ನಡೆಸಿಕೊಂಡ ಬಂದ ಕವಿ ಈ ಒಂದು ಸ್ಥಳದಲ್ಲಿ ಅಕ್ಷರದ ಕೊರತೆಯಿಂದ ಅಪಪ್ರಯೋಗ ಮಾಡಿದ್ದಾನೆಂದು ಹೇಳಲಾಗದು. ವ್ಯಾಖ್ಯಾನಕಾರನಿಗೆ ದೊರೆತ ಪ್ರತಿಯಲ್ಲಿ 'ಪಿರಿದು' ಎಂಬ ಪಾಠವಿದ್ದಿರಬೇಕು. ಆದ್ದರಿಂದ ಈ ಅಂಶವನ್ನು ವ್ಯಾಖ್ಯಾನಾವಸರದಲ್ಲಿ ಸ್ಪಷ್ಟಗೊಳಿಸಿರುವಂತೆ ತೋರುತ್ತದೆ. ಅಲ್ಲದೆ ಈ ಎರಡು ಶಬ್ದಗಳಲ್ಲಿ ಯಾವುದಾದರೊಂದು ಶಬ್ದವಿದ್ದರೂ ಇಲ್ಲಿ ಅರ್ಥಕ್ಕೆ ಚ್ಯುತಿಯುಂಟಾಗುವುದಿಲ್ಲ. ಪಿರಿದು ಎಂಬುದು ಆಧಿಕ್ಯವನ್ನು ತಿಳಿಸುತ್ತದೆ, 'ಪುದಿ' ಧಾತು ವ್ಯಾಪನಾರ್ಥವನ್ನು ಹೇಳುತ್ತದೆ. "ಪುದಿದ ಉರಿಗಣ್ಣನ ಆಣೆಯಂ" ಎಂದೂ, 'ಪಿರಿದು ಉರಿಗಣ್ಣನ ಆಣೆಯಂ' ಎಂದೂ ಎರಡು ರೀತಿಯಲ್ಲಿ ಓದಿದರೂ ಅರ್ಥಹಾನಿಯಿಲ್ಲ. ಕವಿ ದಕಾರ ಪ್ರಾಸವನ್ನೇ ಇಟ್ಟು ಬರೆದಿರಬೇಕು.

ಇಲ್ಲಿ ವ್ಯಾಖ್ಯಾನಕಾರನು ಆಂಡಯ್ಯ ಎಂಬುದಕ್ಕೆ ಬದಲು ಆಡಯ್ಯನೆಂದು ಕರೆದಿದ್ದಾನೆ. ಕನ್ನಡ ಸಾಹಿತ್ಯದಲ್ಲಿ ಈ ಕವಿ ಆಂಡಯ್ಯನೆಂಬ ಹೆಸರಿನಿಂದಲೇ ಪ್ರಸಿದ್ಧನಾಗಿದ್ದಾನೆ. ಆಂಡಯ್ಯನೆಂಬ ಪದಕ್ಕೆ ಅರ್ಥವೇನೋ, ವ್ಯುತ್ಪತ್ತಿ ಕ್ರಮವೇನೋ, ಇದು ವರೆಗೆ ಪಂಡಿತರು ವಿಚಾರಿಸಿದಂತೆ ತೋರುವುದಿಲ್ಲ. ಶಬ್ದವನ್ನು ನೋಡಿದರೆ, ಏನೋ ವಿಜಾತೀಯವಾಗಿಯೂ, ಅಪರೂಪವಾಗಿಯೂ ಕಾಣುತ್ತದಾದ್ದರಿಂದ ಯಾರೂ ಇದಕ್ಕೆ ಕೈ ಹಾಕಲಿಲ್ಲವೆಂದು ಕಾಣುತ್ತದೆ.* ಇದು ಪ್ರಾಯಶಃ ಆಂಡಯ್ಯ ಎಂಬ ರೂಪವಲ್ಲ. ಆಡಯ್ಯ ಎಂಬ ಪದವೇ ಸಾಧುವೆಂದು ತೋರುವುದು. ಆದಯ್ಯ ಎಂಬುದರ ವಿಕೃತರೂಪವೇ ಆಡಯ್ಯ ದ ಕಾರವು ಡ ಕಾರವಾಗಿ ಅಪಭ್ರಂಶವಾಗುವುದರಿಂದ ಆಡಯ್ಯ ಎಂಬುದು—ವೃದ್ಧ ಎಂಬುದು ವಡ್ಡವಾದಂತೆ— ಆದಯ್ಯ ಶಬ್ದದ ವಿಕೃತರೂಪವಾಗಿದೆ. ಜೈನಕವಿಗಳು ಸಂಸ್ಕೃತ ಶಬ್ದಗಳ ವಿಕೃತರೂಪಗಳನ್ನೇ ತಮ್ಮ ಹೆಸರನ್ನಾಗಿ ಇಟ್ಟುಕೊಳ್ಳುತ್ತಿರುವುದು ಕನ್ನಡ ಸಾಹಿತ್ಯದಲ್ಲಿ ಕಂಡ ವಿಷಯವಾಗಿದೆ. ಪಂಪ, ರನ್ನ, ಜನ್ನ ಮುಂತಾದ ಕವಿಗಳ ಹೆಸರುಗಳು ಪದ್ಮಪ, ರತ್ನ, ಜನಾರ್ದನ ಮೊದಲಾದುವುಗಳ ಅಪಭ್ರಂಶಗಳಾಗಿವೆ. ಆದಪ್ಪ, ಆದಯ್ಯ ಎಂಬ ಹೆಸರುಗಳನ್ನು ಈಗಲೂ ಜನರು ಇಟ್ಟುಕೊಳ್ಳುತ್ತಾರೆ. ಆದಿನಾಥನು ತೀರ್ಥಂಕರರಲ್ಲಿ ಮೊದಲನೆಯಾತನು. ಈ ಹೆಸರನ್ನು ಸಂಕ್ಷೇಪ ಮಾಡಿ ಆದಯ್ಯ, ಆದಪ್ಪ ಎಂದು ಇಟ್ಟುಕೊಳ್ಳುವುದು ಅಂದವಾಗಿದೆ. ಈ ಆದಯ್ಯ ಅಪಭ್ರಂಶವಾಗಿ ಆಡಯ್ಯವಾಗಿದೆ. ಇದನ್ನು ಆಂಡಯ್ಯನೆಂದು ಕರೆಯುವುದು ಸರಿಯಾಗದು. "ಆ' ಕಾರವನ್ನು ಬರೆಯುವಾಗ ಆಕಾರದ ಮಧ್ಯಗೆರೆಯನ್ನು ಮುಂದಕ್ಕೆಳೆದು ಸುರುಳಿ ಸುತ್ತುವುದು ಪದ್ಧತಿಯಾಗಿ ಕಾಣುತ್ತದೆ ಈ ಸುರುಳಿ ಬಿಂದುವಿನಂತೆ ಕಾಣುವುದರಿಂದ ಪ್ರಮಾದವಾಗಿ ಅದು ಬಿಂದುಯುಕ್ತವಾಗಿ ಕಾಣುವ ಸಂಭವವಿದೆ. ಇದೇ ಆಂಡಯ್ಯ ಎಂದು ಓದಿಕೊಳ್ಳಲು ಭ್ರಮಮೂಲವಾಗಿರಬೇಕು. ಈ ವ್ಯಾಖ್ಯಾನಕಾರನು ೪, ೫ ಎಡೆಗಳಲ್ಲಿ ಈ ಹೆಸರನ್ನು ಎತ್ತಿದ್ದಾನೆ. ಎಲ್ಲಾ ಕಡೆಯಲ್ಲಿಯೂ ಆಡಯ್ಯನೆಂದೇ ಪ್ರಯೋಗಿಸಿದ್ದಾನೆ. ಈ ಕಾರಣಗಳಿಂದ ಆಡಯ್ಯನೆಂಬ ಪ್ರಯೋಗವು ಸಾಧುವಾಗಿಯೂ ಸಾರ್ಥಕವಾಗಿಯೂ ಕಾಣುವುದು. ಕವಿ ಜೈನನಾಗಿರುವುದರಿಂದ ಆಡಯ್ಯ ಎಂಬ ಹೆಸರು ಆತನಿಗೆ ಹೊಂದಿಕೊಳ್ಳುತ್ತದೆ.

ಅಂಬಪ್ರಾಸಕ್ಕಾಗಿ ನಾಲ್ಕು ಪದ್ಯಗಳು ಉದಾಹೃತವಾಗಿವೆ. ಅವುಗಳಲ್ಲಿ ಈ ಮುಂದಿನದೊಂದು:—

---

* ಆಣ್ಡ, ಆಣ್ಡಾರಿ—ಎಂಬ ಹೆಸರುಗಳು ಶೈವರಲ್ಲಿ ಬಳಕೆಯಲ್ಲಿವೆ. ತಮಿಳಿನ 'ಆಣ್ಡಾರ್' ಎಂಬುದರಿಂದ ಈ ಪದಗಳು ಕನ್ನಡದಲ್ಲಿ ಶೈವರಿಂದ ಪ್ರಚಾರದಲ್ಲಿ ಬಂದಿರಬೇಕು.

ಇದರ ರೂಪ ಸಿಪ್ಪತ್ತಿಯನ್ನು 'ಆಳ್' ರಾಜ್ಯಭಾರ ಮಾಡು. ಎಂಬ ಧಾತುವಿನಿಂದ ಹೇಳಲಾಗುತ್ತದೆ. ಜೈನರಲ್ಲಿ ಈ ಹೆಸರು ಬಳಕೆಯಲ್ಲಿರುವಂತೆ ಕಂಡು ಬರುವುದಿಲ್ಲ.

ಗಱಿಯಿಸಿದರ್ಥಮುಂ ಸಲೆ ಪಾಂ |
ಗಱಿಯಪೆಯುಂ ಶಬ್ದವೊಂದದಿದ್ದೊಡೆ ಮುತ್ತುಂ ||
ಮೆಱಿಸುಂ ಕೋದಂತಿರೆಪೇ |
ಟ್ವಿಱಿಗವಿಗಳಕವಿತೆ ಬುಧರನೆರ್ದೆಗೊಳಿಸುಗುಮೇ ||

"ಶ್ರೀವಿಜಯನ ಪ್ರಯೋಗ"

ಇದು ಕವಿರಾಜಮಾರ್ಗದ ೨ನೆಯ ಪರಿಚ್ಛೇದದ ೫ನೆಯ ಪದ್ಯ ಅಲ್ಲಿ ಕೊನೆಯ ಎರಡು ಚರಣಗಳಲ್ಲಿ ಪಾಠವ್ಯತ್ಯಾಸವಿದೆ.

ಮುತ್ತುಂ ||
ಮೆಱಿಸುಂಗೋದಂತಿರ್ಕ್ಕುಂ |
ಕಱಲ್ಚಿ ಕಳೆಗೊಂದಿ ಮುಂದೆ ಬಾರದ ಪದನುಂ ||

ಈ ಪಾಠದಲ್ಲಿಅನ್ವಯ ಕ್ಲಿಷ್ಟತೆಯಿದೆ. ಅದಿರಲಿ. ವ್ಯಾಖ್ಯಾನಕಾರನು ಈ ಪದ್ಯವನ್ನು ಉದಾಹರಿಸಿ ಅದನ್ನು ಶ್ರೀವಿಜಯನ ಪ್ರಯೋಗವೆಂದು ಕರೆದಿರುವುದರಿಂದ ಕವಿರಾಜಮಾರ್ಗವನ್ನು ಬರೆದವನು ಶ್ರೀವಿಜಯನೆಂಬಂಶವು ಮತ್ತಷ್ಟು ದೃಢಪಡುತ್ತದೆ. ಮೇಲೆ ಪ್ರಾಸ ಭೇದಗಳನ್ನು ಹೇಳುವ ಅವಸರದಲ್ಲಿ ಕವಿರಾಜಮಾರ್ಗದ "ಸುತ ಶಬ್ದಾಳಂಕಾರ" ಎಂದು ಆರಂಭವಾಗುವ ೨೮ನೆಯ ಪದ್ಯವನ್ನು ಉದಾಹರಿಸಿದೆಯಷ್ಟೆ. ಅಲ್ಲಿ ಕೃತಕೃತ್ಯಮಲ್ಲವಲ್ಲಭ ಎಂಬುದಕ್ಕೆ ವ್ಯಾಖ್ಯಾನಕಾರನು ನೃಪತುಂಗ ದೇವನೆಂದು ವ್ಯಾಖ್ಯಾನಾವಸರದಲ್ಲಿ ಬರೆದಿದ್ದಾನೆ. ಇಲ್ಲಿ ಶ್ರೀವಿಜಯನೆಂದು ಹೇಳಿದ್ದಾನೆ. ಕೃತಕೃತ್ಯಮಲ್ಲವಲ್ಲಭ, ನೃಪತುಂಗದೇವ, ಶ್ರೀವಿಜಯ ಎಂಬಿವುಗಳು ಒಬ್ಬನಿಗೇ ಇದ್ದ ಪರ್ಯಾಯ ನಾಮಗಳು. ನೃಪತುಂಗನು ಬೇರೆ, ಶ್ರೀವಿಜಯನು ಬೇರೆ ಎಂಬ ತಿಳಿವಳಿಕೆಯನ್ನು ಇದು ನಿರಸನ ಮಾಡುವುದು. ಕೇಶಿರಾಜನು ಪೂರ್ವ ಕವಿಗಳನ್ನು ಸ್ಮರಿಸುವ ಸಂದರ್ಭದಲ್ಲಿ ನೃಪತುಂಗನ ಹೆಸರನ್ನು ಹೇಳದೆ ಶ್ರೀವಿಜಯನ ಹೆಸರನ್ನು ಹೇಳಿರುವುದರಿಂದ ಇವು ಬೇರೆ ಬೇರೆ ಕವಿಗಳ ಹೆಸರಾಗಿರಬೇಕೆಂದು ಕೆಲವರು ಅಭಿಪ್ರಾಯ ಪಟ್ಟಿರುವುದನ್ನು ಪಂಡಿತರು ಬಲ್ಲರು. ಶ್ರೀವಿಜಯನೇ ನೃಪತುಂಗದೇವನೆಂಬುದು ಈ ವ್ಯಾಖ್ಯಾನಕಾರನ ಬರೆವಣಿಗೆಯಿಂದ ಸ್ಪಷ್ಟವಾಗಿದೆ. ಕೇಶಿರಾಜನು ಶ್ರೀವಿಜಯನ ಹೆಸರನ್ನು ಹೇಳಿರುವುದರಿಂದ, ಅದು ನೃಪತುಂಗನ ಹೆಸರೆಂದು ನಿರ್ಧರಿಸಬೇಕು. ಬಹು ಕಾಲದಿಂದ ಕವಿರಾಜಮಾರ್ಗದ ಕರ್ತೃವಿನ ವಿಷಯವಾಗಿ ವಾದವಿವಾದ ನಡೆದು ಇತ್ಯರ್ಥವಾಗದೆ ಹಾಗೆಯೇ ಉಳಿದು ಹೋಗಿದೆ. ಈ ಎರಡು ಹೆಸರುಗಳು ಒಬ್ಬನಿಗೇ ಇದ್ದುದರಿಂದ, ನೃಪತುಂಗನು, ಎಂದರೆ ಶ್ರೀವಿಜಯನು ಕವಿರಾಜಮಾರ್ಗದ ಕರ್ತೃವೆಂದು ನಿರ್ಧರಿಸಿಕೊಳ್ಳಬೇಕು. ಕವಿರಾಜಮಾರ್ಗದಲ್ಲಿ ಪದ್ಯಕವಿಗಳನ್ನು ಹೆಸರಿಸುವ ಸಂದರ್ಭದಲ್ಲಿ ಶ್ರೀವಿಜಯನ ಹೆಸರೂ ಬಂದಿರುವುದರಿಂದ ಕವಿರಾಜಮಾರ್ಗವನ್ನು ಬರೆದ ಶ್ರೀವಿಜಯನು ತನ್ನ ಹೆಸರನ್ನು ಕವಿಗಳ ಗುಂಪಿಗೆ ಸೇರಿಸಿ

ಹೇಳಿದುದು ಅಷ್ಟು ಯುಕ್ತವಾಗಲಾರದೆಂಬ ಆಕ್ಷೇಪಣೆ ಬಲವತ್ತರವಾಗಿಲ್ಲ. ನೃಪತುಂಗನು ಆಗಿನ ಕಾಲದಲ್ಲಿ ಸರ್ವಮಾನ್ಯನಾದ ಕವಿಯಾಗಿದ್ದನು. ಎಲ್ಲರ ಮಾನ್ಯತೆಗೆ ಪಾತ್ರನಾಗಿದ್ದ ರಾಜಕವಿ ತನ್ನ ಹೆಸರನ್ನೂ ಕವಿಗಳ ಶ್ರೇಣಿಯಲ್ಲಿ ಸೇರಿಸಿ ಹೇಳಿದುದರಿಂದ ಯಾವ ನ್ಯೂನತೆಯೂ ಇಲ್ಲ, ಅಹಂಕಾರವೂ ಇಲ್ಲ. ತಮ್ಮನ್ನು ತಾವೇ ಹೊಗಳಿಕೊಳ್ಳುವ ಕವಿಗಳ ಆತ್ಮಶ್ಲಾಘನೆಗಿಂತ ಇದೇನೂ ಅಧಿಕವಾಗಿಲ್ಲ. ಆದ್ದರಿಂದ ಕೇಶಿರಾಜನೂ ಅವನಿಗೆ ಮುಂಚೆ ಇದ್ದ ದುರ್ಗಸಿಂಹನೂ ಹೆಸರಿಸಿದ ಶ್ರೀವಿಜಯನು ನೃಪತುಂಗದೇವನೇ.

ಮುಂದೆ ವ್ಯಾಖ್ಯಾನಕಾರನು ಕುಳ ಪ್ರಾಸ ಸಂದರ್ಭದಲ್ಲಿ ಕಬ್ಬಿಗರ ಕಾವದಿಂದ 'ಎಳಗಿಳಿವಿಂಡಿನಂತೆ' ಎಂಬ ೧೪ ನೆಯ ಪದ್ಯವನ್ನು ಉದಾಹರಿಸಿ, ಅದು ಸಕ್ಕದ ಸಹೋದರನವೆಂದು ಹೇಳಿದ್ದಾನೆ. ಆದಯ್ಯನಿಗೆ ಈ ಹೆಸರು ಎಷ್ಟು ಅಚ್ಚು ಮೆಚ್ಚಿನವಾಗಿದೆ ಎಂಬುದನ್ನು ರಸಿಕರು ಗ್ರಹಿಸದೆ ಇರರು.

ವ್ಯಾಖ್ಯಾನಕಾರನು ಕಾವ್ಯಾವಲೋಕನವನ್ನು ಕೂಲಂಕಷವಾಗಿ ಅರಿತವನು ಎಂಬುದಕ್ಕೆ ಅವನು ಅದನ್ನು ಬಳಸಿಕೊಂಡಿರುವ ರೀತಿಯೇ ಪ್ರಬಲವಾದ ಕಾರಣವಾಗಿವೆ. ಕಾವ್ಯಾವಲೋಕನದ ಉದಾಹರಣೆಯನ್ನೆತ್ತಿಕೊಂಡು ಬರಿಯ ಆ ಗ್ರಂಥದ ಹೆಸರನ್ನು ಹೇಳಿ ಅಲ್ಲಿಗೆ ಬಿಡದೆ ಕೆಲವೆಡೆಯಲ್ಲಿ ಆ ಪದ್ಯವು ಯಾವ ಸಂದರ್ಭದಲ್ಲಿ ಉದಾಹೃತವಾಗಿದೆಯೆಂಬುದನ್ನು ಹೇಳಿದ್ದಾನೆ. ಪ್ರಾಸಸ್ಥಾನದಲ್ಲಿ ಬರಿಯ ಕ್ಷಳಗಳೇ ಬಂದಿರಬೇಕೆಂಬುದನ್ನು ನಿರ್ದೇಶಿಸುವುದಕ್ಕಾಗಿ ಕಾವ್ಯಾವಲೋಕನದ

> ಜಳಜಾಯುಮಾನಮುಲರ್ಗಣ್ |
> ಪುಳಿನಮದುನ್ನತನಿತಂಬಮಳಿವೇಣೀಯಂ ||
> ಚಳದಳಕಪ್ರತತಮ್ಮೃಣಾ |
> ಳಳತಾಕಲ್ಪಂಗಳಾ ಳತಾಂಗಿಯ ತೋಳ್ಗಳ್ || ಎಂಬ

೬೭೭ನೆಯ ಪದ್ಯವನ್ನು ಹೇಳಿ, "ಇದು ಕಾವ್ಯಾವಲೋಕನದ ಪ್ರತ್ಯಯೋಪಮೆ (ಪ್ರತ್ಯುಪಮಾ)" ಎಂದು ಅಲ್ಲಿ ಹೆಸರಿಸಿದ ಅಲಂಕಾರದ ಹೆಸರನ್ನೂ ಕೊಟ್ಟಿದ್ದಾನೆ. ಇಲ್ಲಿ ಒಂದು ಚಮತ್ಕಾರವಾಗಿದೆ. ಕಾವ್ಯಾವಲೋಕನದಲ್ಲಿ ಈ ಪದ್ಯವು ಪ್ರತ್ಯಯೋಪಮೆಯ ಲಕ್ಷ್ಯವಾಗಿ ಉದಾಹೃತವಾಗಿದೆ. ಆದರೆ ಅಲ್ಲಿ ಕ್ಷಳ ಪ್ರಾಸವಿಲ್ಲ. ಜಲಜ, ಪುಲಿನ, ಚಲತ್, ಲತಾ ಇವೆಲ್ಲವೂ ಕ್ಷಳವಲ್ಲ. ಲಕಾರವಾಗಿಯೇ ಇವೆ. ಈ ವ್ಯಾಖ್ಯಾನಕಾರನ ಪಾಠದಂತೆ ಅವು ಕ್ಷಳವಾಗಿರಬೇಕೆಂದೂ ಕಾಣುತ್ತದೆ. ಕ್ಷಳಕುಳಪ್ರಾಸದ ವಿಷಯವನ್ನು ತಿಳಿಸುವ, 'ಕುಳದ ನಿಯಾಮದೊಳೆಂದುಂ' ಎಂಬ ಸೂತ್ರಕ್ಕೆ ಬರೆದ ವೃತ್ತಿಯಲ್ಲಿ ಸಂಸ್ಕೃತದ ಲಕಾರಕ್ಕೆ ಕ್ಷಳನನ್ನಲ್ಲದೆ ವಿಕಲ್ಪಮಾಗಿ ಲಕಾರಮುಂ ಪೇಳಿಸಲ್ಲ," ಎಂಬ ಅಭಿಪ್ರಾಯವಿವರಣೆ ಇದೆಯಷ್ಟೆ. ಅದನ್ನನುಸರಿಸಿ ಪೂರ್ವ ಕವಿಗಳು ಸಂಸ್ಕೃತ ಲಕಾರಯುಕ್ತ ಶಬ್ದಗಳನ್ನೆಲ್ಲ ಕನ್ನಡದಲ್ಲಿ ಬರೆಯುವಾಗ ಕ್ಷಳವನ್ನಾಗಿಯೇ ಬರೆಯುತ್ತಿದ್ದರೆಂಬುದಕ್ಕೆ ಈ ಪದ್ಯವು

ಸಾಕ್ಷಿಯಾಗಿದೆ. ಈ ಪದ್ಯದಲ್ಲಿ ಪ್ರಾಸಸ್ಥಾನದಲ್ಲಿಯೂ ಕ್ಷಳವಿದೆ, ಪ್ರಾಸವಿಲ್ಲದೆಡೆ ಯಲ್ಲಿಯೂ ಎಂದರೆ ಅಳಿ, ಅಳಕ, ಸೃಗಾಳ, ಳತಾಂಗಿ–ಇವುಗಳಲ್ಲಿ ಕ್ಷಳವಿದೆ. ಈ ಪದ್ಯವನ್ನು ಬರೆದ ಕವಿ ಕ್ಷಳಪ್ರಾಸವನ್ನೇ ಇಟ್ಟು ಇದನ್ನು ಬರೆದಿರಬೇಕೆಂದು ತೀರ್ಮಾನಿಸಬೇಕಾಗಿದೆ.

ಲಕಾರ ಪ್ರಾಸಕ್ಕಾಗಿ ಈ ಕೆಳಗಿನ ಪದ್ಯವು ಉದಾಹೃತವಾಗಿದೆ.

ತಲೆಯುಂ ತೂಗುವನೊಬ್ಬನುಬ್ಬಿ ಕೆಲದೊಳ್ ಕಾಳ್ಕ(ಳ್ಕ)ಬ್ಬಮುಂ ಕಟ್ಟಿಕೋ |
ಟಲೆಗೊಂಡೂಳ್ವವನೊಬ್ಬನಂತವರ ಚಾತುರ್ಯಕ್ಕೆ ಕೈವಾರದಿಂ ||
ಪೊಲೆಗೆಟ್ಟೀವವನೊಬ್ಬನಿಂತ ಕಟಿಯುಕ್ಷ್ಣೋಯಾದ್ಯಶಸ್ತ್ರಾದ್ಯಶೋ |
ಬಲಿ ಎಂಬುಕ್ತಿಗೆ ದುರ್ವಿದಗ್ಧರೆ ವಲಂ ನೋಂತರ್ ಪೆರರ್ ನೋಂತರೇ ||

ಈ ಪದ್ಯದ ತೃತೀಯ ಚತುರ್ಥ ಚರಣಗಳನ್ನು ಭಟ್ಟಾಕಲಂಕನು ಶಬ್ದಾನುಶಾಸನ ದಲ್ಲಿ ಉದಾಹರಿಸಿದ್ದಾನೆ. ಶಬ್ದಾನುಶಾಸನದ ಕನ್ನಡದ ಟೀಕೆಯ ಹೊಸ ಆವೃತ್ತಿಯ ಸೂತ್ರ ೫೫, ಲಗರ ಕೆಳಗೆ, 'ಯಕ್ಷ್ಣೋಯಾದ್ಯಶಸ್ತ್ರಾದ್ಯಶೋಬಲಿಃ' ಎಂದು ವಿಸ ರ್ಗಾಂತವಾಗಿ ಪಾಠ ಅಚ್ಚಾಗಿದೆ. ಇಲ್ಲಿ ವಿಸರ್ಗದಿಂದ ಛಂದೋಭಂಗವಾಗುವುದ ರಿಂದ ಇದು ಅಚ್ಚಿನ ದೋಷವಾಗಿರಬೇಕು. ಅದಿರಲಿ. ಶಬ್ದಾನುಶಾಸನದಲ್ಲಿ ಈ ಪದ್ಯವು ಅನುಕರಣದಲ್ಲಿ ಸಂಧಿ ಐಚ್ಛಿಕವೆಂಬುದನ್ನು ತಿಳಿಸುವ ಸಮಯದಲ್ಲಿ ಬಂದಿದೆ. ಇದು ಶಬ್ದಮಣಿದರ್ಪಣದಲ್ಲಿ ಉದಾಹೃತವಾಗಿಲ್ಲ. ವ್ಯಾಖ್ಯಾನಕಾರನು ಈ ಪದ್ಯ ವನ್ನು ಸಂದರ್ಭಾಂತರದಲ್ಲಿ ಉದ್ಧರಿಸಿದ್ದಾನೆಯಾದರೂ ಇವನು ಭಟ್ಟಾಕಲಂಕನ ಪ್ರಯೋಗವನ್ನೇ ಎತ್ತಿಕೊಂಡಿರಬಹುದೇ ಎಂಬ ಶಂಕೆ ಉಂಟಾಗುತ್ತದೆ. ಶಬ್ದಾನು ಶಾಸನದಲ್ಲಿ ಪೂರ್ಣಪದ್ಯವಿಲ್ಲ. ವ್ಯಾಖ್ಯಾನಕಾರನು ಬೇರೆಡೆಯಲ್ಲೆಲ್ಲಿಯೂ ಶಬ್ದಾನು ಶಾಸನದ ಹೆಸರೆತ್ತಿಲ್ಲ. ಆ ವ್ಯಾಕರಣದಿಂದ ಉದಾಹರಣೆಗಳನ್ನಾಗಲೀ, ಸೂತ್ರಗಳ ನ್ನಾಗಲೀ, ಅನುವಾದಿಸಿಲ್ಲ. ಭಟ್ಟಾಕಲಂಕನು ಈ ವ್ಯಾಖ್ಯಾನ ಪದ್ಯದಿಂದಲೇ ಭಾಗ ವನ್ನೆತ್ತಿಕೊಂಡಿರಬಹುದೆಂದು ಹೇಳಲು ಅವಕಾಶವಿದೆ. ಇದು ಲೀಲಾವತಿಯ ಪ್ರಥಮಾಶ್ವಾಸದ ೪೦ನೆಯ ಪದ್ಯ. ಈ ವ್ಯಾಖ್ಯಾನಕಾರನೂ, ಭಟ್ಟಾಕಲಂಕನೂ ಬೇರೆ ಬೇರೆಯಾಗಿ ಮೂಲಗ್ರಂಥದಿಂದ ಈ ಪದ್ಯವನ್ನು ತೆಗೆದುಕೊಂಡಿರಲೂ ಬಹುದು. ಶಬ್ದಾನುಶಾಸನಕ್ಕೆ ವಿಸ್ತರವಾದ ವ್ಯಾಖ್ಯಾನವನ್ನು ಬರೆಯಲು ಭಟ್ಟಾಕಲಂಕನಿಗೆ ಈ ಕನ್ನಡ ವ್ಯಾಖ್ಯಾನವು ಪ್ರೇರಕವಾಗಿದ್ದರೂ ಇರಬಹುದು. ಅದೇನೇ ಇರಲಿ, ಈ ವ್ಯಾಖ್ಯಾನವು ಭಟ್ಟಾಕಲಂಕನಿಗೆ ಮುಂಚೆ ರಚಿತವಾಗಿದೆ ಯೆಂಬುದರಲ್ಲಿ ಸಂದೇಹವಿಲ್ಲ. ವ್ಯಾಖ್ಯಾನಕಾರನು ಕವಿರಾಜಮಾರ್ಗ, ಕಾವ್ಯಾವ ಲೋಕನ, ಪ್ರಾಚೀನ ಕವಿಗಳ ಕಾವ್ಯಗಳನ್ನಷ್ಟೆ ವ್ಯಾಖ್ಯಾನಸಂದರ್ಭದಲ್ಲಿ ಆಧಾರ ವಾಗಿ ಗ್ರಹಿಸಿದ್ದಾನೆ. ಇವನ ಭಾಷೆಯೂ ಇದಕ್ಕೆ ಬೆಂಬಲವಾಗಿದೆ. ಅಲ್ಲದೆ ಈ ಪ್ರಾಸಪ್ರಕರಣವನ್ನು ನಿರೂಪಿಸುವಲ್ಲಿ ವ್ಯಾಖ್ಯಾನಕಾರನು ಪ್ರಾಚೀನ ಸಂಪ್ರದಾಯ ನಿಷ್ಠೆಯಲ್ಲಿ ಕೇಶಿರಾಜನಿಗಿಂತಲೂ ಕಠೋರನಾಗಿದ್ದಾನೆ. ತಕ್ಕಸೂತ್ರಕಾರನಿಗೆ

ತಕ್ಕ ವ್ಯಾಖ್ಯಾನಕಾರನಿವನು. ಱಟ, ಕುಳ, ಕ್ಷಳ, ಲಕಾರ ಪ್ರಾಸಗಳಲ್ಲಿ ದಾರಿಬಿಟ್ಟ ಕವಿಗಳಿಗೆ ಇವನು ಶಲ್ಯಪ್ರಾಯನಾಗಿದ್ದಾನೆ. ಆಡಯ್ಯ, ಕಮಳಭವರಂಥ ಪ್ರಾಚೀನ ಕವಿಗಳ ಪ್ರಯೋಗಗಳನ್ನೂ ಇವನು ಅಲ್ಲಗಳೆದಿದ್ದಾನೆ. ಭಟ್ಟಾಕಲಂಕದೇವನಾದರೋ ಹಾಗಲ್ಲ. ಶಬ್ದಾನುಶಾಸನದಲ್ಲಿ ಭಟ್ಟಾಕಲಂಕದೇವನು ಈ ವಿಷಯಕ್ಕೆ ಮಹತ್ತ್ವವನ್ನೇ ಕೊಟ್ಟಿಲ್ಲ ರೇಫೆ, ಶಕಟರೇಫೆ, ಱಟ, ಕುಳಕ್ಷಳಗಳಲ್ಲಿ ಉಚ್ಚಾರಣೆಯ ವೈಶಿಷ್ಟ್ಯವಿಲ್ಲದಿರುವುದರಿಂದ ಪ್ರಾಸಸ್ಥಾನಕ್ಕಾಗಿ ಹಿಂಸೆ ಪಡುವುದು ವಿಹಿತವಲ್ಲವೆಂಬುದು ಅವನ ಅಭಿಪ್ರಾಯ. ಇದಕ್ಕೆ ಕಾರಣ ಇವನ ಕಾಲಕ್ಕೆ ಶಕಟರೇಫೆ, ಱಟಗಳು ಮಾಯವಾದದ್ದು. ಹರಿಹರನು

ನೋಡುವೊಡೊಂದಕ್ಕರಮದು |
ಮಾಡುವೊಡುಚ್ಚರಣೆಗರಿದು ಮೂಱುಂತೆಱನಂ ||
ಕೂಡೆ ಕವಿತತಿವಿಚಾರಿಸ |
ಬೇಡದಱಿಂ ಱಟ, ಕುಳ, ಕ್ಷಳಂಗಳನಿದಱೆೊಳ್ |

ಎಂದು ಱಟ, ಕುಳ, ಕ್ಷಳಗಳ ವಿರೋಧವಾಗಿ ಬಂಡಾಯವನ್ನೆಬ್ಬಿಸಿದ ಮೇಲೆ ಅಲ್ಪ ಸ್ವಲ್ಪವಾಗಿ, ಅರೆಜೀವಿಯಾಗಿ ಉಳಿದಿದ್ದ ಈ ಅಕ್ಷರಗಳ ಉಚ್ಚಾರಣೆ ಬರೆವಣಿಗೆಗಳು ನಶಿಸಿ ಹೋಗಿ ಭಟ್ಟಾಕಲಂಕನ ಹೊತ್ತಿಗೆ ಸುಮಾರು ನಾಲ್ಕು ನೂರು ವರ್ಷಗಳಾದರೂ ಆಗಿರಬೇಕು. ಆದ್ದರಿಂದ ಭಟ್ಟಾಕಲಂಕನು ಈ ವಿಷಯದಲ್ಲಿ ಔದಾಸೀನ್ಯವನ್ನು ವ್ಯಕ್ತಪಡಿಸಿದ್ದರಲ್ಲಿ ಆಶ್ಚರ್ಯವಿಲ್ಲ. ಈ ವ್ಯಾಖ್ಯಾನಕಾರನಾದರೋ ಇಂಥ ಕಾಲದಲ್ಲಿ ಇದ್ದವನಲ್ಲ. ಹಾಗಿದ್ದ ಪಕ್ಷದಲ್ಲಿ ಭಟ್ಟಾಕಲಂಕನಂತೆ ಇವನೂ ಅದೇ ಅಭಿಪ್ರಾಯಪಡಬಹುದಾಗಿದ್ದಿತು. ಕೇಶಿರಾಜನ ಕಾಲವಾದ ಮೇಲೆ ಸ್ವಲ್ಪ ವರ್ಷಗಳಲ್ಲಿ ವ್ಯಾಖ್ಯಾನಕಾರನು ಶಬ್ದಮಣಿದರ್ಪಣಕ್ಕೆ ವ್ಯಾಖ್ಯಾನವನ್ನು ಬರೆದಿರಬೇಕು. ಅಂತೂ ಭಟ್ಟಾಕಲಂಕನ ಕಾಲಕ್ಕೆ ಎಷ್ಟೋ ವರ್ಷ ಮೊದಲೇ ಈ ವ್ಯಾಖ್ಯಾನವು ಹುಟ್ಟಿದೆ ಎಂಬುದರಲ್ಲಿ ಸಂದೇಹವಿಲ್ಲ.

ಇನ್ನು ಪ್ರಸ್ತುತ ವಿಷಯಕ್ಕೆ ಬರೋಣ. ಹಿಂದೆ ವ್ಯಾಖ್ಯಾನಕಾರನು ಱಟ ಸಂದೇಹದೊಡನೆ ಱಟ ಸಂದೇಹವನ್ನೇ ಪ್ರಾಸವಾಗಿಡಬೇಕೆಂದು ಹೇಳಿದ್ದಾನಷ್ಟೆ. ಅದಕ್ಕೆ ಈ ಕೆಳಗಿನ ಕಂದ ಪದ್ಯವನ್ನು ಉದಾಹರಿಸಿದ್ದಾನೆ.

ಝುಳಪಿನೆ ಬಾಳಂ ನಿಂತಾಂ |
ಝುಳಪಿಸಿ ಬಾಳ್ವಿಡಿವ ರಾಯರಾಂ ಕಳದೊಳ್ಪು ||
ತ್ತಳಿಗಳೆನೆ ಮೆಯ್ಮಱೆವ ಜಂ |
ಗುಳಿ ಮನ್ನೆಯರಾಂಪರೆಂತೊ ಸಂಗರವಿಜಯಾ ||

ಇಲ್ಲಿ ಪ್ರಾಸಸ್ಥಾನದಲ್ಲಿ ಪ್ರಯೋಗವಾಗಿರುವ ಝುಳಪಿಸು, ಪುತ್ತಳಿ, ಜಂಗುಳಿ ಈ ಮೂರು ಶಬ್ದಗಳಲ್ಲಿಯ 'ಳ' ಕಾರವು ಱಟಸಂದೇಹವೆಂದು ಕೇಶಿರಾಜನು ಸೂತ್ರ ೬೫ರಲ್ಲಿ ಹೇಳಿದ್ದಾನೆ. ಕವಿಯೊಬ್ಬನು ಈ ಱಟ ಸಂದೇಹ ಶಬ್ದಗಳನ್ನೇ ಪ್ರಾಸಕ್ಕಾಗಿ

ಉಪಯೋಗಿಸಿಕೊಂಡು ತನ್ನ ಪ್ರಾಸಪ್ರಾವೀಣ್ಯವನ್ನು ವ್ಯಕ್ತಗೊಳಿಸಿದ್ದಾನೆ ! ವ್ಯಾಖ್ಯಾನಕಾರನು ಆ ಪದ್ಯವನ್ನು ಹುಡುಕಿ ತನ್ನ ವ್ಯಾಖ್ಯಾನವಾಕ್ಯವನ್ನು ಸಾರ್ಥಕ ಮಾಡಿಕೊಂಡಿದ್ದಾನೆ !

"ಱಲ, ಕುಳ, ಕ್ಷಳಂ ಬೆರಸಿ ತಪ್ಪಾದುದರ್ಕ್ಕೆ ಕಮಳಭವನ ಶಾಂತಿ ಪುರಾಣದ ಪ್ರಯೋಗಂ" ಎಂಬ ಶಿರೋಲೇಖನದೊಡನೆ ಈ ಕೆಳಗಣ ಪದ್ಯವನ್ನು ಉದಾಹರಿಸಿ ಅದಕ್ಕೆ ವ್ಯಾಖ್ಯಾನ ಬರೆದುದು ಸ್ವಾರಸ್ಯವಾಗಿದೆ

ಮಿಳಿರ್ದೆಸೆವಳ್ಳಿಗೊಂಬುಗಳ ಪರ್ಣದಿಱುಂಬಿನ ನೀಡ ನೀಡದೊಳ್ ।
ಘಳಿಲನೆ ಪಾಯ್ದು ಕೂಡುವ ವಿಹಂಗದ ಗಾವರಮುಪ್ಪ ಕೂಜಿತಾ ॥
ವಳಿಗೆ ನಗುತಮಿರ್ಪ್ಪ ವನಲಕ್ಷ್ಮಿಯ ಬಾಯ್ದೆಱೆಯಂತೆ ಬಿಡೆ ಕ ।
ಣ್ಗೊಳಿಸುವ ಪಣ್ಗಳಿಂ ತುಱುಗಿ ತಾನೊಱಗಿರ್ದ್ದುದು ದಾಡಿಮದ್ರುಮಂ ॥
(ಕಮಲಭವ, ಶಾಂತೀಶ್ವರ ಪುರಾಣ ಆ. ೧೦. ಪ. ೮೭)

ಇದು ವ್ಯಾಖ್ಯಾನ:—"ಮಿಳಿರ್ ಉರನೇ ಎಂಬ ಧಾತು ಕುಳಂ. ಮಿಳಿರ್ವೆಳವಳ್ಳಿ ವಾಲಪಲರ್ದೊಂಗಲೆಂಬಲ್ಲಿಯುಂ, ಕೆಳದ್ದ್ರ ಮಿಳಿದ್ದ್ರ ತಳದ್ರ್ತಾಗಳೆಂಬಲ್ಲಿಯುಂ ಕುಳ ಪ್ರಯೋಗಂ. ಘಱಲನೆ ನಡೆಯೆಂದು ಜಡಿದು ಸಾರಥಿಯನೆಂದು ಱಲಪ್ರಯೋಗಂ. ಕೂಜಿತಾವಳಿಯೆಂಬಲ್ಲಿ ಕ್ಷಳಂ. ಕಣ್ಗೊಳ್ ದರ್ಶನೀಯೇ ಎಂಬ ಧಾತು ಕುಳಮಿಂತು ಬೆರಸಿ ಪೇಳ್ವುದಬದ್ಧಂ"

ವ್ಯಾಖ್ಯಾನಕಾರನು ಪ್ರಾಸಸ್ಥಾನಗಳಲ್ಲಿ ಪ್ರಯೋಗವಾಗಿರುವ ಅಕ್ಷರಗಳು ಅಬದ್ಧವೆಂದು ನಿರಾಕರಿಸುವಾಗ ಪ್ರಾಚೀನ ಕವಿಗಳ ಸಾಧು ಪ್ರಯೋಗಗಳನ್ನೂ, ಅರ್ಥಸಹಿತವಾಗಿ ಧಾತು ಪಾಠಗಳನ್ನೂ ಎತ್ತಿಕೊಂಡು ಸಾಧಾರವಾಗಿ ಹೇಳಿದುದು ಸ್ತುತ್ಯವಾಗಿದೆ. ಇದರಿಂದ ವ್ಯಾಖ್ಯಾನಕಾರನ ಪಾಂಡಿತ್ಯದ ಆಳವನ್ನು ಕಂಡುಕೊಳ್ಳಬಹುದು.

ಇಲ್ಲಿಗೆ 'ಇದಱಿಂ ಇವು ವರ್ಣಾವೃತ್ತಿಗೆ ಸಲ್ವುವು. ಸಂದುಂ ಪ್ರಾಸದೆಡೆಗೆ ಸಲ್ಲವು ಎಂಬುದಾಯ್ತು' ಎಂದು ಈ ಪ್ರಸಂಗವನ್ನು ಸಮಾಪ್ತಗೊಳಿಸಿ ಮುಂದೆ ಇವು 'ಯಮಕ ವ್ಯವಹೃತಿಗಾಗವೆಂಬುದಕ್ಕೆ' ಎಂಬ ವಿಷಯವನ್ನು ಆರಂಭಿಸಿದ್ದಾನೆ.

ವ್ಯಾಖ್ಯಾನಕಾರನು ಆರಂಭದಲ್ಲಿ ಯಮಕ ಲಕ್ಷಣವನ್ನು ಯಮಕ ತಿಳಿಸುವುದಕ್ಕಾಗಿ ಕಾವ್ಯಾವಲೋಕನದ ಸೂತ್ರ ೧೨೮ನ್ನು ಕೊಟ್ಟಿದ್ದಾನೆ. ಅದಕ್ಕೆ ಈ ಕೆಳಗಣ ವೃತ್ತಿಯಿದೆ

ವೃತ್ತಿ:—ಪದಮುಂ ವರ್ಣಮುಮಾವೃತ್ತಿಯಾದೊಡದು ಯಮಕಂ.

ಇದಕ್ಕೆ ಅದೇ ಕಾವ್ಯಾವಲೋಕನದ ಉದಾಹರಣೆಯನ್ನಿತ್ತು (ಕಾವ್ಯಾವಲೋಕನ: ಪದ್ಯ ೫೨೬) ಯಮಕ ಲಕ್ಷಣವನ್ನು ವಿಶದಗೊಳಿಸಿದ್ದಾನೆ.

"ಮಾಣಿಕದಂತೊಪ್ಪಿದನೀ ।

ಮಾಣಿ ಕರಂ....ಎಂಬುದು ಆ ಪದ್ಯ. ಇಲ್ಲಿ ಯಮಕವಿದೆ. "ಮಾಣಿಕ ಶಬ್ದಂ ಮತ್ತೊಂದರ್ಥದಿಂದಾವೃತ್ತಿಯಾದುದ ಱಿಂ ಯಮಕಂ" ಎಂದು ವ್ಯಾಖ್ಯಾನದ ವಾಕ್ಯ. ಈ ಉಚ್ಚಾರಣೆಯ ಸಾಮ್ಯದಿಂದ "ರೇಫೆ, ಱಕಾರಂ, ಕುಳಲಕಾರಂ ಱಟಡಕಾರಂಗಳ್ ಯಮಕವಾಗದು." ಇದಕ್ಕಾಗಿ ಶಬ್ದಮಣಿದರ್ಪಣದ ಅಚ್ಚಿನ ಪ್ರತಿಗಳಲ್ಲಿ ಕೊಟ್ಟಿರುವ ಪಾಠಗಳೂ, ವಿವರಣೆಯೂ ಅಷ್ಟು ಸ್ಪಷ್ಟವಾಗಿಲ್ಲ. ಇಲ್ಲಿಯ ಪಾಠವೂ ಅದಕ್ಕೆ ವ್ಯಾಖ್ಯಾನಕಾರನ ವಿವರಣೆಯೂ ಅಲ್ಲಿಯ ಸಂದೇಹಗಳನ್ನು ನಿವಾರಿಸುವುವು.

ಕ[ರೆ]ಯುಂ ಕಱೆಯುಂ ಮಂಶಂ |<br>
ಧರಿಯಿಸುಗುಮೆ ಮತ್ತೆ ನೆರವನೆಂದುಂ ಕಲಿ ಸಂ ||<br>
ಗರದೊಳ್ ತಲೆಯುಂ ಬಳೆಯುಂ |<br>
ತಿರೆ ಬಗೆದಂ ತುಱಿದು ಬಡಿದು ಪೂಣ್ದಿಱಿವಾಗಳ್ |

"ಕರೆಯುಂ, ಕಱೆಯುಮೆಂದೊಡೆ 'ಱೆಯ' ಎಂಬ ಶಬ್ದಾವೃತ್ತಿ ಕೆಟ್ಟಪ್ಪುರ್ದಾಗಿ ಯಮಕವಾಗದು. ಕಱೆಯುಮೆಂಬುದಂ ಕರೆಯಮೆಂದೊಡರ್ಥಘಟನೆಯಿಲ್ಲ. ತಲೆಯುಂ ಬಳೆಯುಂ ಎಂಬಲ್ಲಿಯುಂ ತುಱಿದು ಬಡಿದುಮೆಂಬುದುಮಾರೀತಿಯೆ."

ಯಮಕದಲ್ಲಿ ಶಬ್ದಸಾರೂಪ್ಯವು ಪ್ರಧಾನ. ಈ ಶಬ್ದಗಳಲ್ಲಿ ಭಿನ್ನಾರ್ಥವಿರಬೇಕು. ಇದು ಪರಮಾತ್ಮನ ಸಾರೂಪ್ಯವನ್ನು ಪಡೆದ ಭಿನ್ನ ಭಿನ್ನ ಜೀವಿಗಳಂತೆ. ಪರಮಾತ್ಮನ ಸೃಷ್ಟಿಸ್ಥಿತಿಲಯಾದಿ ಗುಣಗಳು ಸಾರೂಪ್ಯ ಜೀವಿಗಳಲ್ಲಿರವಷ್ಟೆ. ಅಥವಾ ದಮಯಂತಿಯನ್ನು ವರಿಸಲು ದೇವತೆಗಳು ನಳನ ವೇಷವನ್ನು ಧರಿಸಿದಂತೆ. ನಳನ ಗುಣಗಳು ದೇವತೆಗಳಲ್ಲಾಗಲೀ, ದೇವತೆಗಳ ಗುಣಗಳು ನಳನಲ್ಲಾಗಲೀ ಇರುವುದು ಅಸಾಧ್ಯ ಈ ಗುಣವಿಭಿನ್ನತೆಯೇ ಸಾರೂಪ್ಯತೆಯ ತೊಡಕನ್ನು ಸಡಿಲಿಸಲು ಸಾಧನವಾಗುವುದು. ಮೇಲೆ, 'ಮಾಣಿಕದಂತೊಪ್ಪಿದನೀ| ಮಾಣಿಕರಂ' ಎಂಬಲ್ಲಿ ಮಾಣಿಕ, ಮಾಣಿಕ(ರಂ) ಇವೆರಡರಲ್ಲಿ ರೂಪಸಾದೃಶ್ಯವಿರುವುದರಿಂದ ಯಮಕವಾಯಿತು. ಅರ್ಥದಲ್ಲಿ ಮಾಣಿಕವೇ ಬೇರೆ, ಮಾಣಿಕರಂ ಎಂಬುದೂ ಬೇರೆ. ಹೀಗೆ ರೂಪಸಾದೃಶ್ಯದಿಂದ ಉಚ್ಚಾರವೈಗುಣ್ಯವೂ ಘಟಿಸುವುದಿಲ್ಲವಾದುದರಿಂದ ಯಮಕದಲ್ಲಿ ಉಚ್ಚಾರಸಾಮ್ಯವೂ ಪ್ರಧಾನವಾದುದಾಗುವುದು. ಕನ್ನಡ ಶಬ್ದಗಳಲ್ಲಿ ರೇಫ, ಶಕಟರೇಫಗಳಲ್ಲಿ ಉಚ್ಚಾರವೈಗುಣ್ಯವಿಲ್ಲದಿದ್ದರೂ ಯಮಕದಲ್ಲಿ ಇವುಗಳನ್ನು ಅಂಗೀಕರಿಸಕೂಡದೆಂಬುದು ವೈಯಾಕರಣರ ಅಭಿಪ್ರಾಯವಾಗಿದೆ. ರೂಪಸಾಮ್ಯತೆ ಇವುಗಳಲ್ಲಿ ಘಟಿಸುವುದಿಲ್ಲವಾದ್ದರಿಂದ ಯಮಕದ ಪ್ರಧಾನ ಲಕ್ಷಣಕ್ಕೆ ಭಂಗವುಂಟಾಗುವುದು. ಭಟ್ಟಾಕಳಂಕನ ಮತದಂತೆ ಅರ್ಥವೈವಿಧ್ಯವೊಂದನ್ನೇ ಅಂಗೀಕರಿಸಿ ನಾನಾರ್ಥಗಳಿರುವ ಶಬ್ದಗಳಂತೆ ಇವುಗಳನ್ನು ಉಪಯೋಗಿಸಬಹುದೆಂದು ಅನೇಕಾರ್ಥಗಳನ್ನುಳ್ಳ ಶಬ್ದಗಳನ್ನಾವೃತ್ತಿ ಮಾಡಿದರೆ ಅದು ಶ್ಲೇಷೆಯಾಗುವುದಾಗಲಿ

ಯಮಕವಾಗಲಾರದು. ಅರ್ಥವೂ ಬೇರೆಯಾಗಿರಬೇಕು, ಯಮಕವೂ ಸಿದ್ಧಿಸಬೇಕು ಇಲ್ಲಿ ಭಟ್ಟಾಕಳಂಕನ ಮತವನ್ನು ಒಪ್ಪಲಾಗುವುದಿಲ್ಲ ಆದ್ದರಿಂದ ಪೂರ್ವಿಕರು ರೇಫೆ, ಶಕಟರೇಫೆ, ಱ, ಕುಳ, ಕ್ಷಳ, ಡಕಾರ, ಲಕಾರಗಳನ್ನು ಪ್ರತ್ಯೇಕಿಸಿದರು ಮೇಲೆ ಉದಾಹರಿಸಿದ ಕಂದ ಪದ್ಯದಲ್ಲಿ ಕರೆಯಂ ಎಂಬಲ್ಲಿ ಸಾಧಾರಣ ರೇಫ ಇದೆ. ಕಱೆಯಂ ಎಂಬಲ್ಲಿ ಶಕಟ ರೇಫ ಇದೆ, ಇಲ್ಲಿ ಶಬ್ದ ಸಾರೂಪ್ಯಕ್ಕೆ ಭಂಗವಾಗಿದೆ; ಅರ್ಥ ಘಟನೆಯೂ ಇಲ್ಲ. ಹಾಗೆಯೇ ತಲೆಯಂ ಬಳೆಯಂ, ತುೞಿದು ಬಡಿದು, ಎಂಬುವುಗಳಲ್ಲಿ ಅಕ್ಷರ ಸಾದೃಶ್ಯ ಕೆಟ್ಟಿದೆ. ಇವು ಯಮಕಗಳಾಗವು. ಇದರಿಂದ ಕನ್ನಡದಲ್ಲಿ ಈ ಅಕ್ಷರಗಳೆಲ್ಲವನ್ನೂ ಪ್ರತ್ಯೇಕವಾಗಿ ಅಂಗೀಕರಿಸಬೇಕೆಂದು ದೃಢಪಡುವುದು ಈಗಿನ ಕಾಲದಲ್ಲಿಯಾದರೋ, ಶಕಟರೇಫೆಯೂ, ರೇಫೆಯೂ ಒಂದಾಗಿ ಹೋಗಿವೆ. ಹಾಗೆಯೇ ಮೂರು ಳಕಾರಗಳು ಹೋಗಿ ಒಂದೇ ಳಕಾರ ವುಳಿದಿದೆ. ಈಗ ಇಂಥ ಅಕ್ಷರವೈವಿಧ್ಯಕ್ಕೆ ಆಸ್ಪದವಿಲ್ಲದಿರುವುದರಿಂದ, ಈ ಅಕ್ಷರ ಯುಕ್ತ ಶಬ್ದಗಳು ಅನೇಕಾರ್ಥ ಶಬ್ದಗಳಂತಾಗಿ ಬಿಟ್ಟಿವೆ. ಈ ಕಾರಣದಿಂದ ಇವುಗಳನ್ನು ಬೇರೆ ಭಾಷೆಯಲ್ಲಿಯ ಶಬ್ದಗಳಂತೆ ಶ್ಲೇಷೆಗಾಗಿ ಉಪಯೋಗಿಸಬಹುದಾಗಲಿ ಯಮಕಕ್ಕಾಗಿ ಪುನರಾವೃತ್ತಿ ಮಾಡಕೂಡದು

ಇನ್ನು ಈ ಪದ್ಯದ ಪಾಠಾಂತರವನ್ನು ವಿಚಾರಿಸೋಣ ಕಿಟೆಲ್ ಅವರ ಪ್ರತಿ, ಶ್ರೀಮಾನ್ ಪಂಜೆ ಮಂಗೇಶರಾಯರ ಪ್ರತಿ, ಭಾಷಾ ಭೂಷಣದ "ಲರಡಾ ಏವ ಳೞಱಾಃಪ್ರಯತ್ನಾಶ್ರಯಾತ್" ಎಂಬ ಹತ್ತನೆಯ ಸೂತ್ರದ ಕೆಳಗೆ ಉದಾಹೃತವಾದ ಕಂದ ಭಾಗ–ಇವೆಲ್ಲವುಗಳಲ್ಲಿ ಈ ಪದ್ಯ ಏಕಪಾಠವುಳ್ಳುದಾಗಿದೆ.

ಕರೆಯಂ ನೆರವಂ ವಂಶಂ

ಕಱೆಯಂ ಪೊತ್ತಪ್ಪುದೆಂದು ಸಂಗರ ಮುಖದೊಳ್ - ಇದಕ್ಕೆ

ವಿವರಣೆಯೂ ಎಲ್ಲಾ ಪ್ರತಿಗಳಲ್ಲಿ ಈ ರೀತಿಯಾಗಿದೆ.

''ಇಲ್ಲಿ ಶಬ್ದಾವೃತ್ತಿ ಕೆಟ್ಟಿರ್ಪುದಾಗಿಯುಂ, ಕಱೆಯಂ ಪೊತ್ತಪ್ಪುದೆಂಬುದಂ ಕರೆಯಂ ಪೊತ್ತಪ್ಪುದೆಂದೊಡೆ ಅರ್ಥ ಘಟನೆಯಿಲ್ಲಾಗಿಯುಂ ಯಮಕ ಲಕ್ಷಣಮಿಲ್ಲ."

ಲಿಂಗಣಾರಾಧ್ಯನ ಪ್ರತಿಯಲ್ಲಿ 'ಯಮಕಲಕ್ಷಣಮಾಗದುದರ್ಕೆ' ಉದಾಹರಣೆ ಮೇಲಿನಂತೆಯೇ ಕೊಟ್ಟಿದೆ. ಹೊಸ ಪ್ರತಿಯಲ್ಲಿಯಾದರೋ ಕರೆಯಂ, ಕಱೆಯಂ ಎಂಬುವುಗಳು ಒಟ್ಟಿಗೆ ಬಂದಿವೆ ಈ ರೀತಿಯ ಪಾಠವೇ ಸರಿಯೆಂದು ಕಾಣುತ್ತದೆ. ಈ ಪದ್ಯದಲ್ಲಿ ಎರಡೆರಡು ಪದಗಳು ಒಟ್ಟಿಗೆ ಅಶುದ್ಧ ಯಮಕಕ್ಕಾಗಿ ಉಪಯೋಗವಾಗಿವೆ. ತಲೆಯಂ ಬಳೆಯಂ; ತುೞಿದು ಬಡಿದು, ಈ ಪದಗಳು ಒಟ್ಟಿಗೆ ಬಂದಿವೆ. ಹಾಗೆಯೇ ಕರೆಯಂ ಕಱೆಯಂ ಎಂಬಿವುಗಳೂ ಒಟ್ಟಿಗೆ ಪ್ರಯೋಗವಾಗಿರಬೇಕು. ಲಿಂಗಣಾರಾಧ್ಯನ ಪ್ರತಿಯ 'ಯಮಕ ಲಕ್ಷಣಂ' ಎಂಬುದರ ಕೆಳಗೆ ಕೊಟ್ಟಿರುವ ಪಾಠವೂ ಇದನ್ನು ದೃಢಪಡಿಸುವುದು. ಆಲ್ಲಿ ದ್ವಿತೀಯ ಚರಣವು ಅಪೂರ್ಣವಾಗಿದೆ.

ಕರೆಯಂ ನೆರವಂ ಕಱಿಯಂ|
ಧರಿಯಿಸುಗುಂ ಸಂಶಯಮೆಸುತೆ ......ಲಿ ಸಂ ||
ಗರವೊಳ ತಲೆಯಂ ಬೞಯಂ
ತಿರೆ ಬಗೆದಂ ತುಱುದು ಬಡಿದು ಪೂಣ್ದಿಱುವಾಗಳ್| (ಲಿಂಗಣಾರಾಧ್ಯನ ಪ್ರತಿ ಪುಟ ೧೫). ಇಲ್ಲಿ ತಲೆಯಂ ಬೞಯಂ ಎಂದಿದೆ. ಬೞಯಂ ಎಂಬಲ್ಲಿ ಹೊಸಪ್ರತಿಯ ಪಾಠ ಬಳಿಯಂ ಎಂಬುದನ್ನು ಗ್ರಹಿಸುವುದು ಶುದ್ಧ. ಬೇರೆ ಪ್ರತಿಗಳ ಅಚ್ಚಿನಪಾಠಗಳಿಂದ ಈ ಪದ್ಯದಲ್ಲಿ ರೇಫೆ ಶಕಟರೇಫೆಗಳ ಪ್ರಾಸದೋಷವೂ ಬಂದಂತಾಗುವುದು. ಹೊಸಪ್ರತಿಯ ಪಾಠದಲ್ಲಿ ಪ್ರಾಸದೋಷಕ್ಕೆಡೆಯಿಲ್ಲ ಇಲ್ಲಿ ನಾಲ್ಕು ಚರಣಗಳಲ್ಲಿಯೂ ರೇಫೆ ಪ್ರಾಸಸ್ಥಾನದಲ್ಲಿದೆ. ಲಿಂಗಣಾರಾಧ್ಯನ ಪ್ರತಿಯ ಎರಡನೆಯ ಪದ್ಯದಲ್ಲಿಯೂ ಪ್ರಾಸಸ್ಥಾನಗಳಲ್ಲ ರೇಫೆಯೇ ಇದೆ.

ವ್ಯಾಖ್ಯಾನಕಾರನು ಇಲ್ಲಿಗೆ 'ಇವುವರ್ಣಾವೃತ್ತಿಗೆ ಸಲ್ಲುವು ಎಂಬ ಸೂತ್ರ ವ್ಯಾಖ್ಯಾನಂ ಸಂಪೂರ್ಣಂ' ಎಂದು ಈ ಎರಡು ಸೂತ್ರಗಳ ವ್ಯಾಖ್ಯಾನವನ್ನು ಸಮಾಪ್ತ ಮಾಡಿದ್ದಾನೆ ಮುಂದೆ 'ಕುಳ ಱಶಬ್ದಂಗಳಂ ವಿವರಿಪೆಂ' ಎಂದು ಹೇಳಿ ಶಬ್ದಮಣಿದರ್ಪಣದ ೨೬, ೨೭, ೨೮, ೨೨ ಸೂತ್ರಗಳನು ವಿವರಿಸಿದ್ದಾನೆ. ಸೂತ್ರ ೨೮ರ ಕೆಳಗೆ 'ಱಕುಳಮಿಶ್ರಮುಂ ಪೇೞ್ವೆಂ' ಎಂದು ಒಂದು ಕಂದಪದ್ಯ ದಲ್ಲಿ ಕೆಲವು ಶಬ್ದಗಳನ್ನು ಹೊಸದಾಗಿ ಹೇಳಿದ್ದಾನೆ. ಸೂತ್ರ ೨೫ರಲ್ಲಿ ಅಚ್ಚಿನ ಪ್ರತಿಗಳಲ್ಲಿರುವಂತೆ ಮುಂದೆ ತಾನು ಹೇಳಿರುವ ನಾನಾರ್ಥಗಳುಳ್ಳ ಱಯುಕ್ತ ಶಬ್ದಗಳ ಪೂರ್ವಸೂಚಿಯನ್ನು ಕೊಟ್ಟಿದ್ದಾನೆ. ಇಲ್ಲಿಯ ಹೊಸ ಅಂಶವೆಂದರೆ ವ್ಯಾಖ್ಯಾನಕಾರನು ಈ ಶಬ್ದಗಳನ್ನೆಲ್ಲ ಅಚ್ಚಿನ ಪ್ರತಿಗಳಲ್ಲಿರುವಂತೆ ಬಿಡಿಬಿಡಿಯಾಗಿ ಹೇಳದೆ ಇರುವುದು. ಮೊದಲು ಆ ಶಬ್ದಗಳನ್ನು ಕಂದ ಪದ್ಯದಲ್ಲಿ ಹೇಳಿ ಅವುಗಳಿಗೆ ವೃತ್ತಿ ಬರೆದಿದ್ದಾನೆ. ಆ ವೃತ್ತಿಯಲ್ಲಿ ಶಬ್ದಗಳಿಗೆ ಅರ್ಥಗಳನ್ನು ಕೊಟ್ಟಿದ್ದಾನೆ. ಒಟ್ಟು ೧೦ ಕಂದಗಳಲ್ಲಿ ಈ ಶಬ್ದಗಳೆಲ್ಲಾ ಬಂದಿವೆ. ಈ ಕಂದಗಳಲ್ಲಿ ಆ ಶಬ್ದಗಳನ್ನು ಛಂದೋಬದ್ಧವಾಗಿ ಪೋಣಿಸಿದ್ದು ಇವನ ಕೆಲಸವಾಗಿರಬೇಕು. ಶಬ್ದಗಳನ್ನು ಕಂಠ ಪಾಠಮಾಡುವವರಿಗೆ ಇದು ಬಹಳ ಅನುಕೂಲವಾಗಿದೆ. ಕನ್ನಡದಲ್ಲಿ ಪದ್ಯರೂಪ ವಾಗಿ ರಚಿತವಾಗಿರುವ ಕೆಲವು ನಿಘಂಟುಗಳಿವೆ. ಕಂದದಲ್ಲಿ ಬರೆದುವು ಕೆಲವು, ಕೆಲವು ವೃತ್ತಗಳಲ್ಲಿವೆ. ವಿರಕ್ತತೋಂಟದಾರ್ಯನು ಶಬ್ದಮಂಜರಿಯನ್ನು ಷಟ್ಪದಿ ಯಲ್ಲಿ ಬರೆದಿದ್ದಾನೆ. ಇಲ್ಲಿ ಒಂದು ಕಂದ ಪದ್ಯವನ್ನು ಹೊಸಪ್ರತಿಯಿಂದ ಉದಾಹರಿಸಿದೆ.

ಕಱ ಕುಱ ತಲ್ಲಱಸುಱುವೊಂ |
ಪುಱ ಪುಚ್ಚಱಪಾಱ ದೞವುೞಂ ದಟ್ಟೞುಮ ||
ಣ್ಮಱ ಪಱುಯಿಂಗೆ ತೊೞಿ್ತಱಚ |
ಕ್ಕಱ ಪಱ ಪುೞು ಗಾೞು ಪೇೞು ಕುೞಱನಕ್ಕುಂ ||

ಇದರ ವೃತ್ತಿಯಲ್ಲಿ ಈ ಶಬ್ದಗಳಿಗೆ ಅರ್ಥವನ್ನು ಕೊಟ್ಟಿದೆ.

ಈ ಶಬ್ದಗಳೆಲ್ಲವೂ ಸಹಜ ಱಟಗಳನ್ನುಳ್ಳುವು. ಆದೇಶ ಱಟವು ಸಮಾಸದಲ್ಲಿಯೂ, ಸಂಸ್ಕೃತದಿಂದ ಕನ್ನಡಕ್ಕೆ ಬಂದ ತದ್ಭವಗಳಲ್ಲಿಯೂ ಕಂಡುಬರುವುದು. ಇದನ್ನು ವ್ಯಾಖ್ಯಾನಕಾರನು 'ಕಾಱ್ಕಿಚ್ಚು, ಕಾಱ್ಪುರ' ಮೊದಲಾದ ಅನೇಕ ಸಮಸ್ತಪದಗಳಿಂದ ಉದಾಹರಿಸಿದ್ದಾನೆ. ಕಾವ್ಯಾವಲೋಕನದ ಶಬ್ದಸ್ಮೃತಿ ಭಾಗದಿಂದ ಸಮಾಸ ಪ್ರಕರಣದಲ್ಲಿ ಉದಾಹೃತವಾದ ೨೫೮, ೨೫೯ ಈ ಎರಡು ಪದ್ಯಗಳನ್ನೆತ್ತಿಕೊಂಡು "ಇಂತು ಱಟಾದೇಶಂಗೆಯ್ದೊಡೆ ದಕ್ಷಿಣಮಾರ್ಗ್ಗಮೆಂಬಗುಣಂ" ಎಂದು ಹೇಳಿ, "ದಕ್ಷಿಣೋತ್ತರ ಮಾರ್ಗ್ಗಂಗಳೆಂತೆಂದೊಡೆ ನೃಪತುಂಗನ ಪ್ರಯೋಗಂ'' ಎಂದು ಕವಿರಾಜಮಾರ್ಗದ ದ್ವಿತೀಯ ಪರಿಚ್ಛೇದದಿಂದ ೧೦೦, ೧೦೭, ೧೦೧ ಪದ್ಯಗಳನ್ನು ಕ್ರಮವಾಗಿ ಉದ್ಧರಿಸಿದ್ದಾನೆ ಇದನ್ನು ಹೇಳಿದ ರೀತಿಯನ್ನು ಗಮನಿಸಿದರೆ ವ್ಯಾಖ್ಯಾನಕಾರನು ದಕ್ಷಿಣೋತ್ತರ ಮಾರ್ಗಗಳನ್ನು ಪ್ರಾಂತಿಕ ಭಾಷಾನುಗುಣವಾಗಿ ವಿಂಗಡಿಸಿಲ್ಲವೆಂಬುದು ಗೊತ್ತಾಗುವುದು. ಕಾವ್ಯಾವಲೋಕನದಲ್ಲಿಯೂ, ಕವಿರಾಜಮಾರ್ಗದಲ್ಲಿಯೂ ಕಾವ್ಯಗುಣಗಳನ್ನು ಪ್ರಸ್ತಾಪಿಸುವ ಸಂದರ್ಭದಲ್ಲಿ ಈ ದಕ್ಷಿಣೋತ್ತರ ಮಾರ್ಗಗಳನ್ನು ಹೇಳಿದೆ. ಶಬ್ದಮಾಧುರ್ಯ, ಸಮಾಸಬಂಧ ಮೊದಲಾದ ದೃಷ್ಟಿಯಿಂದ ಅಲ್ಲಿ ಈ ಮಾರ್ಗಗಳನ್ನು ವಿಚಾರಿಸಿದೆ. ಆದ್ದರಿಂದ ಇವು ಕಾವ್ಯಗುಣಗಳು. ಅದನ್ನೇ ಈ ವ್ಯಾಖ್ಯಾನಕಾರನು "ಇಂತು ಱಟಾದೇಶಂಗೆಯ್ದೊಡೆ ದಕ್ಷಿಣ ಮಾರ್ಗ್ಗಮೆಂಬಗುಣಂ'' ಎಂದು ಸ್ಪಷ್ಟವಾಗಿ ಕರೆದಿದ್ದಾನೆ. ದಕ್ಷಿಣೋತ್ತರ ಮಾರ್ಗಗಳು ಕಾವ್ಯ ಗುಣಗಳೇ ಆಗಲಿ ದೇಶಭೇದ ಭಾಷಾವೈಗುಣ್ಯಗಳಲ್ಲವೆಂಬುದು ಇದರಿಂದ ನಿರ್ಣಯವಾಗುತ್ತದೆ

ವ್ಯಾಖ್ಯಾನಕಾರನು ಇಲ್ಲಿಯೂ ನೃಪತುಂಗನ ಪ್ರಯೋಗವೆಂದು ಹೇಳಿ ಕವಿರಾಜಮಾರ್ಗದಿಂದ ಪದ್ಯಗಳನ್ನು ಉದ್ಧರಿಸಿರುವುದರಿಂದ ಕವಿರಾಜಮಾರ್ಗದ ಕರ್ತೃ ನೃಪತುಂಗನೆಂಬಂಶವು ಮತ್ತಷ್ಟು ಪುಷ್ಟಿಗೊಳ್ಳುತ್ತದೆ.

## ದಡ್ಡಕ್ಕರ ಱಟಪ್ರಾಸ

ಇದೇ ಸಂದರ್ಭದಲ್ಲಿ ಚರ್ಚಾಸ್ಪದವಾದ ೨೪ನೆಯ ಸೂತ್ರವು ಹೊಸಪ್ರತಿಯಲ್ಲಿ ಬಂದಿದೆ. ಇದನ್ನು ಹೊಸ ಪ್ರತಿಯು ಆರಂಭ ಸೂತ್ರದಿಂದ ಸಂಖ್ಯೆಯನ್ನಿಡುವುದರಿಂದ ೪೭ನೆಯ ಸೂತ್ರವೆಂದಿಟ್ಟುಕೊಳ್ಳಬಹುದು ಮುದ್ರಿತವಾದ ಎಲ್ಲಾ ಪ್ರತಿಗಳಲ್ಲಿ ಸೂತ್ರಪಾಠ ಈ ಕೆಳಗಿನಂತಿದೆ.

> ಪಿರಿಯರ್ ನಲಿಪರ್ ದಡ್ಡ |
> ಕ್ಕರದ ಱಟಕ್ಕೆಯ್ದೆ ರೇಫ ವೆರಸಿದ ದಡ್ಡ ||
> ಕ್ಕರಮುಂ ಱಟನಾಗದನು |
> ಚ್ಚರಿಸಲ್ಕಾಗಿರ್ದತೆಱದಿನಂತದು ಶುದ್ಧಂ || (ಸಾ. ಪ. ಪ. ಸೂ. ೨೪)

ಲಿಂಗಣಾರಾಧ್ಯನ ಪ್ರತಿಯಲ್ಲಿ ಕೊನೆಯ ಚರಣ—ಉಚ್ಚರಿಸಲ್ತಾನಿರ್ದ—ಎಂದು ಸ್ವಲ್ಪ ವ್ಯತಾಸದಿಂವ ಅಚ್ಚಾಗಿದೆ. ಇದರಿಂದ ಅರ್ಥ ವ್ಯತ್ಯಾಸವಿಲ್ಲ. ಸಾ. ಪ. ಪ್ರಕಟನೆಯಲ್ಲಿ ಇದರ ವೃತ್ತಿಯನ್ನು ಮುಂದಿನಂತೆ ಕೊಟ್ಟಿದೆ.

“ದಡ್ಡಕ್ಕರದ ಅಟಕ್ಕೆ ಪ್ರತಿಯಾಗಿ ರೇಫವೆರಸಿದ ದಡ್ಡಕ್ಕರಮುಂ ಪ್ರಾಸಕ್ಕೆ ಪಿರಿಯರ್ ಪೇಟ್ದ ಪ್ರಯೋಗವೊಳವು. ಆ ದಡ್ಡಕ್ಕರದ ರೇಫಮುಂ ಅಟನಾಗುಚ್ಚರಿಸಲ್ಕಾಗಿರ್ದ ತೆಱದಿನದು ಶುದ್ಧಂ”

ಇಲ್ಲಿ ಸೂತ್ರಪಾಠಕ್ಕೂ ವೃತ್ತಿಯ ಪಾಠಕ್ಕೂ ವಿರೋಧವಿಲ್ಲ. ಸೂತ್ರದಿಂದ ಈ ರೇಫವೆರಸಿದ ಒತ್ತಕ್ಕರವನ್ನು ಅಟನಾಗಿ ಉಚ್ಚರಿಸಲಾಗುವುದರಿಂದ ಇಂತಹ ಪ್ರಾಸವು ಶುದ್ಧವೆಂದು ಅರ್ಥವಾಗುವಹಾಗಿದೆ. ವೃತ್ತಿಯೂ ‘ಆ ದಡ್ಡಕ್ಕರದ ರೇಫಮುಂ ಅಟನಾಗುಚ್ಚರಿಸಲ್ಕಾಗಿರ್ದತೆಱದಿನದು ಶುದ್ಧಂ’ ಎಂದು ಅದನ್ನೇ ಸರಿಯೆಂದು ಸಾರುತ್ತದೆ. ಉದಾಹರಣ ಪದ್ಯಗಳನ್ನು ನೋಡಿದರೆ ರೇಫವೆರಸಿದ ದಡ್ಡಕ್ಕರವನ್ನು ಅಟನಾಗಿ ಉಚ್ಚರಿಸಲಾಗುತ್ತದೆಯೆ ಎಂಬ ಸಂದೇಹ ತಲೆದೋರುತ್ತದೆ ‘ಬಟ್ಟಿದು ಬಳ್ಳವಾಡಿ’ ಎಂಬ ಪ್ರಯೋಗವನ್ನು ಆಮೇಲೆ ವಿಚಾರಿಸೋಣ. ಮೊದಲು ಕೊನೆಯ ಎರಡು ಪ್ರಯೋಗಗಳನ್ನು ತೆಗೆದುಕೊಳ್ಳೋಣ. ‘ಚುರ್ಚಿದವೊಲ್’ ಎಂಬುದಕ್ಕೆ ‘ಕಿ|ಮುಟ್ಟಿದ’ ಎಂಬುದು ದ್ವಿತೀಯ ಚರಣದ ಪ್ರಾಸವಾಗಿದೆ ಒರ್ಕುಡಿತೆ, ಎರ್ಕೆ, ದೇವರ್ಕಳ್, ನೀರ್ಕಿರಿಸು ಇವು ಮುಂದಿನ ಪದ್ಯದ ರೇಫ ಅಟಯುಕ್ತವಾದ ಕಕಾರಪ್ರಾಸದ ಪದಗಳು. ಇವುಗಳಲ್ಲಿ ರೇಫೆವೆರಸಿದ ಚುರ್ಚು, ಒರ್ಕುಡಿತೆ, ಎರ್ಕೆ, ದೇವರ್ಕಳ್ ಎಂಬುವುಗಳನ್ನು ‘ಅಟನಾಗುಚ್ಚಾರ’ ಮಾಡಿದರೆ ಚುಟ್ಚು ಒಟ್ಕುಡಿತೆ, ಎಟ್ಕದೇವಟ್ಕಳ್ ಎಂಬ ಆಭಾಸದ ಪ್ರಯೋಗಗಳು ಸಿದ್ಧಿಸುತ್ತವೆ. ಆದ್ದರಿಂದ ಇದು ಹಾಗಿರಲಾರದು ಎಂಬ ಸಂದೇಹವು ಉಂಟಾಗುವುದು ಸಹಜವಾಗಿದೆ. ಶ್ರೀಮಾನ್ ಪಂಜೆ ಮಂಗೇಶರಾಯರ ಪ್ರತಿಯ ವೃತ್ತಿಯಲ್ಲಿ ಪಾಠಾಂತರ ಇದೆ. ಕೊನೆಯಲ್ಲಿ ‘ಆ ದಡ್ಡಕ್ಕರದ ರೇಫಮುಂ ಅಟನಾಗುಚ್ಚರಿಸಲಾಗದು, ನಿಸರ್ಗದಿನದ್ದುಶುದ್ಧಂ’ ಎಂದಿದೆ. ಇದು ಸೂತ್ರಾರ್ಥಕ್ಕೂ, ವೃತ್ತಿಯ ಅರ್ಥಕ್ಕೂ ಮಧ್ಯೆ ಗೋಡೆಯನ್ನು ಕಟ್ಟುತ್ತದೆ ಇದರಿಂದ ಸೂತ್ರಗಳನ್ನು ಬರೆದಾತನೊಬ್ಬ ವೃತ್ತಿಯನ್ನು ಬರೆದಾತನೊಬ್ಬ ಎಂಬ ಸಂದೇಹಕ್ಕೆಡೆಯಾಗುವುದು. ಲಿಂಗಣಾರಾಧ್ಯನ ಪ್ರತಿಯ ಪಾಠವು ಶ್ರೀ. ಪಂಜೆ ಅವರ ಪ್ರತಿಯ ಪಾಠವನ್ನೇ ಹೋಲುತ್ತದೆ. ಇಲ್ಲಿ ಸೂತ್ರವೃತ್ತಿಗಳಿಗೆ ತಾಳಮೇಳವಾಗುವುದಿಲ್ಲ. ಇವುಗಳಲ್ಲೊಂದು ತಪ್ಪು ಎಂದು ಯಾರಾದರೂ ಹೇಳಬಹುದು ( ಶ್ರೀಮಾನ್ ಮುಗುಳಿಯವರು ತಮ್ಮ ಸಂದೇಹಗಳಿಗಾಗಿ ಈ ಸೂತ್ರವನ್ನು ತೆಗೆದುಕೊಂಡಿದ್ದಾರೆ.)

ಹೊಸಪ್ರತಿಯ ಸೂತ್ರವು ಈ ಸಂದೇಹಗಳನ್ನೆಲ್ಲ ನಿವಾರಿಸುತ್ತದೆ.

ಪಿರಿಯರ್ ಸಲಿಪರ್ ದಡ್ಡ |
ಕ್ಕರದ ಱಟಕ್ಕೆಯ್ದೆ ರೇಫವೆರಿಸಿದ ದಡ್ಡ ||
ಕ್ಕರಮುಂ, ಱಟನಲ್ತುದನು |
ಚ್ಚರಿಸಲ್ಕಾಗಿರ್ದತೆಱದಿನಂತದು ಶುದ್ಧಂ ||

ವೃತ್ತಿ: — ದಡ್ಡಕ್ಕರದ ಱಟಕ್ಕೆ ಪ್ರತಿಯಾಗಿ ರೇಫವೆರಸಿದ ದಡ್ಡಕರಮುಂ ಪಿರಿಯರ್ ಪೇಳ್ದ(ಳ್ದ)ಪ್ರಯೋಗವೊಳವು. ಆ ದಡ್ಡಕ್ಕರದ ರೇಫೆಯುಂ ಱಟನಾಗಿ ಉಚ್ಚರಿಸಲಾಗದು. ನಿಸರ್ಗದಿನದು ಶುದ್ಧಂ.

ಸೂತ್ರದಲ್ಲಿರುವ 'ಱಟನಲ್ತು' ಎಂಬ ಮಾತಿಗೂ, ವೃತ್ತಿಯ 'ಱಟನಾಗಿ ಉಚ್ಚರಿಸಲಾಗದು' ಎಂಬ ಮಾತಿಗೂ ಅರ್ಥವ್ಯತ್ಯಾಸವಿಲ್ಲ. ಆ ರೇಫವೆರಸಿದ ದಡ್ಡಕ್ಕರವನ್ನು ಱಟನಾಗಿ ಉಚ್ಚರಿಸಕೂಡದು, ಅದು ನಿಸರ್ಗಶುದ್ಧವಾದುದು ಎಂಬ ಅಭಿಪ್ರಾಯದಿಂದ ಯಾವ ವಿಧವಾದ ಸಂದೇಹವೂ ಉಂಟಾಗುವುದಿಲ್ಲ. ಪ್ರಾಸಸ್ಥಾನದಲ್ಲಿ ಱಟದಡ್ಡಕ್ಕರಕ್ಕೆ ಬಂದ ರೇಫೆಯ ದಡ್ಡಕ್ಕರವನ್ನು ಇದ್ದುದನ್ನು ಇದ್ದಂತೆ ಪಠಿಸುವುದೇ ಶುದ್ಧ. ಅದನ್ನು ಱಟವಾಗಿ ಪಠಿಸುವುದು ಅಬದ್ಧವೆಂಬುದನ್ನು ಈ ಸೂತ್ರವು ನಿರ್ಣಯಿಸುತ್ತದೆ.

ಹೊಸ ಪ್ರತಿಯಲ್ಲಿ 'ಬಟ್ಟುದಱ ಬಳ್ಳವಾಡಿ' ಎಂಬ ಪದ್ಯವು ಪೂರ್ತಿಯಾಗಿ ಉದಾಹೃತವಾಗಿದೆ. ಈ ಪದ್ಯ ಸಂಪೂರ್ಣವಾಗಿ ದೊರೆಯದುದರಿಂದ ಸಾಹಿತ್ಯ ಪರಿಷತ್ತಿನವರು ಅದನ್ನು ಕಂದಕ್ಕೆ ಸರಿಹೋಗುವ ಹಾಗೆ ಮಾತ್ರೆಗಳನ್ನು ಎಣಿಸಿ ಕಂದ ರೂಪದಲ್ಲಿ ಬರೆದಿದ್ದಾರೆ. ಮುದ್ರಾಸಿಸ ಪ್ರಕಟನೆಯಲ್ಲಿ 'ತ್ರಿವಿದಿ' ಎಂದು ಸಂಕೇತ ಮಾಡಿ ಅಚ್ಚುಹಾಕಿಸಿದ್ದಾರೆ. ಈ ಪದ್ಯ ಕಂದವೂ ಅಲ್ಲ ತ್ರಿವಿದಿಯೂ ಅಲ್ಲವೆಂಬುದನ್ನು ಅದನ್ನು ಪೂರ್ಣರೂಪದಲ್ಲಿ ಕಂಡು ತಿಳಿದುಕೊಳ್ಳಬೇಕು.

ಬಟ್ಟುದು ಬಲ್ಲವಾಡಿ ನೆಱೆನಂಬಿದುದಾರ್ಹತಮುಂ ಜಿನೇಂದ್ರನಂ
ತಿರ್ದರ್ ಮಹಾಪುರಾಣಕವಿಗಳ್ ಗುರುಗಳ್ ಗುಣಭದ್ರದೇವರುಂ ||
ತಿರ್ದದರೆನ್ನ ಪೇಳ್ದ ಕೃತಿಯುಂ ಕೃತಿಬಂಧನನಾವ ದೋಷಮುಂ |
ಪೊರ್ದದು ಪೊರ್ದದೆಂತಣಮೆ ಪಾಪದ ಸಂತತಿ ವಾರಣಾಸಿಯುಂ ||

ಇದು ಉತ್ಪಲಮಾಲೆ. ಶಬ್ದಾನುಶಾಸನದ ೧೪೦ನೆಯ ಸೂತ್ರದ ಕೆಳಗೆ ಈ ಪದ್ಯದ ಭಾಗವನ್ನು, ಶಬ್ದಮಣಿದರ್ಪಣದಿಂದ ಉದ್ಧರಿಸಿದೆ. ಅಲ್ಲಿ ಇದಕ್ಕೆ ಉತ್ಪಲಮಾಲೆಯೆಂಬ ಸಂಕೇತವನ್ನಿಡದಿದ್ದರೂ ಅದು ಅಚ್ಚಾದ ರೀತಿಯಲ್ಲಿ ಅದನ್ನು ಉತ್ಪಲಮಾಲೆಯೆಂದು ತಿಳಿದುಕೊಳ್ಳಬಹುದು. ಈ ಪದ್ಯದಲ್ಲಿ ಗುಣಭದ್ರ ದೇವರ ಮಹಿಮೆಯನ್ನು ಕೊಂಡಾಡಿದೆ. ಅಂಥವರು ಆ ಕವಿಯ ಕಾವ್ಯವನ್ನು ತಿದ್ದಿದ್ದಾರೆ. ಆದ್ದರಿಂದ ವಾರಣಾಸಿಯನ್ನು ಪಾಪವು ಸೋಂಕದಂತೆ ತನ್ನ ಕೃತಿಬಂಧವನ್ನು ಆವ ದೋಷವೂ ಹೊಂದದೆಂಬುದು ಪದ್ಯದ ಮುಖ್ಯಾಶಯ.

ಮುಂದಿನ ಸೂತ್ರವು ಱಟಸಂದೇಹವನ್ನು ತಿಳಿಸುವ ಅಜ್ಞಾದ ಪ್ರತಿಯ ೨೫ ನೆಯ ಸೂತ್ರ. ಈ ಸೂತ್ರದ ಉದಾಹರಣೆಗಳಲ್ಲಿ ಪುತ್ಥಳಿಯೆಂಬ ಶಬ್ದವೂ ಬಂದಿದೆ. ಇದೂ ಱಟಸಂದೇಹವಾಗಬೇಕಷ್ಟೆ. ವ್ಯಾಖ್ಯಾನಕಾರನು ಈ ಶಬ್ದದ ವಿಷಯವಾಗಿ, "ಅಲ್ಲಿ ಪುತ್ಥಳಿ ಶಬ್ದವೊಂದು ಕುಳನೆಂದು ನಿಶ್ಚಯಮಾದುದು ಪ್ರಯೋಗವಶದಿಂ" ಎಂದು ನಿರ್ಣಯಿಸಿದ್ದಾನೆ. ಇವನು ಪ್ರಾಚೀನ ಕವಿಗಳ ಕಾವ್ಯಗಳಲ್ಲಿ ಇಂತಹ ಪ್ರಯೋಗಗಳನ್ನು ಕಂಡಿರುವುದೇ ಹೀಗೆಂದು ಹೇಳಲು ಕಾರಣವಾಗಿದೆ ಹಿಂದೆ ಱಟಸಂದೇಹಗಳನ್ನು ಱಟಸಂದೇಹಗಳೊಡನೆ ಪ್ರಾಸವಿಡಬೇಕೆಂಬುದನ್ನು ಉದಾಹರಣೆಯನ್ನಿತ್ತು ಸ್ಪಷ್ಟಮಾಡಿದ್ದಾನಷ್ಟೆ. ಅಲ್ಲಿ ಪುತ್ಥಳಿ ಎಂಬುದು ಱಟಸಂದೇಹವಾಗಿ ಪ್ರಾಸಕ್ಕೆ ಬಂದಿದೆ. ಆದರೆ ವ್ಯಾಖ್ಯಾನಕಾರನು ಈಗ ಮತ್ತೊಂದು ಪ್ರಯೋಗವನ್ನು ಕಂಡು ಇಲ್ಲಿ ಅದು ಸಂದೇಹಕ್ಕಾಸ್ಪದವಿಲ್ಲವೆಂಬ ತೀರ್ಮಾನಕ್ಕೆ ಬಂದಿದ್ದಾನೆ. ಅದನ್ನಿವನು ಈ ಸ್ವಾರಸ್ಯವಾದ ಪದ್ಯದಲ್ಲಿ ಕಂಡಿರುವುದನ್ನು ಉದಾಹರಿಸಿ ಸ್ಪಷ್ಟಗೊಳಿಸುವನು.

ತಳರದೆ ತನ್ನ ಕಣ್ಣ ಮೊದಲೊಳ್ ಸುಳಿವಾಕೆಯ ರೂಪುಗಂಡುದ |
ಕ್ಕೆಳಸಿರದಾಕೆಗೆತ್ತು, ರಸಚಿತ್ರದ ಪೆಂಡಿರನಾಕೆಗೆತ್ತು, ಪು |
ತ್ಥಳಿಗಳನಾಕೆಗೆತ್ತೆಲಗೆ ಬಾರೆನುತುಂ ಸಿಡುದೋಳನೆತ್ತಿ ಕೋ |
ಮಳ ಕರಕಂಜದಿಂದೆಱವಿ ನೋಡಿದನಾ ರತಿರಾಗಮೋಹಳಂ ||

ಇಲ್ಲಿ ಕುಳ ಕ್ಷಳಗಳೊಡನೆ ಪುತ್ಥಳಿಯ ಳಕಾರವು ಪ್ರಾಸವಾಗಿ ಪ್ರಯೋಗವಾಗಿರುವುದರಿಂದ ಈ ಶಬ್ದವು ಕುಳ ಳಕಾರವೆಂದೇ ಈ ವ್ಯಾಖ್ಯಾನಕಾರನ ನಿರ್ಣಯ.

### ಮುರಲ್, ಅರಲ್, ಎರಲ್

ಸೂತ್ರ ೨೯ ರಲ್ಲಿ ಮರಲ್, ಆರಲ್, ಎರಲ್ ಎಂಬುವುಗಳ ಮಧ್ಯರೇಫೆಗೆ ಲಕಾರ ಬರುತ್ತದೆಯೆಂದು ಹೇಳಿದೆ, ಕೇಶಿರಾಜನು 'ಮರಲೆಂಬುದಱ ರೇಫೆಗೆ ಣತ್ವಮುಮಾಗಿ ಮಣಲೆಂದುಮುಂಟು,' ಎಂದು ಆ ಶಬ್ದದ ರೂಪಗಳನ್ನು ವಿಶದಗೊಳಿಸಿದ್ದಾನೆ. ವ್ಯಾಖ್ಯಾನಕಾರನು ಅರಲ್ ಎಂಬುದು ಅಲರ್ ಎಂದಾಗುವುದೆಂದು ಹೇಳುವುದಲ್ಲದೆ ಅದಕ್ಕೆ 'ಅಳರೆಂದುಮುಂಟು' ಎಂಬುದನ್ನು ಹೆಚ್ಚಿಗೆ ಸೇರಿಸಿದ್ದಾನೆ. ಅದಕ್ಕೆ ಪ್ರಯೋಗವನ್ನು ಕಾವ್ಯವೊಂದರಿಂದ ಎತ್ತಿಕೊಂಡಿದ್ದಾನೆ.

ಅಳರೆಲೆ ಎಲೆ, ಮಾಗಾಯ್ ಕಾಯ್, |
ತೊಳಗುವ ಕಣ್ಮಲರಲರ್, ಮುಗುಳ್ನಗೆ ಚೆಲ್ವಂ ||
ತಳೆದ ಮುಗುಳ್ನನೆಯೆನೆ ಕ |
ಣ್ಗೊಳಿಪಂ........... ........... || ಎಂಬಲ್ಲಿ

ಪ್ರಥಮ ಚರಣದ ಮೊದಲನೆಯ ಪದವು ಅಳರ್ ಎಂದಿದೆ. ಉಳಿದ ನಾಲ್ಕು ಚರಣಗಳಲ್ಲಿಯೂ ಕುಳ ಳಕಾರವೇ ಪ್ರಾಸವಾಗಿ ಬಂದಿರುವುದರಿಂದ ಅಲರ್ ಶಬ್ದಕ್ಕೆ

ಆಳರ್ ಎಂಬ ರೂಪವೂ ಕನ್ನಡ ನುಡಿಯಲ್ಲುಂಟೆಂಬುದು ವ್ಯಾಖ್ಯಾನಕಾರನ ಪ್ರಯೋಗೋದಾಹರಣೆಯಿಂದ ವಿದಿತವಾಗುವುದು.

ಮೇಲಿನ ಪದ್ಯ ಪೂರ್ಣವಾಗಿಲ್ಲ. ನಾಲ್ಕನೆಯ ಚರಣದಿಂದಾರಂಭವಾಗಿ ಹತ್ತು ಓಲೆಯ ಗರಿಗಳು ನಷ್ಟವಾಗಿವೆ ಸುಮಾರು ೨೦ ಪುಟಗಳಷ್ಟು ವಿಷಯವು ಕಳೆದು ಹೋಗಿರುವುದರಿಂದ ವ್ಯಾಖ್ಯಾನಕಾರನು ಹೇಳುವ ಅನೇಕ ನವೀನ ಸಂಗತಿಗಳು ತಿಳಿಯದಾಗಿವೆ. ಸೂತ್ರಗಳಾವುವೂ ಕಳೆದ ಹೋದ ಓಲೆಗಳಲ್ಲಿ ಪ್ರತಿಪಾದಿತವಾಗಿಲ್ಲ ವ್ಯಾಖ್ಯಾನಕಾರನು ಮೇಲೆ ಉಕ್ತವಾದ ಸೂತ್ರಗಳ ಅರ್ಥವು ಸ್ಪಷ್ಟವಾಗುವ ಹಾಗೆ ಅನೇಕ ಪ್ರಯೋಗಗಳನ್ನು ಉದಾಹರಿಸಿರಬಹುದು ಯತಿಯನ್ನೂ ವಿಚಾರಕ್ಕೆ ತೆಗೆದುಕೊಂಡಂತಿದೆ. ಕವಿರಾಜಮಾರ್ಗದ ಮೊದಲನೆಯ ಪರಿಚ್ಛೇದದ ೭೪ ನೆಯ ಪದ್ಯವನ್ನು ಮುಂದಿನ ಪುಟದಲ್ಲಿ ಉದಾಹರಿಸಿ ಅದಕ್ಕೆ ವೃತ್ತಿಯನ್ನೂ ಬರೆದಿದ್ದಾನೆ. ಈ ಪದ್ಯದ ಕೆಳಗೆ 'ಎಂದಗ್ಗಳನ ಕಾವ್ಯಂ' ಎಂದಿದೆ. ಇದು ಪ್ರತಿಮಾಡುವವನ ದೋಷವಾಗಿರಬೇಕು. ಈ ಪದ್ಯವು ಅಗ್ಗಳನ ಕಾವ್ಯದಲ್ಲಿ ಬರಲಿಡೆಯಿಲ್ಲ. ಪ್ರತಿಮಾಡುವವನು ಕೈ ತಪ್ಪಿ ಇದನ್ನು ಬರೆದಿದ್ದಾನೆಂದು ಅನುಮಾನಿಸಬಹುದು.

ಇಲ್ಲಿಗೆ, "ಇಂತು ಪ್ರಾಸಪ್ರಕರಣ ವಿವರಣಂ, ಅಬಿ ಕುಳ ಕ್ಷಳ ವ್ಯಾವರ್ಣನಂ ಸಂಪೂರ್ಣಮಾದುದು" ಎಂದು ಈ ದೀರ್ಘವಾದ ವ್ಯಾಖ್ಯಾನವನ್ನು ಮುಗಿಸಿದ್ದಾನೆ.

## ಶಿಥಿಲದ್ವಿತ್ವ

ಶಿಥಿಲದ್ವಿತ್ವವನ್ನು ವಿಧಿಸುವ ಸೂತ್ರಗಳೂ ಅವುಗಳ ವೃತ್ತಿಗಳೂ ಸುಮಾರಾಗಿ ಒಂದೇ ಆಗಿವೆ. ಹೊಸ ಪ್ರತಿಯಲ್ಲಿ ವೃತ್ತಿಯ ಪಾಠ ಅಲ್ಲಲ್ಲಿ ವ್ಯತ್ಯಸ್ತವಾಗಿದೆ. ಈ ವ್ಯತ್ಯಾಸವು ಸೂತ್ರಾರ್ಥವನ್ನು ವಿಶದಮಾಡುವ ಸಂದರ್ಭದಲ್ಲಿ ಕಂಡು ಬರುವುದು ವೃತ್ತಿಯ ಭಾಷೆ ಕೆಲವೆಡೆಯಲ್ಲಿ ಪ್ರಾಚೀನಭಾಷಾಪದ್ಧತಿಯನ್ನನುಸರಿಸಿದೆ. ಉದಾಹರಣೆಗಾಗಿ ಮೇಣ್ ಎಂಬುವನ್ನು ತೆಗೆದುಕೊಳ್ಳಬಹುದು. ಮೇಣ್ ಎಂಬುದು ವೃತ್ತಿಯಲ್ಲಿ ಸಾಮಾನ್ಯವಾಗಿ 'ಅಥವಾ' ಎಂಬ ಅರ್ಥದಲ್ಲಿ ಪ್ರಯೋಗವಾಗಿದೆ. ಇದು ಮತ್ತೆ ಎಂಬ ಅರ್ಥದಲ್ಲಿ ಪ್ರಯೋಗವಾಗುತ್ತಿರುವುದು ಇತ್ತೀಚಿನ ಕಾಲದಿಂದ. ಹಳಗನ್ನಡದಲ್ಲಿ ಮೇಣ್ ಎನ್ನುವುದು ಸಂಸ್ಕೃತದಲ್ಲಿ 'ವಾ' ಇರುವ ಹಾಗೆ ಎರಡೆರಡು ಸಲ ಪ್ರಯೋಗವಾಗುತ್ತಿರುವುದನ್ನು ಪ್ರಾಚೀನ ಕಾವ್ಯಗಳಿಂದ ತಿಳಿದುಕೊಳ್ಳಬಹುದಾಗಿದೆ. ಹೊಸ ಪ್ರತಿಯ ವೃತ್ತಿಯಲ್ಲಿಯೂ ಇದು ದ್ವಿರುಕ್ತವಾಗಿ ಪ್ರಯೋಗವಾಗುತ್ತಿರುವುದು. ಇದೇ ಸಾಧು ಪ್ರಯೋಗ. ಈ ಮುಂದಿನ ವೃತ್ತಿಯ ಭಾಷೆಯನ್ನು ಗಮನಿಸಬೇಕು. ಇದು ಶಿಥಿಲ ದ್ವಿತ್ವವನ್ನು ಹೇಳುವ ೪೨ ನೆಯ ಸೂತ್ರದ ವೃತ್ತಿ.

" ಪೆಱಗಣಮೆಯ್ಯೊಳ್ ಲಘುಮೊದಲಾಗಿರ್ದ, ಱಟಿ, ಕುಳ, ರೇಫಾಂ
ತಂಗಳಪ್ಪ ಲಿಂಗಂಗಳಿರೆ, ಮುಂದೆ ಗಳ್ ಮೇಣ್ ಚತುರ್ಥಿ
ಗಾದ ಗೆಕಾರ (೦) ಮೇಣ್ನಿಲೆ ಶಿಥಿಲತ್ವಂ ಪಿರಿದುಮಕ್ಕುಂ "

ಸೂತ್ರ ೪೪ ರ ಪಾಠವು ಸ್ವಲ್ಪ ವ್ಯತ್ಯಾಸವನ್ನೊಳಗೊಂಡಿದೆ.

ಈ ಸೂತ್ರವು ಹ್ರಸ್ವಾದಿಯಾದ ಧಾತುಗಳು ಱಟಿ, ಕುಳ, ರೇಫಾಂತವಾಗಿದ್ದಲ್ಲಿ ಅವುಗಳಿಗೆ ತ್ರಿಕಾಲದ್ಯೋತಕಗಳಾದ ದ, ದಪ, ವಕಾರಗಳು, ವಿಧಿಯ ಗೆಕಾರವು, ವರ್ತಮಾನದ ಗುಂ ಎಂಬುದು ಪರವಾದರೆ ಶಿಥಿಲವಾಗುವುವೆಂಬುದನ್ನು ಬೋಧಿಸುತ್ತದೆ. ಅಚ್ಚಾದ ಎಲ್ಲಾ ಪ್ರತಿಗಳ ವೃತ್ತಿಗಳಲ್ಲಿ " ಹ್ರಸ್ವಾದಿಗಳಪ್ಪ ಱಟಿ, ಕುಳ, ರೇಫಾಂತಂಗಳಪ್ಪ ... .." ಇತ್ಯಾದಿಯಾಗಿ ಸೂತ್ರದ ವಿವರಣೆಯೊಡನೆ ಕೊನೆಯಲ್ಲಿ ಸೂತ್ರದಲ್ಲಿಲ್ಲದ ' ಕ್ರಿಯಾಪದದೊಳ್ ಶಿಥಿಲತ್ವಮುಂಟು ' ಎಂಬ ಹೆಚ್ಚಿನಪಾಠವಿದೆ. ಈ ಪ್ರತ್ಯಯಗಳೆಲ್ಲಾ ಆಖ್ಯಾತ ವಿಷಯವನ್ನು ತಿಳಿಸುವುವಾದುದರಿಂದ ಇದನ್ನು ಸೂತ್ರದಲ್ಲಿ ಹೇಳುವ ಆವಶ್ಯಕತೆಯಿಲ್ಲವೆಂದು ಸಮಾಧಾನವನ್ನು ತಂದುಕೊಳ್ಳಬಹುದು. ಆದರೆ ಸೂತ್ರದಲ್ಲಿ ಇಲ್ಲದ್ದು ವೃತ್ತಿಯಲ್ಲಿ ಇರುವುದರಿಂದ ಸೂತ್ರಕಾರನು ಬೇರೆ, ವೃತ್ತಿಕಾರನು ಬೇರೆ ಎಂದು ಹೇಳುವವರಿಗೆ ಇದೊಂದು ಆಧಾರವಾಗುವುದು. ಸೂತ್ರವು,

ಪುಗೆ ದ, ದಪ, ವಕಾರಂ ವಿಧಿ |
ಯ ಗೆಕಾರಂ ವರ್ತಮಾನಕಾಲದ ಗುಂ ಧಾ ||
ತುಗೆ ಱಟಿ ಕುಳ, ರೇಫಾಂತ |
ಕ್ಕೊಗಗುಂ ಶಿಥಿಲತ್ವಮುಗುರುಪೂರ್ವಸ್ಥಿತಿಯಿಂ || ಎಂದು
(ಸಾ. ಪ. ನ. ಸೂ. ೪೪)

ಕಿಟಲ್‌ಪ್ರತಿಯಿಂದ ಆರಂಭವಾಗಿ ಲಿಂಗಣಾರಾಧ್ಯನ ಪ್ರತಿಯವರೆಗೆ ಒಂದೇ ಪಾಠದಲ್ಲಿದೆ. ವೃತ್ತಿಯೂ ಮೇಲಿನ ವಿವರಣೆಯಂತೆ ಕ್ರಿಯಾಪದ ಶಬ್ದಯುಕ್ತವಾಗಿದೆ. ಸೂತ್ರದಲ್ಲಿಯಾದರೋ ಕ್ರಿಯಾಪದವನ್ನು ಸಂಕೇತಿಸುವ ಶಬ್ದವಿಲ್ಲವೆಂದು ಈ ಮೊದಲೇ ಹೇಳಿದೆ. ಹೊಸಪ್ರತಿಯ ಪಾಠವು ಈ ಸಂದೇಹವನ್ನು ಹೋಗಲಾಡಿಸುವದು.

........ಱಟಿ ಕುಳ ರೇಫಾಂತ
ಕ್ಕೊಗೆಗುಂ ಶಿಥಿಲತ್ವಮುಗುರುಪೂರ್ವ ಕ್ರಿಯೆಯೊಳ್ ||

' ಸ್ಥಿತಿಯಿಂ ' ಎಂಬುದಕ್ಕೆ ಪ್ರತಿಯಾಗಿ ಪ್ರಯೋಗವಾಗಿರುವ ಕ್ರಿಯೆಯೊಳ್ ಎಂಬ ಪಾಠಕ್ಕೂ ಇದನ್ನು ವಿವರಿಸುವ, ಎಲ್ಲಾ ಪ್ರತಿಗಳಲ್ಲಿಯೂ ಏಕವಾಕ್ಯತೆಯಿರುವ ' ಕ್ರಿಯಾಪದದೊಳ್ ' ಎಂಬ ವೃತ್ತಿಯ ಪಾಠಕ್ಕೂ ಸಮಾನಾರ್ಥವಾಗಿ ಆಕ್ಷೇಪಣೆಗೆ ಅವಕಾಶವಿಲ್ಲದಂತಾಗುವುದೆಂಬುದು ಈ ಸೂತ್ರದಿಂದ ವ್ಯಕ್ತವಾಗಿದೆ.

## ನಿಜಬಿಂದು ಪದಗಳು

ಸೂತ್ರ ೩೬ ನಿಜಬಿಂದುಯುಕ್ತವಾದ ಪದಗಳನ್ನೂ ವಿಕಲ್ಪಬಿಂದುವಿರುವ ಪದಗಳನ್ನೂ ತಿಳಿಸುತ್ತದೆ. ಅಚ್ಚಿನ ಪ್ರತಿಗಳಲ್ಲೆಲ್ಲಾ ಈ ಪದಗಳನ್ನು ಬಿಡಿಬಿಡಿಯಾಗಿ ಪಟ್ಟಿಯಂತೆ ಕೊಟ್ಟಿವೆ. ಹೊಸಪ್ರತಿಯಲ್ಲಿ ಈ ಶಬ್ದಗಳನ್ನು ಹಿಂದಿನ ಸ್ವಭಾವ ಅಲಗಳ ಶಬ್ದಗಳಂತೆ ಕಂದ ಪದ್ಯಗಳಲ್ಲಿ ಹೆಣೆದಿದೆ. ಈ ಕಂದಗಳನ್ನು ಕೇಶಿರಾಜನೇ ರಚಿಸಿದನೋ, ಈ ವ್ಯಾಖ್ಯಾನಕಾರನು ತಾನೇ ರಚಿಸಿ ಬರೆದನೋ ಖಂಡಿತವಾಗಿ ಹೇಳುವುದು ಕಷ್ಟ. ಕೇಶಿರಾಜನು ಶಬ್ದಗಳ ಪಟ್ಟಿಯನ್ನು ತಿಳಿಸುವ ಸೂತ್ರಗಳನ್ನೂ ಬರೆದಿದ್ದಾನೆ. ಸೂತ್ರ ೨೬, ೨೭, ೨೮, ೩೭, ೩೮, ೩೯, ೪೦, ೪೧, ೪೫ ಇವೆಲ್ಲವೂ ಶಬ್ದಗಳ ಗುಂಪುಗಳಾಗಿವೆ. ಹೀಗೆ ಶಬ್ದಗಳನ್ನು ಸೂತ್ರ ರೂಪವಾಗಿ ಬರೆದ ಕೇಶಿರಾಜನೇ ಈ ಪದಗಳನ್ನು ಕಂದರೂಪವಾಗಿ ರಚಿಸಿರಬಹುದೆಂದು ವಾದಿಸಬಹುದು. ಆದರೆ ಕೇಶಿರಾಜನು ಆ ಪದಗಳನ್ನುಸುರುವ ಕಂದಗಳನ್ನು ಸೂತ್ರ ಸ್ಥಾನದಲ್ಲಿ ಇಟ್ಟಿದ್ದಾನೆ. ಇಲ್ಲಿಯಾದರೂ ಕೆಲವು ನಿಜ ಬಿಂದುಗಳ್ ಎಂಬ ಸೂತ್ರವನ್ನು ಪ್ರತ್ಯೇಕವಾಗಿ ರಚಿಸಿ ಪ್ರಯೋಗಕ್ಕಾಗಿ ಶಬ್ದಗಳನ್ನು ಬೇರೆ ಕವಿಗಳ ಕಾವ್ಯದಿಂದ ಉದಾಹರಿಸುವುದು ಸ್ವಾಭಾವಿಕವಾಗಿದೆ. ಕೇಶಿರಾಜನೇ ಈ ಉದಾಹರಣ ಕಂದಗಳನ್ನು ರಚಿಸಿದ್ದಾನೆಂದು ಹೇಳಿದರೆ ಅವು ಸ್ವರಚಿತವಾದ ಪ್ರಯೋಗಗಳೆಂಬಂತೆ ಕಾಣುವುದು. ಉದಾಹರಣೆಗಳನ್ನು ಬೇರೆ ಕವಿಗಳ ಕಾವ್ಯದಿಂದ ತೆಗೆದುಕೊಂಡು ಬರೆಯುವುದು ಕೇಶಿರಾಜನ ವಾಡಿಕೆಯಾಗಿರುವುದರಿಂದ ಈ ಪದ್ಯಗಳನ್ನು ಇವನು ಬರೆದಿರಲಾರನೆಂದು ಹೇಳಬಹುದಾಗಿದೆ. ಹೊಸ ಪ್ರತಿಯಲ್ಲಿ ಸೂತ್ರದ ಕೆಳಗೆ ವೃತ್ತಿಯನ್ನು ಬರೆಯುತ್ತ, "ಕೆಲವು ಪದಂಗಳ್ ಸ್ವಭಾವದಿಂ ನಿತ್ಯ ಬಿಂದುಗಳಪ್ಪುವವಕ್ಕೆ ಪ್ರಯೋಗಂ" ಎಂದು ಹೇಳಿ ಕಂದ ಪದ್ಯಗಳನ್ನು ಪ್ರಯೋಗಕ್ಕಾಗಿ ಉದಾಹರಿಸಿದೆ. ಮೊದಲೇ ರಚಿತವಾದ ಪದ್ಯಗಳನ್ನು ವ್ಯಾಖ್ಯಾನಕಾರನು ಉದಾಹರಿಸಿರಬೇಕು, ತಾನೇ ಸ್ವಯಮಾಗಿ ರಚಿಸಿರಲಾರನು ಎಂಬ ವಾದವನ್ನು ಎತ್ತಬಹುದಾಗಿದೆ. ಅದೇನೇ ಇರಲಿ, ವ್ಯಾಖ್ಯಾನಕಾರನು ಈ ಪದ್ಯಗಳನ್ನು ಕೊಟ್ಟು ಭಾಷಾಭ್ಯಾಸಿಗಳಿಗೆ ಕಂಠಸ್ಥಮಾಡಿಕೊಳ್ಳಲು ಅನುಕೂಲ ಮಾಡಿಕೊಟ್ಟಿದ್ದಾನೆ. ಈ ಪದಗಳೆಲ್ಲ ಐದು ಪದ್ಯಗಳಲ್ಲಿ ಮುಗಿಯುತ್ತವೆ. ಮೊದಲ ನಾಲ್ಕು ಪದ್ಯಗಳು ನಿಜ ಬಿಂದುಯುಕ್ತ ಶಬ್ದಗಳನ್ನು ಹೇಳುತ್ತವೆ. ಐನೆಯ ಪದ್ಯವು ವಿಕಲ್ಪ ಬಿಂದು ಪದಗಳನ್ನು ಕೊಡುತ್ತದೆ. ಎರಡನೆಯ ಪದ್ಯವು ಹೀಗಿದೆ.

ತೋಂಟಂ ಬಣಂಬೆಯೆಂದುಱೆ |
ಬೇಂಟೆ ಪಳುಂಕಿದನೆ ಱಂಕು ದಾಂಟುಂ ದೂಂಟುಂ ||
ಗೆಂಟುಗೆ ಗೆಂಟುಂ ಗೊಂಟುಂ |
ಸುಂಟಗೆ ಮೀಂಟೆಂಟು ತೆಂಟು ನಿಜ ಬಿಂದು ಪದಂ ||

ಪ್ರತಿಯೊಂದು ಪದ್ಯವೂ 'ನಿಜ ಬಿಂದು ಪದಂ' ಎಂದು ಮುಗಿಯುತ್ತದೆ.

ಮುಸುಕೆ ಮುಸುಂಕೆ ತುಳುಕಿಂದ |
ನೊನೆದಂ ಬುಪನ ಬಳೆ ತುಳುಕೆ ಪೊಳಕೆ (ಪೊ) ಳಂಕು ||
ತ್ರಸಿಯುಳ ಮೆಱೆವ ಕೊಡಂಕೆಯು |
ಕುಸುಮುವ ಸೆಳೆತಂದು ತನ್ನ ಕೊಡಕೆಯೊಳಿಟ್ಟಂ ||

ಎಂಬ ಈ ಕಂದದಲ್ಲಿ ವಿಕಲ್ಪ ಬಿಂದು ಶಬ್ದಗಳನ್ನು ಒಂದೇ ಪದಗಳಲ್ಲಿ ಉಪಯೋಗಿಸಿದ ಪ್ರಾಚೀನ ಕವಿ ಪ್ರಯೋಗವನ್ನು ಎಲ್ಲಿಂದಲೋ ಉದ್ಧರಿಸಿದ್ದಾನೆ.

ಕೆಲವೆಡೆಗಳಲ್ಲಿ ಲಿಂಗಣಾರಾಧ್ಯನ ಸೂತ್ರ ವೃತ್ತಿಗಳನ್ನು ಹೊಸ ಪ್ರತಿಯ ಸೂತ್ರ ವೃತ್ತಿಗಳು ಹೋಲುತ್ತವೆ. ಇಂಥವು ಹೆಚ್ಚಾಗಿಲ್ಲ. ಇವುಗಳಲ್ಲಿ ಒಂದು ಸೂತ್ರವನ್ನೂ ಅದರ ವೃತ್ತಿಯನ್ನೂ ಕೊಡಲಾಗುವುದು. ಈ ಪಾಠಭೇದದಿಂದ ಶಬ್ದಮಣಿದರ್ಪಣದ ಬೇರೆ ಬೇರೆ ವೃತ್ತಿಗಳಲ್ಲಿರುವ ವೈಷಮ್ಯವೂ, ಸಾಮ್ಯವೂ ತಕ್ಕಮಟ್ಟಿಗೆ ಗೋಚರವಾಗುವುವು.

ಅಚ್ಚಾದ ಸಾ. ಪ. ಪ್ರತಿಯ ೪೭ ನೆಯ ಸೂತ್ರದಲ್ಲಿಯ ಪಾಠವನ್ನು ನೋಡಬಹುದು.

ಪುದಿಗುಂ ನಿರ್ಧಾರಣದ |
ಲ್ಲದೆಯೆಂಬ ದೆಕಾರದೆಡೆಗೆ ಪಿರಿದುಂ ಲೋಪ || ಎಂದಿದೆ.

ಲಿಂಗಣಾರಾಧ್ಯನ ಪ್ರತಿಯ ಪಾಠವು

ಪುದಿಗುಂ ನಿರ್ಧಾರಣವ |
ಲ್ಲದೆಯೆಂಬ ದೆಕಾರದೆಡೆಗೆ ಪಿರಿದುಂ ಲೋಪ || ಎಂದಿದೆ.

ಪರಿಷತ್ಪ್ರತಿಯ ಪಾಠ 'ನಿರ್ಧಾರಣದಲ್ಲದೆ' ಎಂದಿದ್ದರೆ ಮದ್ರಾಸ್ ಪ್ರತಿಯಲ್ಲಿ 'ನಿರ್ಧಾರಣವಲ್ಲದೆ' ಎಂಬ ಪಾಠವಿದೆ. ಹೊಸ ಪ್ರತಿಯಲ್ಲಿಯೂ ಲಿಂಗಣಾರಾಧ್ಯನ ಪ್ರತಿಯ ಪಾಠವಂತೆಯೇ ಇದೆ. ಎರಡನೆಯ ಚರಣದಲ್ಲಿ 'ದೆಕಾರದೆಡೆಗೆ' ಎಂಬುದಕ್ಕೆ ಬದಲಾಗಿ 'ದೆಕಾರದಲ್ಲಿ' ಎಂಬ ಪಾಠವಿದೆ. ಇದರಿಂದ ಅರ್ಥವ್ಯತ್ಯಾಸವಿಲ್ಲ. 'ನಿರ್ಧಾರಣವಲ್ಲದೆ' ಎಂಬ ಪಾಠವು ಕ್ಲಿಷ್ಟಾನ್ವಯವಾಗುವ ಹಾಗಿದೆ. 'ಪುದಿಗುಂ ನಿರ್ಧಾರಣಂ, ಅಲ್ಲದೆ ಎಂಬ ದೆಕಾರದಲ್ಲಿ ಪಿರಿದುಂ ಲೋಪಂ' ನಿರ್ಧಾರಣವನ್ನು ಹೇಳುವಾಗ 'ಅಲ್ಲದೆ' ಎಂಬಲ್ಲಿರುವ ದೆಕಾರವನ್ನು ಲೋಪ ಮಾಡಿಕೊಳ್ಳಬೇಕು ಎಂದು ಇದರಿಂದ ಅರ್ಥವಾಗುವುದು. ಸಾ. ಪ. ಪ್ರತಿಯಲ್ಲಿನ 'ನಿರ್ಧಾರಣದ ಅಲ್ಲದೆ' ಎಂಬ ಪಾಠದಿಂದ ಅಲ್ಲದೆ ಎಂಬುದು ನಿರ್ಧಾರಣಾರ್ಥಕ ಶಬ್ದವೆಂದು ದ್ಯೋತವಾಗುವುದು. ಇಲ್ಲಿ ಹಾಗಲ್ಲ, ನಿರ್ಧಾರಣವನ್ನು ಹೇಳುವಲ್ಲಿ ಅಲ್ಲದೆಯ ದೆಕಾರಕ್ಕೆ ಲೋಪ ಮಾಡಿಕೊಳ್ಳಬೇಕೆಂದು ತಾತ್ಪರ್ಯವಾಗುವುದು. ವೃತ್ತಿಯಲ್ಲಿ "ನಿರ್ಧಾರಣಾರ್ಥಮುಂ ಪೇಳ್ವಲ್ಲಿ ಅಲ್ಲದೆ (ಇಲ್ಲಿ ಮಧ್ಯದ "ಲ್ಲ" ಎಂಬಕ್ಷರವು ಬಿಟ್ಟು ಹೋಗಿದೆ) ಎಂಬ ಶಬ್ದಕ್ಕೆ ವಿಕಲ್ಪದಿಂ ಲೋಪಮುಂಟು ಎಂದಿದೆ. ಇಲ್ಲಿಯೇ ಉದಾಹರಣೆಯನ್ನು ಕೊಟ್ಟಿದೆ. ಲಿಂಗಣಾರಾಧ್ಯನ ಪ್ರತಿಯಲ್ಲಿಯೂ

ವೃತ್ತಿಯ ವಾಕ್ಯಗಳನ್ನು ಬೇರೆ ಬೇರೆ ಶಿರೋಲೇಖನಗಳನ್ನಾಗಿಟ್ಟುಕೊಂಡು ಅಲ್ಲಲ್ಲಿ ಪ್ರಯೋಗಗಳನ್ನು ಕೊಟ್ಟಿದೆ. ಹೊಸ ಪ್ರತಿಯಲ್ಲಿಯೂ ಹಾಗೆಯೇ ಕೆಲವು ಕಡೆಯಲ್ಲಿ ಬಂದಿದೆ. ಇದರಿಂದ ವೃತ್ತಿ ಸಮಗ್ರವಾಗಿ ಸಿಕ್ಕವೆ ಅಲ್ಲಲ್ಲಿ ಹರಿದುಹೋದಂತೆ ಕಾಣು ತ್ತದೆ. ಆದರೆ ಪ್ರಯೋಗಗಳ ದೃಷ್ಟಿಯಿಂದ ಮೇಲಿನ ವೃತ್ತಿಯನ್ನು ನೋಡಿಕೊಂಡು ಪ್ರಯೋಗಗಳನ್ನು ಅರ್ಥ ಮಾಡಿಕೊಳ್ಳಲು ಅನುಕೂಲವಾಗುತ್ತದೆ. ಇದನ್ನು ವ್ಯಾಖ್ಯಾನಕಾರನು ಸೌಲಭ್ಯ ದೃಷ್ಟಿಯಿಂದ ಬದಲಾವಣೆ ಮಾಡಿಕೊಂಡಿರಬಹುದು ಇಂಥ ಸಂದರ್ಭಗಳಲ್ಲಿ ಮಾತ್ರವೇ ಲಿಂಗಣಾರಾಧ್ಯನ ಪ್ರತಿಗೂ ಹೊಸ ಪ್ರತಿಗೂ ಹೋಲಿಕೆಯಿದೆ. ಆದರೆ ಇದು ಬಹಳ ಕಡೆ ಇಲ್ಲ

ಕನ್ನಡದಲ್ಲಿ ಹಲಂತ (ವ್ಯಂಜನಾಂತ) ಪದಗಳನ್ನು ತಿಳಿಸುವ ಮಹತ್ತ್ವದ ಸೂತ್ರವನ್ನು ಪ್ರತಿಪಾದಿಸುವಲ್ಲಿಯೇ ಒಂದು ಓಲೆಗರಿ ಕಳೆದುಹೋಗಿದೆ. ಸೂತ್ರದ (ಸೂ. ೪೮) ಒಂದುಪರೆ ಚರಣ ಮಾತ್ರವಿದೆ. ಎರಡು ಪುಟಗಳಷ್ಟು ವಿಷಯ ನಷ್ಟ ವಾಗಿ ಇದೇ ಸೂತ್ರದ ವಿವರಣೆ ಮುಂದಿನ ಓಲೆಯಿಂದ ಮುಂದುವರಿದಿದೆ ವ್ಯಾಖ್ಯಾನ ಕಾರನು 'ಪಿರಿದುಮೆಂಬುದಱಿಂ' ಉಕಾರಾಂತವಾದ ಪದಗಳೂ ಇವೆ ಎಂದು ಹೇಳಿ ಅವುಗಳಿಗೆ ಪ್ರಯೋಗಗಳನ್ನು ಕೊಟ್ಟಿದ್ದಾನೆ

'ಗಾಱು' ಎಂಬ ಪದ ಪ್ರಯೋಗಕ್ಕೆ ಕಾವ್ಯಾವಲೋಕನದ ೩೬,೫೧ ಪದ್ಯ ಗಳನ್ನು ಉದಾಹರಿಸಿದ್ದಾನೆ. ಇವಲ್ಲದೆ ಮತ್ತೆ ಮೂರು ಪದ್ಯಗಳನ್ನು ಬೇರೆ ಕವಿಗಳ ಕಾವ್ಯದಿಂದ ಎತ್ತಿಕೊಂಡಿದ್ದಾನೆ. ಇವುಗಳಲ್ಲಿ ಪುಱು, ಏಱು, ಎಂಬಿವುಗಳು ಪ್ರಯೋಗವಾಗಿವೆ. ಒಂದು ಪದ್ಯದಲ್ಲಿ ಒಬ್ಬ ನವೀನ ಕವಿಯ ಹೆಸರಿರುವುದರಿಂದ ಅದನ್ನಿಲ್ಲಿ ಉದ್ಧರಿಸಿದೆ.

ಅಂಕದ ಮಲ್ಲರ ಬೇಂಟೆಯ |
ಬಿಂಕದ ಸೂಱೆಯರ ಕುದುರೆಯಾನೆಯ ನೃಪರೊಳ್ ||
ಪಂ (ಪೊಂ) ಕ ಱುವಿವೇಱು ಮಾತುಗ |
ಳಂ ಕಿವಿದೊಡವೆನಿಸಿ ರೇಖೊಮ್ಮಣಾರ್ಯಂ ಪೇೞ್ದಂ ||

ಈ ರೇಖೊಮ್ಮಣಾರ್ಯನಾರೋ ಕವಿಚರಿತ್ರೆಯಿಂದ ಗೊತ್ತಾಗುವುದಿಲ್ಲ. ಇದರಲ್ಲಿ ಏಱು ಎಂಬ ಉಕಾರಾಂತ ಪದವಿರುವುದರಿಂದ ವ್ಯಾಖ್ಯಾನಕಾರನು ಈ ಪದವನ್ನು ಉದಾ ಹರಿಸಿದ್ದಾನೆ ಪುಱು ಎಂಬುದು ಬಹುವಚನದಲ್ಲಿ ಪುೞ್ಗಳ್ ಎಂಬಂತೆ ಪ್ರಯೋಗ ವಾಗಿದೆಯೆಂದು ವ್ಯಾಖ್ಯಾನಕಾರನು ಸೂಚಿಸಿದ್ದಾನೆ ಆದರೆ ಅದರ ಪ್ರಯೋಗವನ್ನು ಉದಾಹರಿಸಿಲ್ಲ. ಕೇಶಿರಾಜನು ಬರಿಯ ಶಬ್ದಗಳನ್ನು ಕೊಟ್ಟಿರುವ ಎಡೆಗಳಲ್ಲೆಲ್ಲ ವ್ಯಾಖ್ಯಾನಕಾರನು ಆ ಪದಗಳು ಪ್ರಯೋಗವಾಗಿರುವ ಪದ್ಯಗಳನ್ನು ಉದಾಹರಿಸು ತ್ತಾನಾದ್ದರಿಂದ ವ್ಯಾಕರಣವನ್ನು ಬರೆಯಲು ಪ್ರಯೋಗಗಳನ್ನು ಹುಡುಕುವಲ್ಲಿ ಕೇಶಿರಾಜನು ಎಷ್ಟು ಶ್ರಮ ವಹಿಸಿರುವನೋ, ಅಷ್ಟೇ ಶ್ರಮವನ್ನು ಈ ವ್ಯಾಖ್ಯಾನ ಕಾರನು ವಹಿಸಿರುವನು. ಕೇಶಿರಾಜನು ಹೇಳಿದ ಅನೇಕ ಪ್ರಾಚೀನ ಕವಿಗಳ ಪದ

ಪ್ರಯೋಗಗಳನ್ನು ಅಲ್ಲಲ್ಲಿ ಕೊಟ್ಟು ಅವುಗಳಿಗೆ ತನ್ನ ವಿವರಣೆಯನ್ನು ಕೊಡುತ್ತಾನೆ. ಇದರಿಂದ ವ್ಯಾಖ್ಯಾನಕಾರನ ವಿಮರ್ಶಾಬುದ್ಧಿಯೂ ಸಂಶೋಧನಶಕ್ತಿಯೂ ಎಷ್ಟರ ಮಟ್ಟಿನವೆಂದು ಗೋಚರವಾಗುವುದು.

೪೯ ನೆಯ ಸೂತ್ರದ ವೃತ್ತಿಯಲ್ಲಿ ಸಂಧಿಯ ಲಕ್ಷಣವನ್ನು ಹೇಳುವ ವಾಕ್ಯವನ್ನು ಗಮನಿಸಬೇಕು.

ವೃತ್ತಿ:- "ಎರಡುಂ ಪದಂ ಮೇಣ್ ಪಲವು ಪದಂ ಮೇಣ್ ತಮ್ಮೊಳ್ ಕೂಡುವುದು ಸಂಧಿ."

ಇಲ್ಲಿ ಮೇಣ್ ಎಂಬುದನ್ನು ಎರಡುಸಾರಿ ಪ್ರಯೋಗಿಸಿರುವುದನ್ನು ಲಕ್ಷಿಸಬೇಕು. ಬೇರೆ ವೃತ್ತಿಗಳಲ್ಲಿ ಇಂಥ ಪ್ರಯೋಗವು ಸಿಕ್ಕುವುದಿಲ್ಲ. ಸಂಧಿಭೇದಗಳನ್ನು ಹೇಳುವಸೂತ್ರವಾದ ಮೇಲೆ ಸಂಜ್ಞಾ ಪ್ರಕರಣವು ಸಮಾಪ್ತವಾದುವುದನ್ನು ತಿಳಿಸುವ ಸೂತ್ರಕ್ಕೆವ್ಯಾಖ್ಯಾನವು ಮುಗಿಯುತ್ತದೆ.

## ಸಂಧಿ ಪ್ರಕರಣ

ಸಂಧಿ ಪ್ರಕರಣದ ಆರಂಭಸೂತ್ರದ ಮೊದಲಲ್ಲಿಯೇ ಉದಾಹರಣೆಗಳನ್ನು ಬಿಡಿ ಬಿಡಿಯಾಗಿತ್ತು, ಅವುಗಳ ಸ್ವರೂಪವನ್ನು ಎಂದರೆ ಸ್ವರಾಂತ, ಸ್ವರಾದಿ ಪದಗಳ ರೂಪಗಳನ್ನು ಸ್ಪಷ್ಟಗೊಳಿಸಿ ಆ ಮೇಲೆ ಸೂತ್ರವನ್ನು ಬರೆದಿರುವುದು ಈ ಪ್ರತಿಯಲ್ಲಿ ನವೀನವಾಗಿದೆ. ಇದರಿಂದ ವ್ಯಾಕರಣಾಭ್ಯಾಸಿಗಳಿಗೆ ತಾವು ತಿಳಿಯಬೇಕಾಗಿರುವ ಅಂಶವೇನೆಂಬುದರ ಸರಿಯಾದ ಜ್ಞಾನವಾಗುವುದು. ಈ ಸೂತ್ರದ ಕೆಳಗೆ ಉದಾಹೃತವಾದ ಪ್ರಯೋಗಪದ್ಯವು ಒಂದೇ ಅದು ಪಂಪನ ಆದಿಪುರಾಣದ ೧೪ನೆಯ ಆಶ್ವಾಸದಲ್ಲಿರುವ ೭೭ ನೆಯ ಪದ್ಯ. 'ಸಂಸ್ಕೃತಪ್ರಕೃತಿಸ್ವರಲೋಪಪ್ರಸಿದ್ಧಂ' ಎಂಬುದಕ್ಕೆ ಇದು ಉದಾಹೃತವಾಗಿದೆ. ದೇವ+ಎಂಬ=ದೇವೆಂಬ, ಎಂಬ ಪದವು ಈ ಪದ್ಯದಲ್ಲಿ ಬರುವುದರಿಂದ ವ್ಯಾಖ್ಯಾನಕಾರನು ಈ ಪದ್ಯವನ್ನು ಎತ್ತಿಕೊಂಡಿದ್ದಾನೆ. ಇದರ ಜೊತೆಗೆ ಅರಸ+ಎಂಬ=ಅರಸೆಂಬ ಪ್ರಯೋಗವೂ ಇದೇ ಪದ್ಯದಲ್ಲಿದೆ. ಸ್ವರಸಂಧಿಗೆ ಸಂಬಂಧಿಸಿರುವ ಇನ್ನೂ ಅನೇಕ ಶಬ್ದಗಳು ಈ ಪದ್ಯದಲ್ಲಿರುವುದರಿಂದ ವ್ಯಾಖ್ಯಾನಕಾರನು ಈ ಪದ್ಯವನ್ನು ಆರಿಸಿಕೊಂಡಿರುವಂತೆ ಕಾಣುತ್ತದೆ. ಸಂಸ್ಕೃತ ಪದಗಳಿಗೆ ಇಸು ಸೇರುವಾಗ ಆಗುವ ಸ್ವರಲೋಪಕ್ಕಾಗಿ 'ಪಾಳಿಸು ಸಾಲವೆನಪುಃ ಪೇಟಿಓಂನಮಃ ಶಿವಾಯ ಎಂಬ ಪ್ರಯೋಗಪದ್ಯ' ವೆಂದು ಹೇಳಿದ್ದಾನೆ. ಈ ಪದ್ಯವನ್ನು ಹಿಂದೆ ಎಲ್ಲಿಯೂ ಉದ್ಧರಿಸದೆ ಬರಿಯ ಪದ್ಯವನ್ನು ಸೂಚಿಸಿರುವುದರಿಂದ ವಿದ್ಯಾರಂಭ ಕಾಲದಲ್ಲಿ ಈ ಪದ್ಯವನ್ನು ಹೇಳಿಕೊಡುವ ಅಭ್ಯಾಸವು ಆಗಿನ ಕಾಲದಲ್ಲಿ ಇದ್ದಂತೆ ಕಾಣುತ್ತದೆ. ಪ್ರಸಿದ್ಧವಾಗಿದ್ದ ಈ ಪದ್ಯವನ್ನು ಉದಾಹರಿಸದೆ ಕೇವಲ ಮೊದಲ ಚರಣವನ್ನು ಉದ್ಧರಿಸಿದುದಕ್ಕೆ ಇದೇ ಕಾರಣವಾಗಿರಬೇಕು.

ಸೂತ್ರ ೫೩ ರ ಕೆಳಗೆ ಅನೇಕ ಪ್ರಯೋಗಗಳಲ್ಲಿ 'ಈಯಲ್ ಬಂದತ್ತು' ಎಂಬ ಪಂಪನ ಆದಿಪುರಾಣದ ೯ ನೆಯ ಆಶ್ವಾಸದಲ್ಲಿರುವ ೧೩೨ ನೆಯ ಪದ್ಯವನ್ನು ಪೂರ್ತಿಯಾಗಿ ಕೊಟ್ಟಿದೆ. 'ಆಯಿರ್ದಮಾಟಕ್ಕೆಯಿಂ' ಎಂಬ ಪದ್ಯವು ಆದಿ-ಪುರಾಣದ ೨ ನೆಯ ಆಶ್ವಾಸದ ೫೩ ನೆಯ ಪದ್ಯ. ಇದನ್ನು ಕಾವ್ಯಾವಲೋಕನದಲ್ಲಿ ೩೮ ನೆಯ ಪದ್ಯವಾಗಿ ಉದ್ಧರಿಸಿದೆ.

ಹೊಸ ಪ್ರತಿಯಲ್ಲಿ ಸೂತ್ರ ೫೫ ರ ಪಾಠ ಸ್ವಲ್ಪ ವ್ಯತ್ಯಸ್ತವಾಗಿದೆ. ಆ ಪಾಠದಿಂದ ಅರ್ಥ ವ್ಯತ್ಯಾಸವಾಗುವುದಿಲ್ಲ. ಈ ಸೂತ್ರದ ಕೆಳಗೆ (೯) ಪೂರ್ಣಪದ್ಯಗಳು ಉದಾಹೃತವಾಗಿವೆ. ಇವುಗಳಲ್ಲಿ ಒಂದು ಪದ್ಯವು ಕಾವ್ಯಾವಲೋಕನದಿಂದ ತೆಗೆದುಕೊಂಡದ್ದಾಗಿದೆ. ಇದು 'ವಿಘುವಿಲ್ಲದಿರುಳ್' ಎಂಬ ಪದ್ಯ. ಇದ್ದು ಅಚ್ಚಿನ ಎಲ್ಲ ಪ್ರತಿಗಳಲ್ಲದೆ. 'ತನ್ನಯೆವಘುವಿಲ್ಲದಲೀಲೆ' ಎಂಬುದಕ್ಕೆ ಬದಲಾಗಿ 'ಕೆಂದೆಯೊಳ್ ವಘುವಿಲ್ಲದಲೀಲೆ' ಎಂಬ ಪಾಠ ಹೊಸಪ್ರತಿಯದು. ಕಾವ್ಯಾವಲೋಕನದಲ್ಲಿಯೂ ಇದೇ ಪಾಠವಿದೆ. ಯಾವ ಪಾಠ ಉಚಿತವಾದುದೆಂಬುದನ್ನು ರಸಿಕರು ನಿರ್ಧರಿಸಬೇಕು.

ಲಿಂಗಣಾರಾಧ್ಯನ ಪ್ರತಿಯಲ್ಲಿ ಒಂದೊಂದು ಚರಣ, ಅಥವಾ ಚರಣಭಾಗ ಪ್ರಯೋಗಸ್ಥಾನದಲ್ಲಿ ಬಂದಿದೆ. ಅಲ್ಲಿ ಅಪಪಾಠವಿರುವ ಪದ್ಯಗಳಿಗೆ ಪ್ರತಿಯಾಗಿ ಒಂದೆರಡನ್ನು ಇಲ್ಲಿ ಶುದ್ಧ ಪಾಠದೊಡನೆ ಕೊಡಲಾಗುವುದು

ಉದಾರಕ್ಕೆ:– **ಕುಡುವುದು** ಕೂರ್ಮೆಯುಂದೊಲಿದು ಕೂಡುವ ಮಾನಿನಿಗೇನ ನಾದೊಡಂ|

> ಬಿಡದಲಿಸ್ನೇಹಮುಂಬಳಸಿಪೊಳ್ಳಿಸಿ ತಿಂದಪೆನೆಂಬಸೂಟಿಯಂ||
> ಸುಡುವುದು ಸುಟ್ಟು ತೂರುವುದು ತೂರಿದ ಬೂದಿಯನೊತ್ತಿಗುಟ್ಟಿ ಬೋ
> ಟ್ಟಿಡುವುದು ಮಿಕ್ಕುದಂ ಕದಡಿ ಕುಂಟಣಿಗೀವುದು ತೀವಿಹಂಚಿನೊಳ್ನ

ಉದಾರಕ್ಕಾಗಿ ಈ ಮುಂದಿನ ಹೊಸಪದ್ಯ ಹೆಚ್ಚಿಗೆ ಉದಾಹೃತವಾಗಿದೆ.

> ಪೂವಿಲ್ಲದೆಯುಂ ಪಲಸು ಫ|
> ಲಾವಳಿಯಂ ತಾಳ್ವತೆಱದೆ ಪುಣ್ಣಿಲ್ಲದೆಯುಂ ||
> ಪೂವಿಲ್ಲನ ಶರಹತಿಯಿಂ|
> ನೋವನೆ ತಳೆದಪ್ಪುದು ಹೃದಯುವೆನ್ನಯ ಕೆಳದೀ ||

ಈ ಪದ್ಯವನ್ನು ಮುಂದೆ ನಾಮಪ್ರಕರಣದಲ್ಲಿ 'ಸಮಾಸಮಿಲ್ಲದ ಒಂದಕ್ಕರದ ದಿಟದ| ಹೆಸರನ್ನು ಉದಾಹರಿಸುವ 'ಪೂ' ಎಂಬುದಕ್ಕಾಗಿ ಪ್ರಯೋಗಿಸಿದೆ (ಸೂ. ೭೬)

ಪನಸು, ಹೂವಿಲ್ಲದೆ ಫಲವನ್ನು ಬಿಡುವುದೆಂಬ ವಾಕ್ಯವು ನೇಮಿಚಂದ್ರ.' ಅರ್ಧನೇಮಿ ಪುರಾಣದಲ್ಲಿ ಬಂದಿರುವ ಸಂದರ್ಭವನ್ನು ಇಲ್ಲಿ ಜ್ಞಾಪಿಸಿಕೊಳ್ಳಬೇಕು||

ಪೂವಂ ತೋಱದೆ ಪನಸು ಫ |
ಲಾವಳಿಯಂ ಪಡೆವ ತೆಱದೆ ಪಡೆಗಾತ್ಮಜರಂ ||
ತೀವಿದ ಬಸಿಱಂತೋಱದೆ
ದೇವಕಿಯೆಂದೊಸೆದು ಪರಸೆ ಕುಲದೇವತೆಗಳ್ ||
(ಅರ್ಧನೇಮಿ ಪುರಾಣ ಆಶ್ವಾಸ ೭, ಪ. ೨೭)

ಈ ಪದ್ಯಗಳಲ್ಲಿ ಯಾವುದು ಯಾವುದಕ್ಕೆ ಮೂಲವೆಂಬುದನ್ನು ಇನ್ನೂ ಕಾಣಬೇಕಾಗಿದೆ. ಋಕಾರಕ್ಕಾಗಿ ಕೊಟ್ಟ ಉದಾಹರಣೆ ಹೊಸ ಪ್ರತಿಯಲ್ಲಿ ಪೂರ್ತಿಯಾಗಿದೆ. ಇದು ಕಾವ್ಯಾವಲೋಕನದ ೧೭೭ನೆಯ ಪದ್ಯ. ೠಕಾರಕ್ಕೆ ಲಿಂಗಣಾರಾಧ್ಯನ ಪ್ರತಿಯಲ್ಲಿ ಲಲಿತಭ್ರ್ಯಾವೆಂದು ಕೊಟ್ಟ ಪಾಠ ಸರಿಯಲ್ಲ. 'ಭ್ರೂ' ಎಂಬುದು ಸ್ವರಯುಕ್ತವಾದ ಪದವಲ್ಲ; ಅಲ್ಲಿ ರೇಫೆಯಿರಬೇಕು.

ಕಿಟಲ್ ಅವರ ಪ್ರತಿ, ಸಾಹಿತ್ಯ ಪರಿಷತ್ಪ್ರತಿಗಳ ಪಾಠ– ಊಕಾರಕ್ಕೆ ಕೊಟ್ಟ ಉದಾಹರಣೆ–ಸರಿಯಾದ ಪಾಠವಾಗಿದೆ. ೠಕಾರಕ್ಕಾಗಿ ಬರಿಯ 'ೠವೆಂದಂ,' 'ೠವಿತ್ತಂ' ಎಂಬುವುಗಳು ಎಲ್ಲಾ ಪ್ರತಿಗಳಲ್ಲಿವೆ. ಹೊಸಪ್ರತಿಯಲ್ಲಿ ಹೆಚ್ಚಿನ ಪದ್ಯವಿದೆ.

ಪಾವಕ ವೃಷ್ಟಿಯನಾ ಪ್ರಿಯ |
ಗ್ಯಾವೊರ್ವ್ವಂ ಕಱೆಯೆ ಬೆಟ್ಟುಗೊಡೆವಿಡಿದಧಟಂ ||
ಗೋವಿನ ಪಿಂಡಂ ಗೋವರ |
ನೋವಿ ವಲಂ ಗೋಪನಾದನಂಬುಜನೇತ್ರೇ ||

ಓಕಾರ ಪ್ರಯೋಗಕ್ಕೆ, ' ಗೋವಿನ ಪಿಂಡಂ ' ಎಂಬ ಪದ್ಯವನ್ನು ಪೂರ್ತಿಯಾಗಿ ಕೊಟ್ಟಿದೆ.

ಌ ೡ ಗಳ ಪ್ರಯೋಗ ವಿಷಯವಾಗಿ ಯಾವ ಪ್ರತಿಯಲ್ಲಿಯೂ ಪ್ರಸ್ತಾಪವಿಲ್ಲ. ಹೊಸ ಪ್ರತಿಯಲ್ಲಿ ಈ ಕೆಳಗಿನಂತಿದೆ.

“ ಋವರ್ಣ ಸ್ವೀಕಾರಮುಂ ಸೂತ್ರಮೊಳ್ ಪೇಳ್ದುದಱಿಂ
ಌ ೡ ಎಂಬಕ್ಕರಂಗಳನನುಕರಿಸಿ ತೋಱುವಲ್ಲಿಯುಂ
ವತ್ವಮುಕ್ಕುಂ, ಌ ಇವಳೆಂಬಲ್ಲಿ ಌ ವಿವಳೆಂದಾದುದು. ೡ ಇವಳೆಂಬಲ್ಲಿಯುಮಂತೆ ”

ಶಬ್ದಾನುಶಾಸನದ ಕನ್ನಡದ ಟೀಕೆಯಲ್ಲಿ ಌಕಾರ ಸಂಧಿಯನ್ನು ಕುರಿತು ಹೀಗೆ ಹೇಳಿದೆ.

“ ದರ್ಪಣದಲ್ಲಿ ಌಕಾರವನ್ನು ಹೇಳದಿರುವುದರಿಂದ ಅವನ ( ಕೇಶಿರಾಜನ ) ಮತದಲ್ಲಿ ಌಕಾರಾಂತ ಶಬ್ದವು ಪ್ರಸಿದ್ಧವಾಗಿಲ್ಲವೆಂದು ತಿಳಿಯುವುದರಿಂದ ಈ ವಿಷಯದಲ್ಲಿ ಮಾತ್ರ ಭೇದವಿರುವುದೆಂದೆಣಿಸಬೇಕು ” ( ಕರ್ನಾಟಕ ಶಬ್ದಾನುಶಾಸನ ಪ್ರಕಾಶಿಕೆ ಪುಟ ೧೦೨)

ಹೀಗೆ ಹೇಳುವುದಕ್ಕೆ ಕಾರಣ ಲೇಖಕರಿಗೆ ಶಬ್ದಮಣಿದರ್ಪಣದ ಸರಿಯಾದ ಪ್ರತಿ ಕಣ್ಣಿಗೆ ಬೀಳದೆ ಇದ್ದುದು. ಹೊಸ ಪ್ರತಿಯಲ್ಲಿ ಕೇಶಿರಾಜನ ಇಂಗಿತವನ್ನು ಸರಿಯಾಗಿ ತಿಳಿದುಕೊಳ್ಳಬಹುದು. "ಋವರ್ಣ ಸ್ವೀಕಾರಮುಂ ಸೂತ್ರದೊಳ್ ಪೇಳ್ದುದಱಿಂ ೠ ೠ ಎಂಬಕ್ಕರಂಗಳನನುಕರಿಸಿ ತೋಱುವಲ್ಲಿಯುಂ ವತ್ವಮಕ್ಕುಂ" ಎಂದು ಹೇಳಿ ಉದಾಹರಣೆಯನ್ನೂ ಕೊಟ್ಟಿದೆ.

ಕನ್ನಡದಲ್ಲಿ ಯತ್ವ ವತ್ವಂಗಳ್ಗೆ ಬಹುಳತ್ವಮೆಂಬಲ್ಲಿ ಉದಾಹರಣ ಪದ್ಯಗಳಿವೆ.

ಸುತ್ತು + ಓಲೆ = ಸುತ್ತ್ರೋಲೆ, ಒತ್ತಿಟ್ಟು ಈ ಪದಗಳನ್ನುಳ್ಳ ಪೂರ್ಣ ಪದ್ಯಗಳು ಉದಾಹೃತವಾಗಿವೆ. ಸಂಸ್ಕೃತದಲ್ಲಿ ಯತ್ವವತ್ವಗಳು ನಿತ್ಯವೆಂಬುದಕ್ಕೆ:— 'ಸುರಕರಿಯಿಲ್ಲಿಯಲ್ಲದೆ ...,' 'ವಿಧುವಿಲ್ಲದಿರುಳ್' ಎಂಬ ಪದ್ಯಗಳು ಅನುಕ್ರಮವಾಗಿ ಬಂದಿವೆ. ೫೭ ನೆಯ ಸೂತ್ರ ವೃತ್ತಿಯ ತರುವಾಯ, 'ಮತ್ತಂ ಮತಾಂತರಂ' ಎಂದು ಕಾವ್ಯಾವಲೋಕನದ ಸೂತ್ರ ೧೦ ನ್ನು ಉದಾಹರಿಸಿದೆ. ಇಲ್ಲಿ ಕಾವ್ಯಾವಲೋಕನದ ಉದಾಹರಣ ಪದ್ಯಗಳು:— ೪೭, ೪೮, ೪೯, ೫೦ ರ ಪದ್ಯಭಾಗ, ೫೧, ೫೩, ೫೨. ಹೀಗೆ ಅಲ್ಲಿಯ ಎಲ್ಲಾ ಪದ್ಯಗಳು ಒಟ್ಟಿನಲ್ಲಿ (೭) ಉದ್ಧೃತವಾಗಿವೆ. ಪದ್ಯ ೫೦ ರ ಕೆಳಗೆ ಕಾವ್ಯಾವಲೋಕನದ ಅಡಿಟಿಪ್ಪಣಿಯಲ್ಲಿ ಕೊಟ್ಟ ಪದ್ಯವು ಇಲ್ಲಿ ಉದಾಹರಣ ಸ್ಥಾನದಲ್ಲಿದೆ.

ಒಂದೆರಡುಮೂಱುನಾಲ್ಕೆ |
ದೆಂದೆಣಿಸುತ್ತಾಗಳಂತೆ ನಡೆತಂದಿರ್ಪ್ಪ ||
ತ್ತ್ರೊಂದಾದೊಡಾಗಳೋ ಹೋ |
ಎಂದಂ ಗಡ ಪರಶುರಾಮನತಿಕುಪಿತಮನಂ ||

ಇದು ಪರಶುರಾಮನು ಕ್ಷತ್ರಿಯರನ್ನು ೨೧ ಸಲ ಸಂಹರಿಸಿದುದನ್ನು ಹೇಳುವ ಪದ್ಯ. ರನ್ನನು ಪರಶುರಾಮ ಚರಿತೆಯನ್ನು ಬರೆದಿರುವ ಸಂಗತಿ ಇದು ವರೆಗೆ ನಮಗೆ ತಿಳಿದಿದೆ. ಈ ಪದ್ಯವು ರನ್ನನ ಕೃತಿಯದಾಗಿ ಕಾಣುತ್ತದೆ.

ಪ್ಲುತ ವಿಸಂಧಿಗೆ:— ಹಿಂದೆ ಪ್ಲುತಕ್ಕಾಗಿ ಕೊಟ್ಟ ಪದ್ಯವು ಪುನಃ ಬಂದಿದೆ.

ಸೂತ್ರ ೫೭ರಕೆಳಗೆ ಮೆಚ್ಚಿಂಗೆ ಎಂಬಲ್ಲಿ ಹೊಸ ಪದ್ಯವೊಂದು ಉದಾಹೃತವಾಗಿದೆ.

ಓದೋದೋ ಅಃ ಮೆಚ್ಚಿದೆ |
ನಾದರದಿಂ ಸಫಲಮಕ್ಕುಮಾಕಲ್ತ್ರೋದಂ ||
ಭೇದಿಸಿ ತಿಳಿದೊಡೆ ಹೇಯೋ |
ಪಾದೇಯಂಗಳನದಲ್ಲದೋದವೆಕೀರಂ || ಎಂಬುದೇ ಆ ಪದ್ಯ.

ಸೂತ್ರ ೫೮ ರ ಕೆಳಗೆ 'ಪೊಱಗೊಳಗು' ಇತ್ಯಾದಿ ಪದಗಳ ಕೊನೆಯ ಅಕ್ಷರ ಲೋಪವಾಗಿ ಸಮಾಸದಲ್ಲಿ ಸ್ವರಪೂರ್ವ ಪದವಿದ್ದರೆ ಸಂಧಿಯಾಗದೆಂಬುದಕ್ಕೆ

ಕಾವ್ಯಾವಲೋಕನದ ಸಮಾಸಪ್ರಕರಣದಲ್ಲಿ ಉದಾಹೃತವಾದ ೨೪೩ ನೆಯ ಪದ್ಯ ವನ್ನು ಉದ್ಧರಿಸಿದೆ.

ಆ ಮೇಲೆ ಪ್ರಸಿದ್ಧವಾದ ೫೯, ೬೦ ಸೂತ್ರಗಳು ಬಂದಿವೆ. ಈ ಎರಡು ಸೂತ್ರಗಳ ವಿಷಯವಾಗಿ ಶ್ರೀಮಾನ್ ಪಂಚಮುಖಿಯವರು ವಿದ್ವತ್ಪೂರ್ಣವಾದ ಲೇಖನವನ್ನು ಸಾಹಿತ್ಯ ಪರಿಷತ್ಪತ್ರಿಕೆಯಲ್ಲಿ ಪ್ರಕಟಿಸಿದ್ದಾರೆ. ಆ ಲೇಖನದಲ್ಲಿ ಶ್ರೀ ಪಂಚಮುಖಿಯವರ ಸಂಶೋಧನವೈದುಷ್ಯವು ಚೆನ್ನಾಗಿ ಅಭಿವ್ಯಕ್ತವಾಗಿದೆ. ಪ್ರಾಚೀನ ಶಾಸನಗಳನ್ನೆಲ್ಲ ಆಲೋಡನ ಮಾಡಿ ವಿಷಯವನ್ನು ಪ್ರತಿಪಾದಿಸಿದ್ದಾರೆ. ಒತ್ತಕ್ಕರ, ರೇಫಯುಕ್ತಾಕ್ಷರಗಳು ಹ್ರಸ್ವಸ್ವರಾಂತಪದಗಳಿಗೆ ಪರವಾದಾಗ ಸಂಧಿ ಕಾರ್ಯವನ್ನು ಹೇಗೆ ನಿರ್ವಹಿಸಬೇಕೆಂಬಲ್ಲಿ ಕೇಶಿರಾಜನ ಅಭಿಮತವಾವುದೆಂಬುದು ಸಕಾರಣವಾಗಿ ಆ ಲೇಖನದಲ್ಲಿ ನಿರೂಪಿತವಾಗಿದೆ.

ಮೊದಲು ಇವೆರಡು ಸೂತ್ರಗಳನ್ನೂ, ಅವುಗಳ ವೃತ್ತಿಯನ್ನೂ ಹೊಸ ಪ್ರತಿ ಯಂತೆ ಇಲ್ಲಿ ಕೊಡಲಾಗಿದೆ.

ಪರಪದ ಪೂರ್ವ್ವಂದ್ವಿತ್ವಾ |
ಕ್ಷರವಾಗಿರೆ ಪೂರ್ವ್ವಪದದ ಚರಮಂ ಹ್ರಸ್ವಾ ||
ಕ್ಷರವಾಗೆ ಸಂಧಿದೋಷಂ |
ಸರೇಫಮಿದಿರಾಗೆ ಶಿಥಿಲಮೆಂದನುಕರಿಪರ್

(ಸಾ. ಪ. ಪ್ರ. ಸೂತ್ರ. ೫೯)

ವೃತ್ತಿ:—“ಮುಂದಣಪದದ ಮೊದಲಕ್ಕರಂ ದ್ವಿತ್ವವಾಗಿರೆ, ಪರಪದದ ಮೊದಲಕ್ಕರಂ ಲಘುವಾಗಿರೆ, (ಇಲ್ಲಿ ಪ್ರತಿಮಾಡುವವನು ತಪ್ಪು ಬರೆದಿದ್ದಾನೆ. ಇದು ಪೂರ್ವ ಪದದ ಕಡೆಯಕ್ಕರಂ ಲಘುವಾಗಿರೆ ಎಂದಿರಬೇಕು. ಶ್ರೀಮಾನ್ ಪಂಚಮುಖಿ ಯವರ ಲೇಖನದಲ್ಲಿಯೂ ಇದೇ ವಿಧವಾದ ತಪ್ಪು ಬಿದ್ದಿದೆ. ಅದು ಅಚ್ಚಿನ ದೋಷ ವಾಗಿರಬೇಕು) [ಪೂರ್ವ್ವ ಪದದ ಕಡೆಯಕ್ಕರಂ ಲಘುವಾಗಿರೆ] ಸಂಧಿದೋಷಮಕ್ಕುಂ. ಛಂದೋವಿಷಯದೊಳ್ ಪರಪದದ ಪೂರ್ವಾಕ್ಷರಂ ರೇಫವೆರಸಿದ್ದೊರ್ಡಂ ಶಿಥಿಲ ವಾಗಲಾಪ್ಪುರ್ದೆಂದು ಕೆಲಬರದನನುಕರಿಸುವರ್.”

ಸಂಧಿದೋಷಕ್ಕೆ ಪ್ರಯೋಗಂ ಎಂದು ಹೇಳಿ, ‘ಬರಿಸಿ ಪ್ರಧಾನರಂ’ ಎಂಬ ಪದ್ಯವನ್ನು ಉದಾಹರಿಸಲಾಗಿದೆ. ಇದರತರುವಾಯವೇ ‘ಕ್ಷಿತಿಪತಿಯಂಬರಿಸಿ’ ಎಂಬ ಕವಿರಾಜಮಾರ್ಗದ ೨ ನೆಯ ಪರಿಚ್ಛೇದದ ೮ ನೆಯ ಪದ್ಯ ಉದಾಹೃತವಾಗಿದೆ. ಆ ಮೇಲೆ ಸರೇಫಾದಿಗೆ ‘ಮಿಱುಗುತಿರ್ಪ’ ಮೊದಲಾದ ಪ್ರಯೋಗಗಳಿವೆ. ಮತಾಂತರ ಸೂತ್ರವೆಂದು ಹೇಳಿ ‘ನಿಲಿಸಿ ಲಘುಪದಮಂ’ ಎಂಬ ಕವಿರಾಜ ಮಾರ್ಗದ (ಪರಿ. ೨) ೬ನೆಯ ಪದ್ಯವನ್ನು ಉದ್ಧರಿಸಿದೆ.

೬೦ ನೆಯ ಸೂತ್ರ ಹೀಗಿದೆ. ಇಲ್ಲಿ ಪಾಠಾಂತರವನ್ನು ಗಮನಿಸಬೇಕು.

ಸೂತ್ರ ಬಗೆಯದೆ ಸತ್ತೃಣ **ವ್ಯವಹಾ** |
ರಿಗಳುಸಿರ್ವರ್ಗದ್ಯಕಾವ್ಯದೊಳ್ ನಿರ್ಬಂಧಂ ||
ಪುಗವೆಂದ**ರೋಚಿಕೆಗಳದ** |
ತೆಗಟಿಂದಾ ಗದ್ಯ ಪದ್ಯ ಕಾವ್ಯದೊಳಿಕ್ಕರ್ ||

ವೃತ್ತಿ:— ಸತ್ತೃಣವ್ಯವಹಾರಿಗಳ್ ಗದ್ಯಕಾವ್ಯದೊಳ್ ಛಂದೋನಿರ್ವಂದ ಮಿಲ್ಲೆಂದುರವಣಿಸಿ ಪೇಳ್ವರ್. ಅರೋಚಿಕೆಗಳದು ಕಷ್ಟ ಮೆಂದು ಗದ್ಯ ಪದ್ಯ ಕಾವ್ಯದೊಳ್ **ಸಂಧಿಯುಂ ಪುಗಿಸರ್**

ಲಿಂಗಣಾರಾಧ್ಯನ ಪ್ರತಿಯಲ್ಲಿಯೂ ಈ ಸೂತ್ರಕ್ಕೆ ವೃತ್ತಿಯಿದೆ. ಅಲ್ಲಿನ ಮೊದಲು ಸೂತ್ರದ (೬೧/೬೯) ವ್ಯಾಖ್ಯಾನದಿಂದ ಒಬ್ಬ ವ್ಯಾಖ್ಯಾನಕಾರನ ಹೆಸರೂ ಗೊತ್ತಾ ಗುತ್ತದೆ. ಆ ವ್ಯಾಖ್ಯಾನದ ಭಾಗವನ್ನು ಅಲ್ಲಿ ಉದ್ಧರಿಸಿರುವುದರಿಂದ ಆ ವ್ಯಾಖ್ಯಾನ ವನ್ನು ಬರೆದವನೂ, ಈ ಹೊಸ ಪ್ರತಿಯ ವ್ಯಾಖ್ಯಾನಕಾರನೂ ಒಬ್ಬನೇ ಎಂದು ಹೇಳು ವುದಕ್ಕಾಗದು. ಇಲ್ಲಿಯ ವ್ಯಾಖ್ಯಾನದಲ್ಲಿ, "ಸರೇಫಮಿದಿರಾಗೆ ದೋಷಂ" ಎಂಬ ಮಾತು ಇಲ್ಲದುದರಿಂದ ಈ ವ್ಯಾಖ್ಯಾನವು ತದ್ಭಿನ್ನವಾಗಿದೆ. ಎರಡನೆಯ ಸೂತ್ರದ ವೃತ್ತಿಯ ಕೊನೆಯಲ್ಲಿ ಲಿಂಗಣಾರಾಧ್ಯನು, " ಅದುವೆಂಬುದನದನೆಂದು ವಿಭಕ್ತಿ ಪರಿಣಾಮುಮಂ ಮಾಡಿಕೊಂಡನ್ವಯಂ" ಎಂದು ಹೇಳಿದ್ದಾನೆ. ಈ ಪ್ರತಿಯಲ್ಲಿ ಯಾದರೋ 'ಅದ' ಎಂಬ ಪದವೇ ಉಪಯೋಗವಾಗಿದೆ; ಅದು ಎಂಬ ಪದವಿಲ್ಲ. ಆದ್ದರಿಂದ 'ತೆಂಕನಾಡ'ವೆಂಬಂತೆ ದ್ವಿತೀಯಾರ್ಥವೆಂದು ಇದನ್ನು ಗ್ರಹಿಸಬೇಕು. ಲಿಂಗಣಾರಾಧ್ಯನ ಪ್ರತಿಯಲ್ಲಿ 'ಅರೋಚಿಕಿ' ಎಂದಿದೆ. ಈ ಪ್ರತಿಯಲ್ಲಿ 'ಅರೋ ಚಿಕೆ' ಎಂದಿದೆ.

ಕೇಶಿರಾಜನು ಈ ಎರಡು ಸೂತ್ರಗಳಲ್ಲಿ ಒಂದೇ ವಿಷಯವನ್ನು ಪ್ರತಿಪಾದಿಸಿ ದ್ದಾನೆ. ಮೊದಲನೆಯ ಸೂತ್ರದ ಮೂರು ಚರಣಗಳಲ್ಲಿ ಸಂಯುಕ್ತಾಕ್ಷರವನ್ನು ಹ್ರಸ್ವ ಸ್ವರಾಂತವಾದ ಶಬ್ದದೊಡನೆ ಸಂಧಿ ಮಾಡಕೂಡದೆಂಬುದನ್ನು ವಿಧಿಸಿದ್ದಾನೆ. ನಾಲ್ಕ ನೆಯ ಚರಣದಲ್ಲಿ ರೇಫೆವೆರಸಿದ ಅಕ್ಷರವನ್ನು ಶಿಥಿಲವೆಂದು ಭಾವಿಸಿ ಸಂಧಿಮಾಡುವರು, ಎಂದು ಹೇಳಿ, ಇಂಥ ಸಂಧಿಯೂ ಸಾಧುವಲ್ಲವೆಂಬುದನ್ನು ಎರಡನೆಯ ಸೂತ್ರದಲ್ಲಿ ಒತ್ತಿ ಹೇಳಿದ್ದಾನೆ. ಸಂಯುಕ್ತಾಕ್ಷರದಲ್ಲಿ ರೇಫೆವೆರಸಿದ ಅಕ್ಷರವು ಸೇರುವುದಾ ದರೂ ಕೆಲವರು ಅದನ್ನು ಶಿಥಿಲವಾಗಿ ಪರಿಗಣಿಸಿದ್ದರಿಂದ ಆ ವಿಷಯವನ್ನು ಸ್ಪಷ್ಟ ಮಾಡುವುದಕ್ಕಾಗಿ ಎರಡನೆಯ ಸೂತ್ರವನ್ನು ಕೇಶಿರಾಜನು ಬರೆದಿದ್ದಾನೆ. ಇದರಲ್ಲಿ ಕೇಶಿರಾಜನು ಕೆಲವರು, 'ಸರೇಫಮಿದಿರಾಗೆ ಶಿಥಿಲವೆಂದನುಕರಿಪರ್' ಎಂಬುದನ್ನು ಒಪ್ಪಿರುವಂತೆ ಕಾಣುವುದಿಲ್ಲ. ಪದ್ಯದಲ್ಲಿ ಸರೇಫಾಕ್ಷರವನ್ನು ಶಿಥಿಲವಾಗಿ ಪ್ರಯೋ ಗಿಸುವಂತೆ ಗದ್ಯದಲ್ಲಿಯೂ ಅದನ್ನು ಶಿಥಿಲವಾಗಿ ಭಾವಿಸಿ ಸಂಧಿ ಮಾಡಿ ಕೆಲವರು ಬರೆಯುತ್ತಿದ್ದುದನ್ನು ನೋಡಿ ಇವೆರಡನ್ನು ನಿರಾಕರಿಸುವುದಕ್ಕಾಗಿ ಎರಡನೆಯ ಸೂತ್ರವು ಪ್ರಸಕ್ತವಾಗಿದೆ. ಪದ್ಯವಾದರೇನು, ಗದ್ಯವಾದರೇನು, ಸಂಧಿ ನಿಯಮ

ಸಂಧಿ ನಿಯಮವೆ. ಪದ್ಯಕ್ಕೊಂದು ವ್ಯಾಕರಣ ಗದ್ಯಕ್ಕೊಂದು ವ್ಯಾಕರಣ ಎಂದು ಹೇಳುವುದುಂಟೆ? ಇದು ಸರಿಯಲ್ಲವೆಂದೇ ಕೇಶಿರಾಜನ ಮತ. ನೃಪತುಂಗನು ಇದು ಕೂಡದೆಂದು ಕೇಶಿರಾಜನಿಗೆ ನಾಲ್ಕು ಶತಮಾನಕ್ಕೆ ಹಿಂದೆಯೆ, 'ಕೂಸಿನ ತಲೆಯೊಳ್ ಬಿಣ್ಪೊಱೆಯನಿಟ್ಟವೊಲ್ ಅಸುಖಕರಂ' ಎಂಬ ಸೊಗಸಾದ ಮಾತಿನಿಂದ ತೆಗಳಿದ್ದನು. ಆ ನಿಯಮವನ್ನು ಕೆಲವು ಜನ ಕವಿಗಳು ಮಾತ್ರ ನಡೆಸಿಕೊಂಡು ಬಂದರು. ಅದು ಕೇಶಿರಾಜನ ಹೊತ್ತಿಗೆ ಬಹಳ ಪ್ರಚಾರವಾಗಿ ರೂಢಿಯೋ ಎನ್ನುವಂತೆ ಆಗಿ ಹೋಗಿತ್ತು. ನೃಪತುಂಗನ ಮಾರ್ಗದಲ್ಲಿ ಹೆಜ್ಜೆಯನ್ನಿಟ್ಟ ಕೇಶಿರಾಜನು ನೃಪತುಂಗನ ಮತವನ್ನು ಮತ್ತಷ್ಟು ದೃಢಪಡಿಸುವುದಕ್ಕಾಗಿ ಈ ಎರಡು ಸೂತ್ರಗಳನ್ನು ಬರೆದನು. ಮೊದಲಿನ ಸೂತ್ರದ ಕೆಳಗೆ ನೃಪತುಂಗನ ಕವಿರಾಜಮಾರ್ಗದಿಂದಲೇ ಉದಾಹರಣೆಗಳನ್ನು—ದೋಷಕ್ಕೊಂದು, ಗುಣಕ್ಕೊಂದು ಹೀಗೆ ಎರಡನ್ನು— ಎತ್ತಿಕೊಂಡಿರುವುದರಿಂದ ಈ ಅಂಶವು ಮತ್ತಷ್ಟು ಬಲಪಡುವುದು. ಆದರೆ ಕೇಶಿರಾಜನು ವಿಧಿಸಿದ ಎಷ್ಟೋ ನಿಯಮಗಳಿಗೆ ವಿರೋಧವಾಗಿ ಭಾಷೆ ಬೆಳೆಯುತ್ತ ಬಂದು ಗ್ರಂಥಸ್ಥವಾಗಿರುವಂತೆ ಈ ನಿಯಮವೂ ಶಾಶ್ವತವಾಗಿ ಉಳಿಯಲಿಲ್ಲ. ಅವನ ಕಾಲಕ್ಕಾಗಲೇ ಪ್ರಾಚೀನ ಸಂಪ್ರದಾಯವನ್ನು ಕೊಚ್ಚಿಕೊಂಡು ಹೋಗುವಂಥ ದೊಡ್ಡ ಪ್ರವಾಹವು ಉಕ್ಕೇರಿ ಪ್ರವಹಿಸುವುದಕ್ಕೆ ಆರಂಭವಾಗಿತ್ತು. ಕೇಶಿರಾಜನು ಅದನ್ನು ತಡೆಗಟ್ಟಲು ಒಡ್ಡಿದ ಯತ್ನವು ನಿಷ್ಫಲವಾದುದನ್ನು ನಡುಗನ್ನಡದಲ್ಲಿ ಹುಟ್ಟಿದ ಗ್ರಂಥಗಳಿಂದ ಕಾಣುತ್ತೇವೆ. ಸಂಯುಕ್ತಾಕ್ಷರವೂ, ರೇಫೆವೆರಸಿದ ಅಕ್ಕರವೂ, ಹ್ರಸ್ವಸ್ವರಾಂತ ಶಬ್ದಗಳೊಡನೆ ಯಥೇಚ್ಛವಾಗಿ ಸಂಧಿಯಾಗುತ್ತ ಬಂದುವು. ಸತೃಣ ವ್ಯವಹಾರಿಗಳ ಪ್ರಯೋಗವೆಂದು ಅಲ್ಲಗಳೆದದ್ದು, ಈಗ ಅರೋಚಿಕೆಗಳ ರುಚಿಗೂ ಪಾತ್ರವಾಯಿತು.

ಸೂತ್ರ ೬೧. ಕರೆಗತ್ತವದಿರ್ಗೆ ಅಲ್ ಆದೆ | ಎಂದು ಹೊಸ ಪ್ರತಿಯಲ್ಲಿ ಸಂಧಿ ಬಿಡಿಸಿ ಬರೆದಿರುವುದು ವಾಚಕರಿಗೆ ಸುಲಭಗ್ರಾಹ್ಯವಾಗಿದೆ. ಅಚ್ಚಾದ ಪ್ರತಿಗಳಲ್ಲಿ 'ಅಲ್ಲದೆ' ಎಂದು ಸಂಧಿಮಾಡಿ ಬರೆದಿರುವುದರಿಂದ ಅದು 'ಅಲ್ಲದೆ' ಎಂಬ ಒಂದೇ ಶಬ್ದವೆಂಬಂತೆ ಭ್ರಮೆಯಾಗುತ್ತದೆ.

ಸೂತ್ರ ೬೨ ರ ಕೆಳಗೆ ಅಸಹ್ಯೋಕ್ತಿಗಾಗಿ ಒಂದು ಹೆಚ್ಚಿನ ಪದ್ಯವಿದೆ. ಅದರಲ್ಲಿ ಅಸಹ್ಯೋಕ್ತಿಗಳಿರುವುದರಿಂದ ಅದನ್ನು ಇಲ್ಲಿ ಉದ್ಧರಿಸಿಲ್ಲ.

ಸೂತ್ರ ೬೩ ಎರಡು ರೇಫೆಗಳನ್ನು ಸಂಧಿಮಾಡಕೂಡದು ಎಂಬುದನ್ನು ಹೇಳುವುದು. 'ಬಂದರ್ ರಾಮರ್' ಎಂಬ ಪದ್ಯಪೂರ್ತಿಯಾಗಿ ಇದೆ.

ಬಂದರ್ರಾಮರ್ರೌದ್ರದೆ |
ನಿಂದರ್ರಾಕ್ಷಸರನೇಕವೀರರ್ರಾಯರ್ ||
ಕೊಂದರ್ರಾಘವನಾಳ್ಗಳ್ |
ಸಂದರವರ್ರಣದಿನೆಯ್ದೆ ಸಗ್ಗಹುರಕ್ಕಂ || ಇದರಲ್ಲಿ ಬರಿಯ

'ಬಂದರ್ರಾಮುರ್' ಎಂಬ ಸಂಧಿಯಾದ ಒಂದೇ ಪದವಿಲ್ಲ. ಒಟ್ಟಿಗೆ ೬ ಪದಗಳನ್ನು ಇದೇ ರೀತಿಯಲ್ಲಿ ಸಂಧಿಮಾಡಿದೆ. ವ್ಯಾಖ್ಯಾನಕಾರನು ಎಲ್ಲಿಂದಲೋ ಈ ಪದ್ಯವನ್ನು ಪ್ರಯಾಸಪಟ್ಟು ಹುಡುಕಿದ್ದಾನೆ. ಇಲ್ಲವೆ ಇವನಿಗೆ ಸಿಕ್ಕಿದ ಶಬ್ದಮಣಿದರ್ಪಣ ದಲ್ಲಿಯೇ ಈ ಪದ್ಯವಿದ್ದಿತೇನೋ ?

" ಮೂಪರ್ರಾಯರನೆ ಮಾಱುಪಂತೆಸೆದಿರ್ಕ್ಕುಂ " ಎಂಬ ಪ್ರಯೋಗವು ಈ ಪ್ರತಿಯಲ್ಲಿಲ್ಲ. ಇದನ್ನು ನನ್ನ ಮಿತ್ರರಾದ ಶ್ರೀಮಾನ್ ಡಿ. ಎಲ್. ನರಸಿಂಹಾ ಚಾರ್ಯರು ಸಿದ್ಧರಾಮೇಶ್ವರ ಪುರಾಣದ ಪೀಠಿಕೆಯಲ್ಲಿ, " ಹರಿಹರನ ಗಿರಿಜಾಕಲ್ಯಾ ಣದ ಪದ್ಯ " ವೆಂದು ಹೇಳಿದ್ದಾರೆ. ಈ ಉದಾಹರಣೆಯನ್ನು ಆ ಮೇಲೆ ಯಾರಾ ದರೂ ಸೇರಿಸಿರಬೇಕೇನೋ ?

## —: ವ್ಯಂಜನಸಂಧಿ: —

ಸೂತ್ರ ೬೫ರ ಕೆಳಗೆ ಕಾವ್ಯಾವಲೋಕನದ ೫ ಪದ್ಯಗಳು ಉದಾಹೃತವಾಗಿವೆ. ಇವೆಲ್ಲವೂ ವರ್ಗತೃತೀಯಾಕ್ಷರಕ್ಕೆ ಪ್ರಯೋಗವಾಗಿವೆ. ಬಹುಳಗ್ರಹಣಕ್ಕಾಗಿ ಕೊಟ್ಟ ಪದ್ಯವು ಕಾವ್ಯಾವಲೋಕನದ ಸಮಾಸಪ್ರಕರಣದಲ್ಲಿಯ ೨೪ನೆಯದು.

ಸೂ. ೬೭ರ ಕೆಳಗೆ ಕಾವ್ಯಾವಲೋಕನದಿಂದ ೬ ಪದ್ಯಗಳನ್ನು ಎತ್ತಿಕೊಂಡಿದೆ. ಇದರಲ್ಲಿ ಕೆಲವು ಸಮಾಸಪ್ರಕರಣಕ್ಕೆ ಸೇರಿವೆ.

ಸೂ. ೬೭ರ ಕೆಳಗೆ ' ಮತಾಂತರಂ ' ಎಂದು ಹೇಳಿ ಕಾವ್ಯಾವಲೋಕನದ ಸೂ. ೧೨ ಉದ್ಧೃತವಾಗಿ ಅಲ್ಲಿಯ ಉದಾಹರಣ ಪದ್ಯಗಳನ್ನೇ ಕೊಡಲಾಗಿದೆ. ೧೨ ಪದ್ಯಗಳನ್ನು ಸಂಧಿ, ಸಮಾಸ ಪ್ರಕರಣಗಳಿಂದ ತೆಗೆದುಕೊಂಡಿದೆ. ಇವಲ್ಲದೆ ಚೇರಮನನ್ನು ಪ್ರಸ್ತಾಪಿಸುವ ಪದ್ಯವೊಂದೂ, ಬೇರೆ ಎರಡು ಹೊಸ ಪದ್ಯಗಳೂ ಇವೆ.

ಸೂತ್ರ ೬೮. ಅಚ್ಚಾಗಿರುವ ಪ್ರತಿಗಳ ಪಾಠಗಳನ್ನಿತ್ತು ಕಾವ್ಯಾವಲೋಕನ ದಿಂದ ನಾಲ್ಕು ಪದ್ಯಗಳನ್ನು ಇಲ್ಲಿ ತೆಗೆದುಕೊಂಡಿದೆ. ಪ್ರತಿಷೇಧದಲ್ಲಿ ಒಂದು ಪದ್ಯ ಹೆಚ್ಚಿಗೆ ಇದೆ.

ಸೂ. ೬೯ಕ್ಕೆ ಮತಾಂತರವೆಂದು ಕಾವ್ಯಾವಲೋಕನದ ಸೂತ್ರ ೬೯ನ್ನು ಉದ್ಧ ರಿಸಿದೆ. ಅಲ್ಲಿಯ ನಾಲ್ಕು ಉದಾಹರಣ ಪದ್ಯಗಳನ್ನಲ್ಲದೆ (೪) ಹೊಸಪದ್ಯಗಳನ್ನೂ, ಬೇರೆ ಪದ್ಯಭಾಗಗಳನ್ನೂ, ಪ್ರಯೋಗಕ್ಕಾಗಿ ಉಪಯೋಗಿಸಿದೆ.

ಸೂ. ೭೦ ರ ಕೆಳಗೆ ಉದಾಹರಣ ಪದ್ಯವೊಂದೂ ಇಲ್ಲ. ಅಚ್ಚಿನ ಪ್ರತಿಗಳಲ್ಲಿ ರುವಂತೆ ಬಿಡಿಯಾದ ಪದಗಳನ್ನಷ್ಟೆ ಕೊಡಲಾಗಿದೆ. ಸಾಹಿತ್ಯಪರಿಷತ್ಪ್ರತಿಯಲ್ಲಿ, "ಸಮುಚ್ಚಯವಶದಿಂದೆಕಾರಾದಿಸ್ವರಂ ಪರಮಾದೊಡೆ ದ್ವಿತ್ವಮಿಲ್ಲ" ಎಂದು ಹೇಳಿ ಎನೆ, ಕೊಲೆ, ಉಣೆ ಎಂಬ ಪ್ರಯೋಗಗಳನ್ನು ಕೊಟ್ಟಿದೆ. ಲಿಂಗಣಾರಾಧ್ಯನ ಪ್ರತಿ ಯಲ್ಲಿ ಅದಕ್ಕೆ ಬದಲು 'ಇತರ ಸ್ವರಕ್ಕೆ' ಎಂದಿದೆ. ಉದಾಹರಣೆಯಲ್ಲಿ ಎನೆ, ಕೊಲೆ, ಇವೆರಡನ್ನು ಕೊಡಲಾಗಿದೆ. ಹೊಸ ಪ್ರತಿಯಲ್ಲಿ ಇದರ ಸ್ಪಷ್ಟೀಕರಣಮಾಡಿದೆ.

ಇತರ ಸ್ವರವೆಂದರೆ 'ಸತಿಸಪ್ತಮಿಯ ಎಕಾರಕ್ಕೆ'—'ತಿನೆಬಗೆದಂ,' 'ಉಣೆದಣಿದಂ,' 'ಕೊಲೆ ಪಟುದಂ,' 'ಕೊಳೆಕೊಟ್ಟಂ ವಸ್ತ್ರಮಂ,' ಎಂಬ ಪ್ರಯೋಗಗಳಿವೆ. ಅಚ್ಚಿನ ಪ್ರತಿಗಳಲ್ಲಿ 'ತಿನೆ, ಉಣೆ, ಕೊಲೆ, ಎನೆ,' ಎಂಬಿವುಗಳು ಸತಿಸಪ್ತಮಿಯವುಗಳಾಗಿದ್ದರೂ,ಇವುಗಳ ಸ್ಪಷ್ಟೀಕರಣವಿಲ್ಲ. ಇಲ್ಲಿ ಅದನ್ನು ಸ್ಪಷ್ಟಗೊಳಿಸಿ ವಾಕ್ಯಭಾಗಗಳನ್ನು ಕೊಟ್ಟಿದೆ.

೭೧ನೆಯ ಸೂತ್ರ ಸಂಧಿಪ್ರಕರಣಕ್ಕೆ ಕೊನೆಯದು. ಇದರಲ್ಲಿ ಪ್ರತಿಷೇಧಾರ್ಥದಲ್ಲಿ ನ್, ಣ್, ಯ್, ಳ್‌ಕಾರಗಳಿಗೆ ಆಖ್ಯಾತ ಪ್ರತ್ಯಯಗಳು ಪರವಾದರೆ ದ್ವಿತ್ವವಾಗುವ ವಿಷಯವನ್ನು ಹೇಳಿದೆ. 'ಅದೆ' ಎಂಬುದು ಪರವಾದರೂ ಹೀಗೆಯೇ. ಆದರೆ, 'ಕಳ್ ಧಾತುವಿಂಗೆಲ್ಲಿಯುಂ ದ್ವಿತ್ವಮಿಲ್ಲ' ವೆಂಬುದೇ ಈ ಸೂತ್ರಕ್ಕೆ ಅಪವಾದ. ಎಂದರೆ 'ಕಳದೆ ಬಂದಂ,' 'ಕಳಲ್‌ಪೋದಂ,' 'ಕಳಂ,' 'ಕಳವೆಂದುಂ,' ಎಂಬ ರೂಪಗಳಾಗುತ್ತವೆ ಎಂದರ್ಥ. ಇದಕ್ಕೆ ಮತಾಂತರ ಸೂತ್ರವೊಂದನ್ನುಹೊಸಪ್ರತಿಯಲ್ಲಿ ಹೇಳಿದೆ.

ಸೂ. ನೆಗಲ್ಗುಂ ದ್ವಿತ್ವಂ ಸ್ವರಮಿದಿ |
ರೊಗೆದಿರೆ, ಕಳ್‌ಧಾತುಗಂತೆ ನ, ಣ, ಲ, ಯ, ಳಂಗ||
ಳ್ಗೊಗೆ[ಗುಂ] ಸತಿಸಪ್ತಮಿಯೊಳ್ |
ನೆಗಟ್ಟಿಲೊಡಮೆಕಾರಪೃತ್ತಿಯುದಿರಿರೆ ಯುಗಲಂ ||

" ಕಳ್‌ಧಾತುಗೆ ಸ್ವರಮಿದಿರೊಗೆದಿರೆ ದ್ವಿತ್ವಂ ನೆಗಲ್ಗುಂ, ಅಂತೆನಣಲಯಳಂಗಳ್ಗೆ" ಎಂದು ಇದರಿಂದ ಅರ್ಥವಾಗುವುದು

ದ್ವಿತ್ವವಾಗುವ ಧಾತುಗಳ ಜೊತೆಗೆ 'ಕಳ್' ಧಾತುವನ್ನೂ ಸೇರಿಸಿದೆ. ಕಳ್ ಧಾತು ದ್ವಿತ್ವವಾಗಿ ಪ್ರಯೋಗವಾಗಿರುವುದನ್ನು ವಡ್ಡಾರಾಧನ,* ಪೊನ್ನನ ಶಾಂತಿಪುರಾಣ, ಪಂಪನಆದಿಪುರಾಣಗಳಲ್ಲಿ ಕಂಡಿದೆ ಈ ಸೂತ್ರವೂ ಅದನ್ನೇ ಪ್ರತಿಪಾದಿಸುತ್ತದೆ. ವ್ಯಾಖ್ಯಾನಕಾರನು ಕೇಶಿರಾಜನು ಹೇಳದೆ ಬಿಟ್ಟಿರುವುದನ್ನು ಮತಾಂತರ ಸೂತ್ರದಿಂದ ಸ್ಪಷ್ಟಗೊಳಿಸಿರುವುದು ಸಂದೇಹಕ್ಕೆಡೆಯಿಲ್ಲದಾಗಿದೆ. ಈ ಸೂತ್ರ ಕಾವ್ಯಾವಲೋಕನದಲ್ಲಿ ಇಲ್ಲ. ವ್ಯಾಖ್ಯಾನಕಾರನು ಬೇರೆ ಯಾವ ವ್ಯಾಕರಣದಿಂದ ಇದನ್ನು ಎತ್ತಿಕೊಂಡಿರುವನೋ ತಿಳಿಯದು.

## —: ನಾಮಪ್ರಕರಣ

ಈ ಪ್ರಕರಣದಲ್ಲಿ ಹೆಚ್ಚಿನ ಪಾಠಾಂತರಗಳಿಲ್ಲ. ಅನೇಕ ಕಡೆಗಳಲ್ಲಿ ಕಾವ್ಯಾವಲೋಕನದ ಪದ್ಯಗಳನ್ನು ಎತ್ತಿಕೊಂಡಿದೆ. ಮತಾಂತರ ಸೂತ್ರಗಳೆಂದು ಕಾವ್ಯಾವಲೋಕನದಿಂದ ಸೂತ್ರಗಳನ್ನು ಉದ್ಧರಿಸಿದೆ. ಕೆಲವು ಸೂತ್ರಗಳ ವೃತ್ತಿ ಸ್ಪಷ್ಟವಾದ

---

*ಕಳ್ದ. ವಡ್ಡಾರಾಧನೆ— ಸಾ. ಪ. ಪ್ರ. ಪಙ್ಕ್ತಿ ೨೦. ಪುಟ ೧೯೭. ಕಳ್ದುಹುದುತೆ ಪುಸಿಯದ. ಪೊನ್ನಶಾಂತಿಪುರಾಣ. ಆ. ೧. ಪದ್ಯ ೮೮.

ಕಳ್ದದ ಸತ್ಯದೊಳೊಂದದಾಗಳುಂ. ಪಂಪ. ಆದಿಪುರಾಣ— ಆ. ೬. ಪದ್ಯ. ೭.

ವಿವರಣೆಯೊಂದಿಗೆ ಬಂದಿದೆ. ಇಂಥ ಸಂದರ್ಭಗಳಲ್ಲಿಯೇ ಪಾಠಾಂತರಗಳು ಕಾಣುವುವು. ಇಲ್ಲಿ ಮುಖ್ಯವಾದ ಪಾಠಾಂತರಗಳನ್ನೂ ಕೆಲವು ನವೀನ ಪದ್ಯಗಳನ್ನೂ ಕೊಟ್ಟಿದೆ.

ಸೂತ್ರಾನುಪೂರ್ವಿಯಲ್ಲಿ ಒಂದೆಡೆ ಮಾತ್ರ ವ್ಯತ್ಯಾಸವಿದೆ. ಸಾ. ಪ. ಪ್ರತಿಯ ಸೂತ್ರ ೭೫ ಮೊದಲು ಬಂದಿದೆ; ೭೪ ಆಮೇಲೆ. ಲಿಂಗಣಾರಾಧ್ಯನ ಪ್ರತಿಯಲ್ಲಿಯೂ ಹೀಗೆಯೇ ಇದೆ.

ಸೂತ್ರ ೭೬ ರೂಢಾನ್ವರ್ಥ ಮುಂತಾದ ನಾಮ ಪ್ರಭೇದಗಳನ್ನು ಹೇಳುತ್ತದೆ. ಯಶೋಧರ ಚರಿತ್ರೆಯ 'ಬೇಡಿದ ಕಾಡೊಳ್ಮಲೆಯಾಯ್ತೀಡಾಡುವ........' ಎಂಬ ಪದ್ಯವು 'ಪೊಲನಂ' ಎಂಬ ಪ್ರಯೋಗಕ್ಕಾಗಿ ಉದಾಹೃತವಾಗಿದೆ.

ಸರ್ವನಾಮಂಗಳನ್ನು ಹೇಳುವ ೭೮ನೆಯ ಸೂತ್ರದಲ್ಲಿ 'ಪೆಱದು' ಎಂಬುದಕ್ಕೆ ಬದಲಾಗಿ 'ಪೆಱಗು' ಎಂಬುದನ್ನು ಸರ್ವನಾಮವೆಂದು ಹೇಳಿದೆ.

ಸೂತ್ರ ೭೯ರಲ್ಲಿ ಸರ್ವನಾಮದ ವಿಚಾರ ಪ್ರಸ್ತಾಪಿಸಲಾಗಿದೆ. ಇದಕ್ಕೆ ವೃತ್ತಿಯಿಲ್ಲ. ವೃತ್ತಿಸ್ಥಾನದಲ್ಲಿ ಬರಿಯ ಪ್ರಯೋಗಗಳನ್ನು ಕೊಟ್ಟಿದೆ.

ಸೂ. ೮೦ ಸಮಸಂಸ್ಕೃತವನ್ನು ಹೇಳುತ್ತದೆ. ಇದರ ವಿವರಣೆಯಲ್ಲಿ ವ್ಯಾಖ್ಯಾನಕಾರನು, "ಸಮಸಂಸ್ಕೃತ ಪದಂಗಳನಚ್ಚಗನ್ನಡದೊಳ್ ಬೆರಸಿ ನಡಸುವುದು" ಎಂದು ಹೇಳಿ ಕವಿರಾಜಮಾರ್ಗಪರಿಚ್ಛೇದ ೧ ಪದ್ಯ ೫೧–೫೨ನ್ನು ಉದ್ಧರಿಸಿದ್ದಾನೆ. ಈ ಎರಡು ಸೂತ್ರಗಳಿಗೂ ವೃತ್ತಿ ಇದೆ. ಕವಿರಾಜಮಾರ್ಗ ಪದ್ಯ ೫೨ ರಲ್ಲಿಯ ಪರುಷವೆಂಬ ಶಬ್ದಕ್ಕೆ– ನಿಷ್ಠುರಂ, ಪರುಷಂ, ಗ್ರಾಮ್ಯಂ ಎಂದು ಪರುಷ ಎಂಬ ಶಬ್ದಕ್ಕೆ ನಿಘಂಟು– ಎಂದು ಅರ್ಥವನ್ನು ಹೇಳಿದ್ದಾನೆ. ಇಲ್ಲಿ ಒಂದು ಹೊಸ ಕಂದ ಪದ್ಯವಿದೆ. ಅದರಲ್ಲಿ

ಅಹರಹರುಚ್ಚೈರ್ನೀಚೈ|
ರ್ಮುಹುರ್ಮುಹುರಿತ (ಸ್ತತಃ) ಪುನಃಪುನರಂತ||
ರ್ಬಹಿರಾವಿಃ ಪ್ರಾದುರ (ಹೋ) |
ಸಹಸಾದಿಗಳವ್ಯಯಂಗಳಸಹಾಯಂಗಳ್||

ಎಂದು ಅವ್ಯಯಗಳನ್ನೆಲ್ಲಾ ಕೊಟ್ಟಿದೆ. "ಈ ಪೇೞ್ದ ಸಂಸ್ಕೃತದಲ್ಲಿ ಕನ್ನಡ ವಿಭಕ್ತಿಯಂ ಪತ್ತಿಸಲಾಗದು" ಎಂದು ಹೇಳಿ ಕವಿರಾಜಮಾರ್ಗದ ಪರಿ. ೧ರ ೫೩, ೫೫ ಪದ್ಯಗಳನ್ನು ವ್ಯಾಖ್ಯಾನಕಾರನು ಕೊಟ್ಟಿದ್ದಾನೆ. ೫೩ನೆಯ ಪದ್ಯದ ದೋಷವನ್ನು ವಿವರಿಸುವ ರೀತಿ ತಿಳಿದುಕೊಳ್ಳತಕ್ಕುದಾಗಿದೆ.

ಬಹಿರಿತರಮುಪವನಂಗಳೊ|
ಳಹಹಹಮಾ ಪರಭೃತಂಗಳಳಿಯುರವಂಗಳ್||
ಸಹಸಂ ತಳವೆಳಗೊಳಿಸಿದ|
ವಹೋಮನಂಗಳನಿತಸ್ತತಂ ವಿರಹಿಗಳಾ||

ಇಲ್ಲಿ ಪಾಠಾಂತರವನ್ನು ಗಮನಿಸಬೇಕು. ಮೂಲದಲ್ಲಿ ಸಹಸಾ ಎಂಬಿದೆ, ಇಲ್ಲಿ, ಸಹಸಂ ಎಂದಿದೆ. ಇಲ್ಲಿ ಕನ್ನಡ ಪ್ರತ್ಯಯವಿರುವುದರಿಂದ ಅಪಪ್ರಯೋಗಕ್ಕಾಗಿ ಈ ಪಾಠವೇ ಸರಿಯಾಗಿದೆ.

ಇದಕ್ಕೆ ವ್ಯಾಖ್ಯಾನಕಾರನು "ಅಹರಹಸ್ಸೆಂಬವ್ಯಯಕ್ಕಂ, ಸಹಸಾ ಎಂಬವ್ಯಯಕ್ಕಂ, ಇತಸ್ತತಃ ಎಂಬವ್ಯಯಕ್ಕಂ ಕನ್ನಡ ವಿಭಕ್ತಿಯಂ ಪತ್ತಿಸಲಾಗದು. ಅದಱಿಂದೋಷಂ" ಎಂದು ದೋಷವೆಲ್ಲಿ ಎಂಬುದನ್ನು ಸೂಚಿಸಿದ್ದಾನೆ. ಗುಣಕ್ಕಾಗಿ ೫೫ ನೆಯ ಉದಾಹರಣಪದ್ಯವನ್ನು ಬರೆದು

'' ಕೇಶಿರಾಜನುಮಿವನೆ ನುಡಿವ ( ಶಬ್ದಂಗಳಂ ) ಭಾಗಾಂತರದಿಂ ಪೇೞ್ದಪಂ" ಎಂದು ಮುಂದೆ ಕೇಶಿರಾಜನು ಈ ಶಬ್ದಗಳನ್ನುಳ್ಳ ಸೂತ್ರಗಳನ್ನು ಹೇಳುವನೆಂದು ಸೂಚಿಸಿದ್ದಾನೆ.

ಈ ಸೂತ್ರದ ಕೆಳಗಿನ ವಿವರಣೆಯ ಪಾಠದಲ್ಲಿ ವ್ಯತ್ಯಾಸವಿರುವುದನ್ನು ಸ್ವಲ್ಪ ಆಲೋಚಿಸಬೇಕಾಗಿದೆ. ಕಿಟಲ್ ಅವರ ಪ್ರತಿ, ಸಾ. ಪ. ಪ್ರತಿ ಇವೆರಡರಲ್ಲಿ ಒಂದೇ ವಿಧವಾದ ಪಾಠವೂ ಉದಾಹರಣೆಗಳೂ ಇವೆ. '' ಆ ಸಮಸಂಸ್ಕೃತಂಗಳ ನಚ್ಚಗನ್ನಡದೊಳ್ ಬೆರಸಿ ಸಮಾಸಮುಂ ಮಾಡಲಾಗದು, ಅದರ್ಕುದಾಹಣೆ— ಮುಖತಾವರೆ, ಕಣ್ಕಮಲಂ—ಎಂಬಂತೆ" ಎಂಬುದರ ಜೊತೆಗೆ ನೃಪತುಂಗನ ಕವಿರಾಜಮಾರ್ಗದಿಂದ 'ಅರಸು ಕುಮಾರನ್' ಎಂಬ ಸುಪ್ರಸಿದ್ಧ ಪದ್ಯವನ್ನು ಮೇಲಿನ ಎರಡು ಪ್ರತಿಗಳಲ್ಲಿಯೂ ಕೊಡಲಾಗಿದೆ. ಲಿಂಗಣಾರಾಧ್ಯನ ಪ್ರತಿಯಲ್ಲಿ ಈ ಸೂತ್ರಕ್ಕೆ ವೃತ್ತಿಯೇ ಇಲ್ಲ. 'ಯಥಾನ್ವಯಂ' ಎಂದು ಮಾತ್ರಹೇಳಿದೆ. ಇದರಲ್ಲಿ ಸಮಸಂಸ್ಕೃತ ಕನ್ನಡ ಶಬ್ದಗಳ ಸಮಾಸದ ಪ್ರಸಕ್ತಿಯೂ ಇಲ್ಲ, ಉದಾಹರಣೆಯೂ ಇಲ್ಲ. ಹೊಸ ಪ್ರತಿಯಲ್ಲಾದರೊ, '' ಸಮಸಂಸ್ಕೃತಪದಂಗಳನಚ್ಚಗನ್ನಡದೊಳ್ಬೆರಸಿ ನಡಸುವುದು " ಎಂದು ಹೇಳಿದೆ. ಇದು ಅಚ್ಚಿನ ಪ್ರತಿಯ ಪಾಠಗಳಿಗೆ ತುಂಬಾ ವಿರೋಧವಾದ ಪಾಠವಾಗಿದೆ. 'ಅರಸು ಕುಮಾರನ್' ಎಂಬ ಪದ್ಯವನ್ನೂ ಉದಾಹರಿಸಿಲ್ಲ. ಅದಕ್ಕೆ ಪ್ರತಿಯಾಗಿ ಮೇಲಿನ ವಿವರಣೆಯ ಸಮರ್ಥನೆಗೆಂದು ಕವಿರಾಜಮಾರ್ಗದ ಪದ್ಯಗಳನ್ನು ಮತಾಂತರಕ್ಕಾಗಿ ಉದಾಹರಿಸಿದೆ. ಈ ಉದಾಹರಣೆಗಳಲ್ಲಿ 'ಅರಸು ಕುಮಾರನ್' ಎಂಬುದನ್ನು ಎತ್ತಿಕೊಂಡಿಲ್ಲ ನೃಪತುಂಗನು ಹೇಳುವ ಸಮಸಂಸ್ಕೃತ ವಿಷಯವಾದ ಪದ್ಯಗಳು ಇಲ್ಲಿ ಇವೆ. ಮೇಲಿನ ಅಚ್ಚಿನ ಪಾಠಗಳಿಂದ ಕೇಶಿರಾಜನ ಮತಕ್ಕೂ ನೃಪತುಂಗನ ಮತಕ್ಕೂ ವಿರೋಧವುಂಟಾಗುವುದು. ಈ ವಿರೋಧವು ಸಮಸಂಸ್ಕೃತ ಲಕ್ಷಣವನ್ನು ಹೇಳುವಲ್ಲಿ ಬಂದಂತಾಗುವುದು. ನಾಗವರ್ಮನು ಶಬ್ದಸ್ಮೃತಿಯಲ್ಲಿ ಸಮಸಂಸ್ಕೃತದ ಪ್ರಸ್ತಾಪವನ್ನೆತ್ತಿದ್ದಾನೆ. ಸೂತ್ರ ೬೩ ರಲ್ಲಿ, '' ಬೆರಸಿ ಸಮಸಂಸ್ಕೃತಂಗ | ಳ್ಬರೆ ಕನ್ನಡದೊಳಗೆ ಸಮತೆಯಿಂದಂ ಸಲ್ಗುಂ'' ಎಂದು ಕನ್ನಡ ಸಮಸಂಸ್ಕೃತಗಳ ಬೆರಕೆಯನ್ನು

ಒಪ್ಪಿಕೊಂಡಿದ್ದಾನೆ ಉದಾಹರಣೆಯಲ್ಲಿರುವ ಅರಸು ಗುಣಂ, ಪರವೆಣ್, ಅಲುಜನ ಎಂಬೀ ಸಮಸ್ತ ಪದಗಳಲ್ಲಿ ಒಂದು ಸಂಸ್ಕೃತ ಒಂದು ಕನ್ನಡ ಪದವಿದೆ. ಇದೇ ಸೂತ್ರದ ವಿವರಣೆಯಲ್ಲಿ "ಕೆಲತ್ತುರ್ರಗಾಸಿ ಶಬ್ದಂಗಳೊಳ್ ಸಮತೆಯನಿಚ್ಛೈಸು ವರವಕ್ಕೆರ್ ಲಕ್ಷ್ಯಂ" ಎಂದು ಹೇಳಿ 'ತುರಗದಲಿಂ, ಕೂರಸಿ,' ಎಂಬಿವುಗಳನ್ನು ಉಧಾಹರಿಸಿದ್ದಾನೆ. ತುರಗ, ಅಸಿಗಳು ಸಂಸ್ಕೃತ, ಎಂದರೆ ಸಮಸಂಸ್ಕೃತ, ದಲಿ, ಕೂರ್ ಶಬ್ದಗಳು ಕನ್ನಡ—ಬೆರೆತು ಸಮಾಸಪದಗಳಾಗಿವೆ. ಮಾಣಿಕ್ಯ ಭಂಡಾರ ವೆಂಬ ಸಮಾಸವು ವಿರುದ್ಧಕ್ಕಾಗಿ ಪ್ರಯೋಗವಾಗಿದೆ. ಇದರಲ್ಲಿ ಒಂದು ಸಂಸ್ಕೃತ ಮತ್ತೊಂದು ತದ್ಭವವಿದೆ. ಆದರೆ ಇನ್ನೂ ಈ ಸಮಸಂಸ್ಕೃತದ ಲಕ್ಷಣವು ಸರಿಯಾಗಿ ವ್ಯಕ್ತವಾಗಿಲ್ಲ. ನಾಗವರ್ಮನು ಭಾಷಾಭೂಷಣದಲ್ಲಿ ಇದನ್ನು ಸ್ಪಷ್ಟಗೊಳಿಸಿ ದ್ದಾನೆ. "ಸಮಸಂಸ್ಕೃತಂ ದೇಶೀಯಪದೇನ ಸಮಂ ಸಮಸ್ಯತೇ" (ಸೂ. ೧೩೨. ಭಾಷಾಭೂಷಣ) ಸಮ ಸಂಸ್ಕೃತವು ದೇಶೀಯ ಪದದೊಡನೆ ಸಮಾಸವಾಗುವುದು. ಇದರ ವೃತ್ತಿ ಹೀಗಿದೆ. "ಸಂಸ್ಕೃತ ಪದ ಸಮಂ ಯತ್ಪದಂ ತತ್ ಸಮ ಸಂಸ್ಕೃತಂ। ತದ್ದೇಶೀಯ ಪದೇನ ಸಮಂ ಸಮಸ್ಯತೇ." ಈ ವೃತ್ತಿಯಿಂದ ಸಮಸಂಸ್ಕೃತವೂ ಕನ್ನಡವೂ ಸಮಾಸವಾಗುವುವೆಂಬ ಮಾತು ಮತ್ತಷ್ಟು ಸ್ಫುಟವಾಗಿದೆ ಅಚ್ಚಿನ ಪ್ರತಿಗಳ ಪಾಠಕ್ಕೆ ಈ ಮಾತು ತುಂಬ ವಿರೋಧವಾಗಿದೆ. ನೃಪತುಂಗನೂ, ನಾಗವರ್ಮನೂ, ಸಮಸಂಸ್ಕೃತ ಪದಗಳು ಕನ್ನಡ ಪದಗಳೊಡನೆ ಸಮಾಸವಾಗುವುವೆಂದು ಹೇಳುವು ದನ್ನು, ಅವರ ಮಾರ್ಗವನ್ನು ಅನುಸರಿಸಿಕೊಂಡು ಬಂದ ಕೇಶಿರಾಜನು ವಿರೋಧಿ ಸುವನೇ? ವಿರೋಧಿಸಲಾರನೆಂಬುದು ಸ್ಪಷ್ಟವಾಗಿದೆ. ಅಲ್ಲದೆ 'ಅರಸು ಕುಮಾರನ್' ಇತ್ಯಾದಿ ಪದ್ಯವನ್ನು ನೃಪತುಂಗನು ಬೇರೆ ಸಂದರ್ಭಕ್ಕಾಗಿ ಉದಾಹರಿಸಿದ್ದಾನೆ. ಆದ್ದರಿಂದ ಅಚ್ಚಾದ ಪ್ರತಿಗಳಲ್ಲಿಯ ವಿವರಣೆ, ಪ್ರಯೋಗಗಳೆರಡೂ ಪ್ರಕ್ಷಿಪ್ತವಾಗಿರ ಬೇಕು. ಕೇಶಿರಾಜನು ಅವುಗಳನ್ನು ಆ ಸಂದರ್ಭದಲ್ಲಿ ಬರೆದಿರಲಾರನು. ಏಕೆಂದರೆ ಈ ಪದ್ಯಭಾಗವನ್ನು ಸಮಾಸ ಪ್ರಕರಣದಲ್ಲಿ ೧೭೪ನೆಯ ಸೂತ್ರಕ್ಕಾಗಿ ಪ್ರತ್ಯೇಕ ವಾಗಿ ಹೇಳಿದ್ದಾನಾದ್ದರಿಂದ ಇಲ್ಲಿ ಅದನ್ನು ಉದಾಹರಿಸುವುದು ಅಪ್ರಸ್ತುತವಾಗು ತ್ತದೆ. ಲಿಂಗಣಾರಾಧ್ಯನ ಪ್ರತಿಯಲ್ಲಿಯೂ, ಪ್ರಾಚೀನತಮವಾದ ಈ ಹೊಸ ಪ್ರತಿ ಯಲ್ಲಿಯೂ ಈ ವಿಧವಾದ ವಾಕ್ಯಗಳಿಲ್ಲವಾದ್ದರಿಂದ ಯಾರೋ ಅವುಗಳನ್ನು ಈ ಸಂದರ್ಭದಲ್ಲಿ ಆ ಮೇಲೆ ಬರೆದಿರಬೇಕೆಂಬುದು ಸ್ಪಷ್ಟವಾಗಿದೆ. ವ್ಯಾಖ್ಯಾನಕಾರನು ನಾಗವರ್ಮ ನೃಪತುಂಗರ ಅಭಿಪ್ರಾಯಕ್ಕೆ ವಿರೋಧವಾಗದಂತೆ ಬರೆದಿರುವ ವಿವರಣ ವಾಕ್ಯವೂ ಅವನಿಂದ ಉದಾಹೃತವಾದ ಪದ್ಯಗಳೂ ಸಮರ್ಪಕವಾಗಿರುವುವಲ್ಲದೆ ಸಮಯೋಚಿತವಾಗಿಯೂ ಇವೆ.

ಸೂತ್ರ ೮೨ ರ ಕೆಳಗೆ ಕಾವ್ಯಾವಲೋಕನದ ಸೂತ್ರ ೩೮ ಕ್ಕಾಗಿ ಉದಾಹರಿ ಸಿದ ೯ ಪದ್ಯಗಳನ್ನು ವ್ಯಾಖ್ಯಾನಕಾರನು ಉದ್ಧರಿಸಿದ್ದಾನೆ. ಮತಾಂತರ ಸೂತ್ರ ವೆಂದು ಆ ಸೂತ್ರವನ್ನು ಎತ್ತಿಕೊಂಡಿದ್ದಾನೆ. ಒಂದು ಹೊಸ ಪದ್ಯವಿದೆ.

ಏಕತ್ವಮನಱಿಪುವವೋ |
ಲಾಕೇಶವ ಪರಶುರಾಮುರಾಲಂಗಿಸಿ ಭಿ ||
ನ್ನಾಕೃತಿಗಳ್ ಕಾರ್ಯ್ಯಾರ್ಥಂ |
ಲೋಕಕ್ಕೆನೆ ಬೇರೆ ಬೇರೆ ಕುಳ್ಳಿದ್ದಾರ್ಗಳ್ || ಈ ಪದ್ಯದಲ್ಲಿ

ಪರಶುರಾಮನ ಪ್ರಸಕ್ತಿಯಿದೆ. ಇದು ರನ್ನನ ಪರಶುರಾಮ ಚರಿತ್ರೆಯ ಪದ್ಯವಿರಬಹುದೆ? ವ್ಯಾಖ್ಯಾನಕಾರನ ಕಾಲದಲ್ಲಿ ಈ ಗ್ರಂಥವು ಉಪಲಬ್ಧವಿದ್ದಿತೆಂದು ತೋರುವುದು. ಈ ಪದ್ಯವು ರಾಮಾಯಣದಲ್ಲಿ ಬರಲೂ ಅವಕಾಶವಿದೆ. ನಾಗಚಂದ್ರನ ರಾಮಾಯಣದಲ್ಲಿ ಇದು ಇಲ್ಲ.

ಸೂತ್ರ ೮೩ಕ್ಕೆ ಕಾವ್ಯಾವಲೋಕನದ ಸೂತ್ರ ೩೯ ಉದಾಹೃತವಾಗಿದೆ. ಮತಾಂತರದಲ್ಲಿ ಉದಾಹರಣೆಗಾಗಿ ಅಲ್ಲಿಯ ನಾಲ್ಕು ಪದ್ಯಗಳನ್ನು ತೆಗೆದುಕೊಂಡಿದೆ.

ಏಕಾಕ್ಷರಗಳಲ್ಲಿ ಗೌ, ನೌ, ಮೇ ಮುಂತಾದುವುಗಳು ಹೆಚ್ಚಿಗೆ ಬಂದಿವೆ. ಇವುಗಳು ಲಿಂಗಾಣಾರಾಧ್ಯನ ಪ್ರತಿಯಲ್ಲಿಯೂ ಇವೆ.

ಸೂತ್ರ ೮೪ರ ಕೆಳಗೆ ಕಾವ್ಯಾವಲೋಕನದ ೪೧,೪೨ ಸೂತ್ರಗಳೂ ಅಲ್ಲಿಯ ಉದಾಹರಣ ಪದ್ಯಗಳೂ ಉದ್ಧೃತವಾಗಿವೆ.

ಸೂತ್ರ ೮೭. ಈ ಸೂತ್ರಕ್ಕಾಗಿ ಕಾವ್ಯಾವಲೋಕನದ ೪೨ನೆಯ ಸೂತ್ರ ಮತಾಂತರಕ್ಕೆಂದು ಬಂದಿದೆ. ಅಲ್ಲಿಯ ೯ ಪ್ರಯೋಗೋದಾಹರಣಗಳಲ್ಲಿ ಕೊನೆಯದನ್ನು ಬಿಟ್ಟು (೮) ಪದ್ಯಗಳನ್ನು ಎತ್ತಿಕೊಂಡಿದೆ.

ಸೂ. ೮೮ರ ವೃತ್ತಿಗೂ ಪ್ರಯೋಗೋದಾಹರಣೆಗೂ ಅನುಕ್ರಮದಲ್ಲಿ ಅಚ್ಚಿನ ಪಾಠಗಳ ಪ್ರಕಾರ ವ್ಯತ್ಯಾಸವಿದೆ. ಹೊಸ ಪ್ರತಿಯಲ್ಲಿಯೂ ಲಿಂಗಣಾರಾಧ್ಯನ ಪ್ರತಿಯಲ್ಲಿಯೂ ಆನುಪೂರ್ವಿ ಸರಿಯಾಗಿದ್ದುದನ್ನು ಒಪ್ಪಬಹುದಾಗಿದೆ. ಅಚ್ಚಿನ ಪ್ರತಿಗಳಲ್ಲಿ ಅವ್ಯಯ ಲಿಂಗಗಳ ಕೆಳಗೆ ಕೊಟ್ಟ ಉದಾಹರಣೆಗಳಲ್ಲಿ 'ಸೋಡಂಬಾಡಂ' ಎಂಬುದಕ್ಕೆ 'ಬಱಿದು' ಎಂಬ ಅರ್ಥ ಕೊಟ್ಟಿದೆ. ಹೊಸ ಪ್ರತಿಯಲ್ಲಿ 'ಪಿರಿದು' ಎಂದಿದೆ. ಇದೇ ಪಾಠ ಸರಿ. ಏಕೆಂದರೆ ಮುಂದೆ ಕೇಶಿರಾಜನು ಅವ್ಯಯ ಪ್ರಕರಣದಲ್ಲಿ ಈ ಶಬ್ದಕ್ಕೆ ಅರ್ಥವನ್ನು ಕೊಟ್ಟಿದ್ದಾನೆ. ಸೂತ್ರ ೩೦೯ ರಲ್ಲಿ "ಪಿರಿದುವೆಂಬಭಿಪ್ರಾಯದಲ್ಲಿ ಸೋಡಂಬಾಡಂ" ಎಂದು ಹೇಳಿದ್ದಾನೆ. ಅಚ್ಚಿನ ಪಾಠಗಳಲ್ಲಿ ಬಱಿದು ಎಂಬುದು ತಪ್ಪು ಬಿದ್ದಿದೆ. ಲಿಂಗಣಾರಾಧ್ಯನ ಪ್ರತಿಯಲ್ಲಿ ಇದು ಇಲ್ಲವೇ ಇಲ್ಲ.

ಸೂತ್ರ (೯೩)ರ ಕೆಳಗೆ ಕಾವ್ಯಾವಲೋಕನದ ೧೫-೧೬ ಸೂತ್ರಗಳು ಮತಾಂತರಕ್ಕಾಗಿ ಉದಾಹೃತವಾಗಿವೆ.

ಸೂತ್ರ (೯೪)ರ ಕೆಳಗೆ ಔಚಿತ್ಯ ದ್ವಿವಚನದ ಪ್ರಯೋಗಗಳನ್ನು ಸ್ಪಷ್ಟಗೊಳಿಸಿದೆ. "ಕಲಿಗಳಿವರ್ ಭೀಮಾರ್ಜುನರ್, 'ರಾಮಲಕ್ಷ್ಮಣರ್,' ನಕುಲಸಹದೇವರೆಂಬುದುಚಿತಪ್ರಸಿದ್ಧಿಯಿಂ ದ್ವಿವಚನಮನಱಿಪುದು."

ಸೂತ್ರ (೯೫)ರ ಕೆಳಗೆ ಕಾವ್ಯಾವಲೋಕನದ ಪದ್ಯಗಳು ೮೯, ೭೩,೯೦, ೧೦೨ ಹೆಚ್ಚಿಗೆ ಉದಾಹೃತವಾಗಿವೆ ಮತಾಂತರಕ್ಕಾಗಿ ೯೭ನೆಯ ಸೂತ್ರವು ಬಂದಿದೆ.

ಸೂತ್ರ ೯೭ ಕ್ಕೆ ಕಾವ್ಯಾವಲೋಕನದ ಸೂತ್ರ ೧೮ ಮತಾಂತರದಲ್ಲಿ ಬಂದಿದೆ. ಇಲ್ಲಿಯು ೯೩, ೯೪ಪದ್ಯಗಳನ್ನೂ ಉದಾಹರಿಸಿದೆ.

ಸೂತ್ರ ೯೮ ರಲ್ಲಿ ಬಹುವಚನ ಪ್ರತ್ಯಯ ಪುಲ್ಲಿಂಗ ಮುಂತಾದುವುಗಳಿಗೆ ಅರ್ ಬರುವುದನ್ನು ಹೇಳಿದೆ. ಇಲ್ಲಿ ವಿಧಿಲೋಪವೆಂದು ಸೂತ್ರದಲ್ಲಿದೆ. ಅದಕ್ಕೆ "ಪುಲ್ಲಿಂಗವಪ್ಪದಂತಕ್ಕೆಲ್ಲಿಯುಂ ಲೋಪಂ" ಎಂಬ ಸಂಧಿನಿಯಮನ್ನು ಹೇಳಿದೆ. ಸೂತ್ರದಲ್ಲಿರುವ 'ವಿಧಿಲೋಪಂ' ಎಂಬುದಕ್ಕೆ 'ಅದಂತಕ್ಕೆಲ್ಲಿಯುಂ ಲೋಪಂ' ಎಂಬ ವಿವರಣವಾಕ್ಯದಿಂದ ಸಂಧಿಯ ಸಾಮಾನ್ಯ ನಿಯಮದಂತೆ ಪೂರ್ವ ಪದದ ಅಂತ್ಯದ ಸ್ವರ ಲೋಪವಾಗುವುದೆಂಬುದನ್ನು ಸೂಚಿಸಿದೆ.

ಸೂತ್ರ ೧೦೭ ತೃತೀಯಾ ವಿಭಕ್ತಿಯನ್ನು ಹೇಳುವುದು. ಸಾಹಿತ್ಯ ಪರಿಷತ್ತಿನ ಪ್ರಕಟನೆಯಲ್ಲಿ ಭಯದಿಂ ಮುಂತಾದ ಪದಗಳನ್ನು ಬಿಡಿಬಿಡಿಯಾಗಿ ಬರೆದಿದೆ. ಇದು ಕಾವ್ಯಾವಲೋಕನದ ೧೧೦ ನೆಯ ಪದ್ಯ. ಇದನ್ನೂ ೧೧೧ ನೆಯ ಪದ್ಯವನ್ನೂ ಹೊಸಪ್ರತಿಯಲ್ಲಿ ಕಾಣಬಹುದು.

ಇಲ್ಲಿ ನಾಲ್ಕು ಗರಿಗಳು ನಷ್ಟವಾಗಿವೆ.

ಸೂತ್ರ ೧೦೮. ಶಬ್ದಮಣಿದರ್ಪಣದ ೧೦೮ ನೆಯ ಸೂತ್ರದಲ್ಲಿ ಉಕಾರಾಂತ ಪದಗಳಿಗೆ ವಿಭಕ್ತಿಪ್ರತ್ಯಯಗಳು ಪರವಾದಾಗ 'ಇನ್' ಆಗಮ ಬರುವುದೆಂದು ಹೇಳಿ, 'ವ್ಯಂಜನದೊಳುಂಟು' ಎಂದು ಪ್ರಯೋಗದಲ್ಲಿ ಕಾಣಿಸಿದೆ. ಅದಕ್ಕೆ ಉದಾಹರಣೆ ಸೂಟಿನ ಎಂದು ಕೊಟ್ಟಿದೆ ಸೂಟ್ ಎಂಬುದು ವ್ಯಂಜನಾಂತ ಪದವೆಂದು ಕೇಶಿರಾಜನು ಭಾವಿಸಿ ಈ ಒಂದು ಶಬ್ದಕ್ಕಾಗಿ ಪ್ರತ್ಯೇಕವಾಗಿ ವ್ಯಂಜನಾಂತದಲ್ಲಿಯೂ ಇನ್ ಬರುವುದೆಂದು ಹೇಳಿದ್ದಾನೆ. ಇದಕ್ಕೆ ಕಾರಣ ಪ್ರಾಚೀನ ಕವಿ ಪ್ರಯೋಗವೇ. ಕೇಶಿರಾಜನ ಕಾಲಕ್ಕೆ ಆಗಲೇ ವ್ಯಂಜನಾಂತಗಳು ಉಕಾರವಾಗಿ ಪ್ರಯೋಗವಾಗುತ್ತಿದ್ದುವೆಂಬುದು ಅವನ ವ್ಯಾಕರಣದಿಂದ ತಿಳಿದು ಬರುತ್ತದೆ. ಮುಂದಿನ ಸೂತ್ರ ೧೦೯ ರಲ್ಲಿ ಪಗಲ್, ಇರುಳ್ ಎಂಬ ಶಬ್ದಗಳಲ್ಲಿ ಇನ್ ಆಗಮವು ವಿಕಲ್ಪವಾಗಿಯೂ, ಆಗಳ್, ಈಗಳ್ ಎಂಬಿವುಗಳಿಗೆ ನಿತ್ಯವಾಗಿಯೂ ಬರುತ್ತದೆಂದೂ, ಬೆಮರಿನ ಎಂಬ ಮುಂತಾದ ರೂಪಗಳು ದೋಷವೆಂದೂ ಹೇಳುತ್ತಾನೆಯಷ್ಟೆ. ಪಗಲ್, ಇರುಳ್, ಆಗಲ್, ಈಗಳ್ ಇವುಗಳನ್ನು ಪ್ರಾಚೀನ ಕವಿಗಳೇ ಉಕಾರದಂತೆ ಭಾವಿಸಿ ಇನಾಗಮಮಾಡಿಕೊಂಡು ಪ್ರಯೋಗಿಸುತ್ತಿದ್ದರು. ಬೆಮರಿನ ಮುಂತಾದ ರೂಪಗಳನ್ನು ಕೇಶಿರಾಜನು ತನ್ನ ಕಾಲದಲ್ಲಿ ಕಂಡಿದ್ದನು. ಮೊದಲಿನ

ವುಗಳು ಸಾಧುವಾದುವು, ಮತ್ತಿನವುಗಳು ಅವು ಕೇವಲ ಅರ್ವಾಚೀನವಾದುದ ರಿಂದ ಅಸಾಧುವಾದುವು. ಹೀಗೆಯೇ 'ಸೂಟಿನ' ಎಂಬ ರೂಪವಿರಬೇಕು. ಇದು ಅಕಾರಾಂತವಾಗಿಯೋ, ಉಕಾರಾಂತವಾಗಿಯೋ ೧೦ನೆಯ ಶತಮಾನದಲ್ಲಿ ಪ್ರಯೋಗವಾಗುತ್ತಿದ್ದಂತೆ ತೋರುತ್ತದೆ. ಪಂಪ ಭಾರತದ ಈ ಪ್ರಯೋಗವನ್ನು ಇಲ್ಲಿ ಗಮನಿಸಬೇಕು.

ತ್ರಿದಶೇಂದ್ರಂಗೆ ಯುಧಿಷ್ಠಿರಾಧ್ವರದ ಮಾಸಾಮರ್ಥ್ಯಮಂ ಸೂಟುಸೂ |
ಟದೆಪೇಟಲ್ ಪರಿವಂತೆ ಪೊಣ್ಮೆಸಲವುಂ ಧೂಮಂಗಳಾಹೋಮಧೂ |
ಮದ ಗಂಧಂ ನಸುಮುಟ್ಟೆ ದಿವ್ಯಮುಖಮಂ ಕೆಯ್ಕೊಂಡುಸಗ್ಗಕ್ಕೆ ಪಾ |
ಱಿದುವಾ ಪಾರಿವಜಕ್ಕವಕ್ಕಿಗಳದೇಂ ಪೆಂಪೋಮಹಾಯಜ್ಞದಾ ||
(ಪಂಪಭಾರತ ಆಶ್ವಾಸ ೬ ಪದ್ಯ ೩೮)

ಇಲ್ಲಿ 'ಸೂಟು' ಎಂದು ಉಕಾರಾಂತವಾಗಿ ಒಮ್ಮೆ ಬಂದಿದೆ. ಅದೇ ಮತ್ತೊಮ್ಮೆ 'ಸೂಟದೆ' ಎಂಬ ಅಕಾರಾಂತ ನಪುಂಸಕವಾಗಿದೆ. ಅದಕ್ಕೆ ಸೂತ್ರ ೧೦೭ರಂತೆ ಕ್ರಮದೆ, ನಯದೆ, ಭಯದೆ ಎಂಬಿವುಗಳ ಹಾಗೆ ತೃತೀಯಾವಿಭಕ್ತಿ ಪ್ರತ್ಯಯ 'ಎ'ಕಾರಾದೇಶವಾಗಿದೆ. ಪಂಪನು ಈ ಪದವನ್ನು ಉಕಾರಾಂತವಾಗಿಯೂ, ಅಕಾರಾಂತವಾಗಿಯೂ ಪ್ರಯೋಗಿಸಲು ಕಾರಣವೇನು? ಇಲ್ಲಿ ಪಾಠಾಂತರವೂ ಇಲ್ಲ. ಹೊಸ ಪ್ರತಿಯಲ್ಲಿ ಗರಿಗಳು ಹೋಗಿರುವುದರಿಂದ ಅಲ್ಲಿಯ ಪಾಠ ಗೊತ್ತಾಗುವುದಿಲ್ಲ.

ಸೂತ್ರ ೧೧೪ರ ವೃತ್ತಿ ಗಮನಾರ್ಹವಾಗಿದೆ. ಮುದ್ರಿತಪ್ರತಿಗಳ ವೃತ್ತಿ ಸಮರ್ಪಕವಾಗಿಲ್ಲವೆಂಬುದು ಹೊಸ ಪ್ರತಿಯ ವೃತ್ತಿಯನ್ನು ನೋಡುವುದರಿಂದ ಗೊತ್ತಾಗುವುದು.

ಅಮರ್ದಿರದು ತೃತೀಯತ್ವಂ |
ಸಮಾಸವದ್ಭಾವಮಾದ ತಾಣದೊಳಿಲ್ಲಂ ||
ಸಮಸಂದ ಚತುರ್ಥಿಗೆಕಾ |
ವ್ಯಮಾರ್ಗದೊಳ್ ಲಕ್ಷ್ಯಮುಂಟುತಾನೀತೆಱದಿಂ || (ಸೂ. ೧೧೪)

**ವೃತ್ತಿ:**—"ಸಮಾಸಮಿಲ್ಲದಲ್ಲಿಯುಂ, ಸಮಾಸ ಲಕ್ಷಣಮುಂಪೊಕ್ಕ ಚತುರ್ಥಿಗದಂತ ಮಲ್ಲದಲ್ಲಿಯುಂ ತೃತೀಯತೆಯಿಲ್ಲ. ಏತಱು ಎಂಬ ಱಕಾರಕ್ಕೆ 'ಱಸ್ಯರೇಫಃ' ಎಂಬ ಸೂತ್ರದಿಂ ರೇಫೆಯಾಗಿಏತಕ್ಕೆರ್ಂದಾಯ್ತು. ಸಮಾನವಿಧಿಯಿಂ ಡಕಾರಕ್ಕೆ ಟತ್ವ ಮಾದಂತಾಗಿ ಕೋಟಕ್ಕೆ, ನಾಟಕ್ಕೆ ಎಂದಾಯ್ತು."

ಈ ವೃತ್ತಿಗೂ ಅಚ್ಚಿನಪ್ರತಿಗಳ ವೃತ್ತಿಗೂ ಇರುವ ತಾರತಮ್ಯವನ್ನು ನೋಡಿದರೆ ವೃತ್ತಿ ವ್ಯತ್ಯಾಸಬಲದಿಂದ ಈ ವ್ಯಾಖ್ಯಾನಕಾರನು ಸ್ವತಂತ್ರವಾಗಿ ವೃತ್ತಿ ಬರೆಯಲು ಸಮರ್ಥನೆಂದು ಹೇಳಬೇಕಾಗುವುದು. ಕೇಶಿರಾಜನು ಈ ಪಾಠವನ್ನು ಬರೆದಿಲ್ಲವೆಂಬುದು ಸ್ಪಷ್ಟ. ಏಕೆಂದರೆ 'ಱಸ್ಯರೇಫಃ' ಎಂಬ ಸೂತ್ರವನ್ನು ನಾಗವರ್ಮನ ಭಾಷಾಭೂಷಣದಿಂದ ಕೇಶಿರಾಜನು ಉದ್ಧರಿಸಿರಲಾರನು. ಇದನ್ನು

ವ್ಯಾಖ್ಯಾನಕಾರನೇ ಬರೆದಿದ್ದಾನೆಂಬಲ್ಲಿ ಸಂಶಯವಿರದು. ವ್ಯಾಖ್ಯಾನಕಾರನು ಕಾವ್ಯಾವಲೋಕನವನ್ನೂ, ಭಾಷಾಭೂಷಣವನ್ನೂ ತನ್ನ ವ್ಯಾಖ್ಯಾನಕಾಲದಲ್ಲಿ ಉಪಯೋಗಿಸಿಕೊಂಡಿರುವನೆಂಬುದನ್ನು ಇದರಿಂದ ನಿರ್ಧರಿಸಬಹುದಾಗಿದೆ. ಭಾಷಾ ಭೂಷಣದ ಮುದ್ರಿತ ಪ್ರತಿಯಲ್ಲಿ 'ಅಕಾರಸ್ಯರೇಫಃ' ಎಂದು ಕೊಟ್ಟಿದೆ. ಇದು ಸರಿಯಾದ ಪಾಠವಾಗಿರಲಾರದು. ಏಕೆಂದರೆ ಸೂತ್ರಕಾರನು ಮಿತಾಕ್ಷರಗಳನ್ನು ಪಯೋಗಿಸುವುದು ವಾಡಿಕೆ. 'ಅಕಾರಸ್ಯ' ಎಂಬುದಕ್ಕೆ ಪ್ರತಿಯಾಗಿ 'ಅಸ್ಯ' ಎಂಬುದು ಸುಲಭವೂ ಸೂತ್ರಭಾಷೆಗೆ ಅನುಗುಣವೂ ಆಗಿದೆ. ಆದ್ದರಿಂದ ನಾಗ ವರ್ಮನು ಈ ಪಾಠವನ್ನೇ ಉಪಯೋಗಿಸಿರಬೇಕು. ಅಲ್ಲದೆ ಮುದ್ರಿತ ಪ್ರತಿಯ ಅಡಿ ಟಿಪ್ಪಣದಲ್ಲಿ 'ಅಸ್ಯ' ಎಂಬ ಪಾಠಭೇದವೇ ಇದೆ. ಈ ವ್ಯಾಖ್ಯಾನಕಾರನೂ ಅದೇ ಪಾಠವನ್ನು ಉಪಯೋಗಿಸಿರುವುದರಿಂದಲೂ, ಹೊಸ ಪ್ರತಿ ಬಹಳ ಪ್ರಾಚೀನ ಕಾಲದುದಾಗಿರುವರಿಂದಲೂ, 'ಅಸ್ಯರೇಫಃ' ಎಂಬ ಪಾಠವೇ ಸರಿಯೆಂದು ನಿರ್ಣಯಿಸಬಹುದಾಗಿದೆ.

ಇನ್ನು ಪ್ರಸ್ತುತ ಸೂತ್ರಕ್ಕೆ ಬರಬಹುದು. ಲಿಂಗಣಾರಾಧ್ಯನ ಸೂತ್ರ ಪಾಠವೂ ಅಲ್ಲಿಯ ವೃತ್ತಿಯೂ ಸಂಪಾದಕರುಗಳ ವಿವರಣೆಯೂ ಸಮಂಜಸವಾಗಿಲ್ಲ ವೆಂಬುದು ಮೇಲಿನ ಪಾಠಗಳಿಂದಲೂ, ಪ್ರತಿಯ ವ್ಯಾಖ್ಯಾನದಿಂದಲೂ ಸ್ಪಷ್ಟ ವಾಗಿದೆ. ಈ ಸೂತ್ರದಲ್ಲಿ ಚತುರ್ಥಿಯ ಪ್ರತ್ಯಯವಾದ 'ಕೆ'ಕಾರಕ್ಕೆ ಕೆಲವೆಡೆಗಳಲ್ಲಿ ತೃತೀಯತ್ವವಿಲ್ಲವೆಂಬುದನ್ನು ನಿರೂಪಿಸಿದೆ. ಹಿಂದಿನ ಸೂತ್ರದಲ್ಲಿ, 'ಕೆ'ಗೆ ಪ್ರತಿಯಾಗಿ 'ಗೆ' ಎಂಬುದು ಬಂದಿದೆ. ಪರಪದದ ಕಕಾರವು ಸಂಧಿಯಲ್ಲಿಯೂ ಸಮಾಸದಲ್ಲಿಯೂ ತೃತೀಯಾಕ್ಷರವಾಗುವುದಷ್ಟೆ. ಆ ವಿಧಿಯನ್ನು ಇಲ್ಲಿ ಅನುಸರಿಸ ಬಾರದೆಂದು ಕೇಶಿರಾಜನ ಮತ. 'ಏತಱು' ಎಂಬುದು ಹಿಂದಿನ ಸೂತ್ರದ ಪ್ರಯೋಗಶಬ್ದ. ಅಲ್ಲಿ ಏತರ್ಕೆ ಎಂದಾಗಿದೆ. ಅದನ್ನಿಲ್ಲಿ ಸ್ಪಷ್ಟಗೊಳಿಸಿದ್ದಾಗಿದೆ. ಹಾಗೆಯೇ ಕೋಟ್ಕೆ (ಕೋಡಿಗೆ), ನಾಟ್ಕೆ (ನಾಡಿಗೆ), ಇವುಗಳು ಸಮಾಸ ವಿಧಿಯಿಂದ ಡಕಾರಕ್ಕೆ ಟಕಾರವಾಗಿ ರೂಪಾಂತರವಾಗಿವೆ.

ಸೂತ್ರ ೧೧೬ರ ಕೆಳಗೆ ಕಾವ್ಯಾವಲೋಕನದ ಸೂತ್ರ ೩೬ನ್ನು ಮತಾಂತರ ಕ್ಕಾಗಿ ಕೊಟ್ಟಿದೆ.

ಇಲ್ಲಿ ಒಂದು ಓಲೆ ಕಳೆದುಹೋಗಿದೆ. ಮುಂದೆ ಸೂತ್ರ ೧೧೮ರ ವೃತ್ತಿಯಿಂದ ಆರಂಭವಾಗುತ್ತದೆ.

ಸೂತ್ರ. ೧೧೮. ಈ ಸೂತ್ರವು ಶಬ್ದಗಳ ಅಂತರಾಳದಲ್ಲಿನ ದೀರ್ಘದ ವಿಷಯ ವನ್ನು ಪ್ರತಿಪಾದಿಸುವುದು. ಹಿಂದಿನ ಸೂತ್ರದಲ್ಲಿ ಷಷ್ಠಿಯಲ್ಲಿ ದೀರ್ಘಬರುವ ಸಂಗತಿ ಯನ್ನು ಹೇಳಿದೆಯಷ್ಟೆ. ಇದೇ ಸೂತ್ರದ ಕೆಳಗೆ "ಪೋಲ್‌ಪರಮಾದಲ್ಲಿಯುಂ ದೀರ್ಘಮುಂಟು."—ಎಂದು 'ಈಂದಪುಲಿಯಾಪೋಲಿರ್ದಳೆಂ'ದು (ನೊಂದ ಪುಲ್ಲಿಯಾ ಪೋಲ್‌ಒಟಿರ್ದಳೆಂದು) ಗುಣವರ್ಮನ ಹರಿವಂಶಪ್ರಯೋಗಂ ಎಂದು

ಅಚ್ಚಿನ ಪ್ರತಿಗಳಪಾಠ. 'ಪುಲಿಯಾವ್ರೋಲ್' ಎಂಬಲ್ಲಿ ವಿಶೇಷವೇನೋ ತಿಳಿಯದು. ಷಷ್ಠಿಯ ಅಕಾರಕ್ಕೆಕೊನೆಯಲ್ಲಿ ದೀರ್ಘಬರುತ್ತದೆಎಂಬಂಶವನ್ನು ಕೇಶಿರಾಜನೇ ಹೇಳಿದ್ದಾನೆ. ಮಧ್ಯದಲ್ಲಿಯೂ ಷಷ್ಠಿಯ ಅಕಾರಕ್ಕೆ ದೀರ್ಘಬರುವುದನ್ನು ನಾವು ಪೂರ್ವ ಕವಿ ಪ್ರಯೋಗದಲ್ಲಿ ಕಾಣುತ್ತೇವೆ ಆದ್ದರಿಂದ ವಿಶೇಷವೇನೂ ಕಾಣುವುದಿಲ್ಲ. ಹೊಸ ಪ್ರತಿಯಪಾಠದಲ್ಲಿ "ವ್ರೊಲ್ಎಂಬ ಹ್ರಸ್ವಕ್ಕಂ ದೀರ್ಘಮುಂಟು" ಎಂದು ಹೇಳಿ 'ಗೋರಿದಪುಲ್ಲೆವ್ರೋಲಿರ್ದ್ದಳೆಂದು ಗುಣವರ್ಮನ ಹರಿವಂಶಪ್ರಯೋಗಂ' ಎಂದಿದೆ. ಇಲ್ಲಿ ಪುಲ್ಲೆಯಾ ಎಂಬ ಷಷ್ಠಿ ಇಲ್ಲ. ಅದಕ್ಕೆ ಬದಲಾಗಿ ಹ್ರಸ್ವವಾಗಿ ಪ್ರಯೋಗವಾಗುತ್ತಿರುವ 'ವ್ರೊಲ್' ಎಂಬುದು ವ್ರೋಲ್ಆಗುತ್ತದೆಂಬುದನ್ನು ಉದಾಹರಿಸಿರುವಂತಿದೆ. ಇದು ಅಂತರಾಳದಲ್ಲಿ ಬರುವ ದೀರ್ಘ. ಆದರೆ ಕೇಶಿರಾಜನು ತದ್ಧಿತಪ್ರಕರಣದ ಸೂತ್ರ ೨೧೪ರಲ್ಲಿ ವ್ರೊಲ್, ವ್ರೋಲ್ ಈ ಎರಡೂ ರೂಪಗಳನ್ನು ಕೊಟ್ಟಿದ್ದಾನೆ. ಆದ್ದರಿಂದ ಇದರ ಔಚಿತ್ಯವು ಇಲ್ಲಿಯೂ ಸಂಶಯಾಸ್ಪದವಾಗಿದೆ.

ಸೂತ್ರ ೧೯೯ ಸಪ್ತಮಿಾ ವಿಭಕ್ತಿಯನ್ನು ಹೇಳುವುದು. ಇಲ್ಲಿ ಒಳಗೆ ಕೆಳಗೆ ಎಂಬುವುಗಳಿಗೆ ಕೊಟ್ಟಿರುವ ಉದಾಹರಣಪದ್ಯವು ಅಚ್ಚಿನ ಪ್ರತಿಗಳಲ್ಲಿ ಉತ್ತರಾರ್ಧವಾಗಿದೆ. ಈ ಪದ್ಯ ಕಾವ್ಯಾವಲೋಕನದಲ್ಲಿಲ್ಲ. ಅದು ಇಲ್ಲಿ ಪೂರ್ತಿಯಾಗಿ ಇದೆ. ಸ್ವಾರಸ್ಯವಾಗಿರುವುದರಿಂದ ಅದನ್ನಿಲ್ಲಿ ಕೊಡಲಾಗಿದೆ.

ಕವಿಗಮುಕಿವಾಗ್ಮಿಗ |
ಳವನೀಶನ ಸಭೆಗೆ ಯೋಗ್ಯರಲ್ಲದೆ ಮತ್ತಾ ||
ಕವಿ ಪೊಱಗಿರೆ ಕೀಟಕೊಳಗಿರೆ |

ಯುವರಳಮೋ ತುರಗ ಮುಖಮೊ ನೃಪಮುಂದಿರಮೋ ||

ಸೂತ್ರ ೧೨೧ರಲ್ಲಿ 'ಅಲ್' ಎಂಬುದು ಪ್ರಥಮೆ, ದ್ವಿತೀಯೆ, ಸಪ್ತಮಿಗಳಲ್ಲಿ ಬರುವುದೆಂದು ಹೇಳಿದೆ. **ಮೂಡಲ್** (ಪ್ರ) **ಮೂಡಲ್** (ದ್ವಿ), ಮೂಡಣಿಂ, (ತೃ) ಮೂಡಣ್ಗೆ (ಚ), ಮೂಡಣತ್ತಣಿಂ (ಪಂ), ಮೂಡಣ (ಷ), **ಮೂಡಲ್** (ಸ). ಒಬ್ಬ ಕವಿ ಈ 'ಮೂಡಲ್' ಎಂಬ ಒಂದೇ ರೂಪವನ್ನು ಪ್ರಥಮಾ, ದ್ವಿತೀಯಾ, ಸಪ್ತಮಿಾ ವಿಭಕ್ತಿಗಳಲ್ಲಿ ಚಮತ್ಕಾರವಾಗಿ ಉಪಯೋಗಿಸಿರುವ ಪದ್ಯವು ಇದರಲ್ಲಿದೆ.

(ಪ್ರ) ಮೂಡಲ್ ನಸುರಾಗಿಸುತಿರೆ |
(ದ್ವಿ) ಮೂಡಲ್ ಪ್ರೇಕ್ಷಿಸುತೆ ಕೂಗೆ ಕುಕ್ಕುಟನಿಕರಂ ||
(ಸ) ಮೂಡಲ್ ಮೂಡುತೆ ತಮದೊಡ |
ನೋಡಿಸಿದಂ ಚಕ್ರವಾಕದಟಲಂ ದಿನಪಂ ||

ಈ ಪ್ರತಿಯಲ್ಲಿ ಕಿಟಲ್ ಪ್ರತಿಯ ಸೂತ್ರ ೧೨೨ A, ಸಾಹಿತ್ಯ ಪರಿಷತ್ ಪ್ರತಿಯ ಸೂತ್ರ ೧೨೧ ಆದ ಮೇಲಿನ ನಕ್ಷತ್ರವಿರುವ ಸೂತ್ರ ಇಲ್ಲ ಇದು ಅನಾವಶ್ಯಕವೆಂದು ಕಾಣುವುದು. ಕನ್ನಡದಲ್ಲಿರುವ ನವವಿಧ ಲಿಂಗಗಳನ್ನು ಹೇಳುವ ಪ್ರಸಂಗದಲ್ಲಿ

ಇವುಗಳ ಪ್ರಸಕ್ತಿ ಬಂದಿರುವುದರಿಂದೆ ಕೇಶಿರಾಜನು ಇದಕ್ಕಾಗಿ ಮತ್ತೊಂದು ಸೂತ್ರ ವನ್ನು ಬರೆದಿರಲಾರನು. ಅದು ಪ್ರಕ್ಷಿಪ್ತವಾಗಿರಬೇಕು.

ಸೂತ್ರ ೧೨೩. ಸಂಬೋಧನೆಯನ್ನು ಕುರಿತದ್ದು. ಇಲ್ಲಿ ಕಾವ್ಯಾವಲೋಕನದ ಪದ್ಯಗಳು ೧೨೭, ೧೩೨, ೧೩೩ ಮತ್ತು ಮತಾಂತರವೆಂದು ಸೂತ್ರ ೩೦ ಉದ್ಧೃತ ವಾಗಿವೆ.

ಸೂ ೧೨೪ ರ ಪಾಠ ಹೊಸ ಪ್ರತಿಯಲ್ಲಿ ವ್ಯತ್ಯಸ್ತವಾಗಿದೆ. ಸಾ. ಪ. ಪ್ರತಿಯ ಪಾಠ, ಕಿಟಲ್ ಅವರ ಪ್ರತಿಯ ಸೂತ್ರ ಪಾಠಗಳಿಗೂ ಅಲ್ಲಿಯ ವೃತ್ತಿಯ ಪಾಠಗಳಿಗೂ ವಿರೋಧವುಂಟಾಗಿದೆ. ಅದನ್ನು ಈ ಸೂತ್ರವು ದೂರ ಮಾಡುವುದು.

ಸೂ. ಅವಿಶೇಷದಿಂದದಂತ |
ಕ್ಕೆವರ್ಣವೊದವುವುದೆವರ್ಣಮೊದವಿದದಂತ || ಇತ್ಯಾದಿ
(ಸೂ. ೧೨೪)

ಅದಂತವಾದ ಪದಗಳಿಗೆ ಸಂಬೋಧನೆಯಲ್ಲಿ ಅವಿಶೇಷವಾಗಿ ಎ, ಏಗಳು ಬರುವು ವೆಂದು ಇದರ ಅರ್ಥ. ವೃತ್ತಿಯಲ್ಲಿ "ಲಿಂಗತ್ರಯಮೆನ್ನದೆ ವಚನತ್ರಯಮೆನ್ನದೆ ಸ್ವರಾಂತ ವ್ಯಂಜನಾಂತಂಗಳೆನ್ನದೆ ಸಾಮಾನ್ಯದಿಂ ಸಂಬೋಧನೆಯ ಕಡೆಯೊಳ್ ಎ, ಏ, ಎಂಬಿವಕ್ಕುಂ" ಎಂದಿದೆ. ಸೂತ್ರದಲ್ಲಿ "ಅದಂತಕ್ಕೆ" ಅವಿಶೇಷದಿಂದೆ ಎ ವರ್ಣ ಬರುವುದೆಂದಿದೆ ವೃತ್ತಿಯಲ್ಲಿ 'ಸ್ವರಾಂತ ವ್ಯಂಜನಾಂತಂಗಳೆನ್ನದೆ' ಎಂದಿದೆ. ಇದು ಪರಸ್ಪರ ವಿರುದ್ಧವಾಗುವುದು. ಲಿಂಗಣಾರಾಧ್ಯನ ಪ್ರತಿಯಲ್ಲಿಯೂ, ಕಿಟಲ್ ಅವರ ಪ್ರತಿಯಲ್ಲಿಯೂ, ಇದೇ ಸೂತ್ರ ಪಾಠ, ವೃತ್ತಿಗಳಿವೆ. ಸೂತ್ರ ಸರಿ ಯಾಗಿಲ್ಲವೆಂದು ಇದರಿಂದ ಗೊತ್ತಾಗುವುದು. ಹೊಸಪ್ರತಿಯ ಪಾಠ ಹೀಗಿದೆ.

ಅವಿಶೇಷದೆ ಲಿಂಗಾಂತ್ಯ |
ಕ್ಕೆವರ್ಣವೊದವುವುದೆವರ್ಣಮೊದವಿದದಂತ || ಇತ್ಯಾದಿ.

ಇಲ್ಲಿ ಲಿಂಗಾಂತ್ಯಕ್ಕೆ ಎಂದಿಷ್ಟೇ ಇದೆ. ಅದು ಸ್ವರಾಂತವಾಗಿರಬಹುದು, ವ್ಯಂಜನಾಂತವಾಗಿರಬಹುದು. ಇದರಿಂದ, ಮೇಲಿನ ಸಾಹಿತ್ಯ ಪರಿಷತ್ಪ್ರತಿಯ ವೃತ್ತಿಯ, 'ಸ್ವರಾಂತ ವ್ಯಂಜನಾಂತಂಗಳೆನ್ನದೆ' ಎಂಬುದಕ್ಕೂ ಇಲ್ಲಿಯ ಸೂತ್ರ ಪಾಠಕ್ಕೂ ಏಕವಾಕ್ಯತೆಯಾಗುವುದು.

ಸೂತ್ರ ೧೩೭ ರ ಕೆಳಗೆ "ಜಾತಿಯಲ್ಲದಲ್ಲಿಯುಂ ಬಹುವಚನಕ್ಕೇಕವಚನಂ ವಿಶೇಷಣಮಾಗಿ ಪೊಕ್ಕು ಬಹುವಚನಮನೇ ಪೇಳ್ವುದು" ಎಂಬುದಕ್ಕೆ ಈ ಕೆಳಗಿನ ಪದ್ಯವನ್ನು ಪೂರ್ತಿಯಾಗಿ ಕೊಡಲಾಗಿದೆ.

ಅಮರೇಂದ್ರೋನ್ನತಿಖೇಚರೇಂದ್ರ ವಿಭವಂ ಭೋಗೀಂದ್ರ ಭೋಗಂ ಮಹೀಂ|
ದ್ರಮುಖ್ಯೈಶ್ವರ್ಯಮಿವೆಲ್ಲ ಮಧ್ರುವಮಿದಂ ಬೇಳ್ಪಂತು ಬೇಳಲ್ಲನು |
ತ್ತಮದೀಕ್ಷಾವಿಧಿಯಿಂ ಸಮಾಧಿಕರಣಂ ಕರ್ಮಕ್ಷಯಂ ಬೋಧಿಲಾ|
ಭಮಮೋಘಂ ದೊರೆಕೊಳ್ವುದಕ್ಕೆಮಗೆ ಮುಕ್ತಿಶ್ರೀ ಮನೋವಲ್ಲಭಾ ||

ಸೂತ್ರ ೧೩೯ ರ ಕೆಳಗೆ ಕವಿರಾಜಮಾರ್ಗದ ಪ್ರಥಮ ಪರಿಚ್ಛೇದದಿಂದ ೧೧೭, ೧೧೮, ೧೧೯ ಪದ್ಯಗಳು ಉದಾಹೃತವಾಗಿವೆ.

ಸೂ. ೧೪೦ ರ ವೃತ್ತಿಪ್ರಯೋಗದ ಅರ್ಥಕ್ಕೆ ಗ್ರಂಥದಲ್ಲಿ (೯) ಓಲೆಗಳು ಕಳೆದು ಹೋಗಿರುವುದರಿಂದ ಅತ್ಯಂತ ಮುಖ್ಯವಾದ ಭಾಗವು ನಷ್ಟವಾಗಿದೆ.

## —:ಸಮಾಸ ಪ್ರಕರಣ:—

ಸೂತ್ರ ೧೬೩ ರ ಕೆಳಗೆ ಆದೇಶಕ್ಕಾಗಿ ಕಾವ್ಯಾವಲೋಕನದ ಪದ್ಯ ೧೫೦ ನ್ನು ಹೆಚ್ಚಿಗೆ ಸೇರಿಸಿದೆ. ಆಗಮ, ಲೋಪ, ಆದೇಶಗಳನ್ನು ಉದಾಹರಣಾ ಪದ್ಯಗಳಿಂದ ವಿವರಿಸಿದ ಮೇಲೆ **ವ್ಯಾಮಿಶ್ರ** ಎಂಬುದನ್ನು ಹೆಚ್ಚಿಗೆ ಸೇರಿಸಿ ಅದರ ಕೆಳಗೆ ಈ ಪದ್ಯ ವನ್ನು ಉದಾಹರಿಸಿದೆ.

**ವ್ಯಾಮಿಶ್ರಕ್ಕೆ:— ಮಾತಿನ ಮೇರೆಗೆ ತೆಂಕಣ |**
**ವಾತಂ ಸುಳಿವನಿತಱೊಳಗೆ ಚೆಲ್ವಿಂದಂಭೋ |**
**ಜಾತಾಕ್ಷಿ ತೆಂಕಗಡೆಯಿಂ |**
**ದೋತಂಗಜನರಸಿಯಿಮ್ಮಡಿಯಿನೆಱ್ತಂದಳ್ ||**

ಸೂತ್ರ ೧೬೪ ರ ಕೆಳಗೆ ಕಾವ್ಯಾವಲೋಕನದ ಪದ್ಯಗಳು ೨೦೫, ೨೦೬, ೨೦೭, ಹೆಚ್ಚಿಗೆ ಉದಾಹೃತವಾಗಿವೆ.

ಸೂತ್ರ ೧೬೫, ಬಹುವ್ರೀಹಿ, ದ್ವಂದ್ವ, ಅವ್ಯಯೀಭಾವ ಸಮಾಸಗಳನ್ನು ತಿಳಿಸು ತ್ತದೆ. ಬಹುವ್ರೀಹಿಯ ಲಕ್ಷಣ ಸಾಹಿತ್ಯ ಪರಿಷತ್ಪ್ರತಿಯಲ್ಲಿಯೂ ಇಲ್ಲಿಯೂ ಒಂದೇ.

ಸೂತ್ರ ಪದನೆರಡುಂ ಮೇಣ್ ಪಲವುಂ |
ಪದಾರ್ಥಮಂ ಬಯಸುತಿರೆ ಬಹುವ್ರೀಹಿ||

ಆದರೆ ಇಲ್ಲಿಯ ವೃತ್ತಿಯ "ಎರಡು ಪದಂ ಮೇಣ್ ಪಲವು ಪದಂ ಮೇಣ್ ಅನ್ಯ ಪದಾರ್ಥಮಂ ಬಯಸೆ ಬಹುವ್ರೀಹಿಯಕ್ಕುಂ" ಎಂಬ ಪಾಠದಲ್ಲಿ ಮೇಣ್, ಮೇಣ್ ಎಂದು ಎರಡು ಸಾರಿ ಪ್ರಯೋಗಿಸಿರುವುದನ್ನು ಗಮನಿಸಬೇಕು. ಈ ಸೂತ್ರದ ಕೆಳಗೆ ಕಾವ್ಯಾವಲೋಕನದ ೨೧೦, ೨೫೬ ಪದ್ಯಗಳನ್ನೂ, ದ್ವಂದ್ವಕ್ಕಾಗಿ ಕಾವ್ಯಾವಲೋಕನದ ೧೪೫ನೆಯ ಸೂತ್ರವನ್ನೂ ಉದಾಹರಣ ಪದ್ಯಗಳನ್ನಾಗಿ ಎತ್ತಿಕೊಂಡಿದೆ. ಇವಲ್ಲದೆ ಅವ್ಯಯಗಳನ್ನು ಹೇಳುವ ಮತ್ತೊಂದು ಪದ್ಯವಿದೆ.

ಅಂಗೆಯ್ ಪೆಂಗೆಯ್ ಮೇಂಗಾಲ್ |
ಮುಂಗಾಲ್ ಪೊದಟ್ದು ಪಿಂಬೊಟ್ಟು ಕರಂ |
ಪಿಂಗಡೆ ಕಿಟ್ಕೈಱೆ ಪಿತ್ತಿಲ್ |
ಬೆಂಗಾನ್ ಬೆಂಬಿಸಿಲಿವವ್ಯಯೀಭಾವಾಖ್ಯಂ ||

ಈ ಕಂದವೂ ಯಾವುದೋ ಒಂದು ವ್ಯಾಕರಣದ ಸೂತ್ರದಂತಿದೆ. ಹಿಂದೆ ‘ ಕಳ್ ’ ಧಾತುವನ್ನು ಕುರಿತ ಸೂತ್ರವೂ ವ್ಯಾಕರಣಾಂತರದ್ದೆಂದು ಹೇಳಿದೆಯಷ್ಟೆ. ಅದರಂತೆ ಇನ್ನೂ ಕೆಲವು ಸೂತ್ರಗಳಿವೆ. ಇವು ಈಗಿನ ವ್ಯಾಕರಣಗಳಲ್ಲಿ ಸಿಕ್ಕುವುದಿಲ್ಲ.

ಸೂತ್ರ ೧೬೬, ೧೬೭ರ ಕೆಳಗೆ ಹೊಸ ಪದ್ಯ ಭಾಗಗಳು ಉದ್ಧೃತವಾಗಿವೆ. ಸೂ. ೧೬೭ರ ಕೆಳಗೆ ಮತಾಂತರವೆಂದು ಕಾವ್ಯಾವಲೋಕನದ ಸೂತ್ರ ೪೮, ಅದರ ಉದಾಹರಣೆಯ ಪದ್ಯ ೨೧೫ ಉದ್ಧೃತವಾಗಿವೆ.

ಇದೇ ಸೂತ್ರದ ಕೆಳಗೆ ‘ ಸವಣಂ ಬಳಪಂ ಗೊಳೆ’ ಎಂಬ ಪ್ರಸಿದ್ಧವಾದ ಪದ್ಯವಿದೆ. ‘ ಭೀಮಂಗದೆಗೊಳೆ ’ ಎಂಬುದಕ್ಕೆ ಬದಲಾಗಿ ಇಲ್ಲಿ ‘ಭೀಮಂ ಬಡಿಗೊಳೆ’ ಎಂಬ ಪ್ರಯೋಗವಿದೆ. ‘ಗದೆ’ ಸಂಸ್ಕೃತ, ಅದಕ್ಕೆ ಸಮಾನವಾದ ಕನ್ನಡ ಪದ ‘ಬಡಿ’. ಈ ಪಾಠದ ಔಚಿತ್ಯವನ್ನು ಗಮನಿಸಬೇಕು.

ಸೂತ್ರ ೧೬೮ರ (ಗಮಕ ಸಮಾಸ) ಕೆಳಗೆ ಹಿಂದೆ ಸೂತ್ರ ೭೫ರ ಕೆಳಗೆ ಉದಾಹೃತವಾದ ಯಶೋಧರ ಚರಿತೆಯ ಪದ್ಯವನ್ನು ಕೊಟ್ಟಿದೆ

ಗಮಕ ಸಮಾಸವನ್ನು ಬೋಧಿಸುವ ಸೂತ್ರ ವೃತ್ತಿಗಳ ಪಾಠಗಳು ಮುದ್ರಿತ ಪ್ರತಿಗಳಲ್ಲಿ ಸಂದೇಹಾಸ್ಪದಗಳಾಗಿವೆ.

ಜನಿಯಿಸುಗುಂ ಸಂಖ್ಯಾ ಸ |
ವರ್ಣನಾಮ ಗುಣವಚನ ಕೃತ್ಪ್ರಪೂರ್ವಂ ಗಮಕಂ ||
ತನಗತ್ವಂ ಪೆಱಗಿತ್ವಂ |
ತನಗರಿಪದನಿಲ್ಲ ಕರ್ಮಧಾರಯ ಮದುವುಂ || (ಸೂ. ೧೬೮)

ಈ ಸೂತ್ರದ ಮೊದಲೆರಡು ಚರಣಗಳು ಗಮಕ ಸಮಾಸ ಲಕ್ಷಣವನ್ನು ತಿಳಿಸುತ್ತವೆ. ೩ನೆಯ ಚರಣ ಸಮಾಸವಾಗುವ ಕಾಲದಲ್ಲಿ ನಡೆಯುವ ಕಾರ್ಯವನ್ನು ಹೇಳುತ್ತದೆ. ಆ ಕಾರ್ಯವೆಂದರೆ ‘ ತನಗತ್ವಂ ಪೆಱಗಿತ್ವಂ ’. ಸಮಾಸದಲ್ಲಿ ಎರಡು ಪದಗಳು ಇರಬೇಕಷ್ಟೆ. ಆ ಎರಡು ಪದಗಳು ಸೇರುವಾಗ, ‘ತನಗತ್ವಂ ಪೆಱಗಿತ್ವಂ’ ಎಂಬ ಕಾರ್ಯ ನಡೆಯುತ್ತದೆಂದು ಇದರ ಭಾವ. ವೃತ್ತಿಯಲ್ಲಿ ಇದಕ್ಕೆ “ ಗುಣವಚನದೊಳಂತರಾಳಕ್ಕೆ ಒಂದಕಾರಂ (ಅಕ್ಕುಂ;) ಪಿಂತಣ ಮೆಯ್ಯೊಳ್ ಇಕಾರಮಕ್ಕುಂ ” ಎಂದಿದೆ. ಎರಡು ಪದಗಳಲ್ಲಿ ಮೊದಲ ಪದಕ್ಕೆ ಎಂದರೆ, ಹಿಂದಿನ ಪದಕ್ಕೆ ಇಕಾರವಾಗುವುದು, ಮಧ್ಯದಲ್ಲಿ ( ಅಂತರಾಳ ) ಅಕಾರವೊಂದು ಬರುವುದು ಎಂದು ಇದರ ತಾತ್ಪರ್ಯ ಉದಾಹರಣೆಯನ್ನು ನೋಡಿದರೆ—

ಅಸಿಯನಡು, ಇದನ್ನು ಪರಿಷತ್ಪ್ರತಿಯಲ್ಲಿ (ಅಸಿ+ಅ+ನಡು) ಎಂದು ವಿವರಿಸಿದೆ, ಪಸಿಯಬಣ್ಣಂ, ಬಿಳಿಯಕರ್ಬು, ನಿಡಿಯನಾಲಗೆ, ಎಂಬ ಪ್ರಯೋಗಗಳು ಕಂಡುಬರುತ್ತವೆ. ಇಲ್ಲಿ ಅಸಿಯ, ಪಸಿಯ ಇತ್ಯಾದಿ ಪದಗಳಲ್ಲಿ ಅಸಿ (ದು), ಪಸಿ (ದು), ಎಂಬಿವುಗಳ ಕೊನೆಗೆ ಲೋಪವಾಗಿ ಮಧ್ಯ ಅಕಾರ ಬಂದಿದೆಯೆಂಬುದು ಸ್ಪಷ್ಟವಾಗಿದೆ. ಆದರೆ ವೃತ್ತಿಯಲ್ಲಿರುವಂತೆ ‘ಪಿಂತಣಮೆಯ್ಯೊಳ್ ಇಕಾರಮಕ್ಕುಂ’

ಎಂಬುದಕ್ಕೆ ಸಮಾಧಾನ ದೊರೆಯುವುದಿಲ್ಲ. ಅಸಿದು, ಪಸಿದು, ಇವುಗಳ ಕೊನೆಯ ಅಕ್ಕರವು ಲೋಪವಾಗಿ ಅಸಿ, ಪಸಿ ಮೊದಲಾದ ಇಕಾರಾಂತವಾದ ಪದಗಳೇ ಸಿದ್ಧಿಸುತ್ತವೆ. ಇಕಾರಾಂತವಾದುವುಗಳಿಗೆ 'ಇಕಾರಮುಕ್ಕುಂ' ಎಂದು ಹೇಳುವುದರ ಔಚಿತ್ಯವೇನು? ಇಕಾರವು ಬಂದು ಮತ್ತೆ ಹೋಗುತ್ತದೆ ಎಂದು ಇಟ್ಟುಕೊಳ್ಳಬೇಕೆ? ಇದು ಸರಿಯಲ್ಲ. ಲಿಂಗಣಾರಾಧ್ಯನ ವೃತ್ತಿ ಇದನ್ನು ಸ್ಪಷ್ಟಪಡಿಸುವುದೇನೋ ಎಂದು ಅದನ್ನು ನೋಡಿದರೆ ಅಲ್ಲಿ ಸೂತ್ರವನ್ನೇ ಮತ್ತೆ ಹೇಳಿದೆ. 'ತನಗತ್ವಂ ಪೆಱಗಿತ್ವಂ ಜನಿಯಿಸುಗುಂ' ಎಂದು ಲಿಂಗಣಾರಾಧ್ಯನ ಪ್ರತಿಯಪಾಠ. ಇದು ಶಬ್ದಾರ್ಥವನ್ನು ತಿಳಿಯದ ಉಪಾಧ್ಯಾಯನನ್ನು ವಿದ್ಯಾರ್ಥಿ ಈ ಪದಕ್ಕೆ ಅರ್ಥವೇನೆಂದು ಕೇಳಿದರೆ ಉಪಾಧ್ಯಾಯನು ಅದಕ್ಕದೆ ಅರ್ಥವೆಂದು ಹೇಳಿದಂತಿದೆ. ತನಗೆ ಅರ್ಥತಿಳಿಯದೆ ಏನೋ ಒಂದು ಅಪಾರ್ಥ ಹೇಳುವುದಕ್ಕೆ ಬದಲಾಗಿ ಇದ್ದುದನ್ನು ಇದ್ದಹಾಗೆ ಹೇಳಿಬಿಡುವ ಉಪಾಧ್ಯಾಯನೇ ಮೇಲೆಂದು ಕಾಣುತ್ತದೆ. ಈ ಬಿಕ್ಕಟ್ಟನ್ನು ಹೊಸಪ್ರತಿ ಸಡಿಲಿಸಿ ಪಾಠವನ್ನು ಸರಿಪಡಿಸಿದೆ.

೬— "ಅಂತ್ಯದೊಳೊಂದಕಾರಂ, ಪಿಂತಣಮೆಯ್ಯೊಳಿಕಾರಮಿರೆ ಬಕ್ಕುಂ" ಹಿಂದಿನ ಪದದಲ್ಲಿ ಇಕಾರವಿದ್ದರೆ ಅದರ ಕೊನೆಯಲ್ಲಿ ಒಂದು ಅಕಾರ ಬರುವುದೆಂಬ ಮಾತು ಬೆಣ್ಣೆಯಿಂದ ಕೂದಲನ್ನು ಬಿಡಿಸಿದಂತಿದೆ. ಅಸಿದು, ಪಸಿದು ಎಂಬಲ್ಲಿ ದುಕಾರ ಲೋಪವಾಗಿ ಅಸಿ, ಪಸಿ ಎಂಬಿವುಗಳು ಉಳಿಯುತ್ತವೆ ಇವುಗಳಿಗೆ ಉತ್ತರಪದಗಳು ಎಂದರೆ ನಡು, ಬಣ್ಣಂ ಇವುಗಳು ಪರವಾದಾಗ ಅಸಿನಡು, ಪಸಿಬಣ್ಣಂ ಎಂದು ಮಾಡದೆಮಧ್ಯದಲ್ಲಿ ಅಕಾರವನ್ನು ತಂದುಕೊಂಡು ಪದವಿಧಿಯಂತೆ ಅಸಿಯನಡು, ಪಸಿಯಬಣ್ಣಂ ಎಂದು ಮಾಡಿಕೊಳ್ಳಬೇಕು. ಆಗಲೇ ಇವುಗಳು ಗಮಕಸಮಾಸವಾಗುವುವು.

"ಅತ್ವದ ಪೆಱಗಣಿಕಾರಮುಂ ವಿವರಿಪೆಂ" ಎಂದು ಕೆಳಗಣ ಪದ್ಯವನ್ನು ವ್ಯಾಖ್ಯಾನಕಾರನು ಉದಾಹರಿಸಿದ್ದಾನೆ

"ಎಸೆವಮೃತಂ ಮೂಲೋಕಂ |
ಬಸವಪ್ಪುದಿದಾವಗಹನಮೆಲೆ ಭವ್ಯನೆ ಕೇ ||
ಳೊಸೆದು ಸಲೆ ಪಿರಿಯ ಗುರುಗಳ್ |
ಬೆಸಸಿದವೊಲ್ ನಡೆದೊಡಿದುವೆ ಗಮಕಸಮಾಸಂ ||

ಪಿರಿಯ ಗುರುಗಳೆಂಬಂತೆ ಗುಣ ವಚನದೊಳ್ ಪಿರಿದುಮುಱುವುದು.

ಇದು ಸ್ವಾರಸ್ಯವಾದ ಪದ್ಯ. ಎಸೆವಮೃತ, **ಮೂ**ಲೋಕ, **ಆವ**ಗಹನ, **ಪಿರಿಯ** ಗುರುಗಳ್, ಇವೆಲ್ಲ ಗಮಕ ಸಮಾಸ ಪದಗಳನ್ನಿಟ್ಟು ಗಮಕ ಸಮಾಸವನ್ನು ಭವ್ಯನಾದ ಶಿಷ್ಯನಿಗೆ ಗುರು ಉಪದೇಶಿಸಿದ ಪದ್ಯವಾಗಿದೆ. ವ್ಯಾಖ್ಯಾನಕಾರನು ಇದನ್ನು ಎಲ್ಲಿಂದ ಸಂಗ್ರಹಿಸಿದನೋ ತಿಳಿಯದು. ಸಾಹಿತ್ಯ ಪರಿಷತ್ಪ್ರತಿ, ಕಿಟಲ್ ಅವರ ಪ್ರತಿಗಳಲ್ಲಿ ಇದು ಇಲ್ಲ. ಲಿಂಗಣಾರಾಧ್ಯನ ಪ್ರತಿಯಲ್ಲಿ ಮಾತ್ರ 'ಅತ್ವದ

ಪೆಱಗಣಿಕಾರಮುಂ,' 'ಪಿರಿಯ ಗುರುಗಳೆಂಬಂತೆ ಗುಣವಚನದೊಳ್ ಪಿರಿದು ಮಱುವುದು' ಎಂದಿದೆ. ಮೇಲೆ ಹೊಸ ಪ್ರತಿಯ ವಾಕ್ಯಗಳೇ ಇಲ್ಲಿ ಬಂದಿರುವುದನ್ನು ಗಮನಿಸಬೇಕು.

ಸೂತ್ರ ೧೬೯ರ ಕೆಳಗೆ "ಕರುವಿಟ್ಟಂ ಕಾಮದೇವಂ" ಎಂಬ ಪ್ರಸಿದ್ಧವಾದ ಪದ್ಯವು ಹೆಚ್ಚಿಗೆ ಉದಾಹೃತವಾಗಿದ.

ಸೂತ್ರ ೧೭೦ ರ ಕೆಳಗೆ ಎತ್ತುಂಗೋಲ್, ಇಕ್ಕುಂಗೂಳ್ ಇವುಗಳಿಗೆ ಒಂದೊಂದು ಹೆಚ್ಚಿನ ಪದ್ಯ ಉದಾಹೃತವಾಗಿದೆ. ಈ ಪದ್ಯಗಳು ಕಾವ್ಯಾವಲೋಕನದಲ್ಲಿ ಇಲ್ಲ.

ಸೂತ್ರ ೧೭೧ರ ಕೆಳಗೆ ಸುಡುಗಾಡು, ಅಡುಗೂಲ್, ಬಿಡುಗಣ್, ಬಿಡುಬಾಯ್ ಇವುಗಳ ಪ್ರಯೋಗ ಪದ್ಯಗಳೆರಡಿವೆ.

ಸೂತ್ರ ೧೭೩ಕ್ಕೆ ಒಂದು ಪದ್ಯ ಹೆಚ್ಚಿಗೆ ಉದಾಹೃತವಾಗಿದೆ. 'ಆಱುಂಬಳಿ' ಎಂಬ ಪದವು ಈ ಪದ್ಯದಲ್ಲಿದೆ.

ಈ ಸೂತ್ರದ ಪ್ರಯೋಗ ಭಾಗದ ಕೊನೆಯಿಂದ ಆರಂಭವಾಗಿ (೪) ಗರಿಗಳು ಕಳೆದಿವೆ.

ಈ ನಷ್ಟವಾದ ಭಾಗದಲ್ಲಿ ವ್ಯಾಖ್ಯಾನಕಾರನು ಶಬ್ದಮಣಿದರ್ಪಣದ ೧೭೪ನೆಯ ಸೂತ್ರವನ್ನು ಚರ್ಚಿಸಿರುವಂತೆ ಕಾಣುತ್ತದೆ. ಇದರಲ್ಲಿ ಅರಿಸಮಾಸವನ್ನು ಕೇಶಿರಾಜನು ಪ್ರತಿಪಾದಿಸುತ್ತಾನೆ.

ತತ್ಸಮ, ತದ್ಭವ, ಸಮಸಂಸ್ಕೃತ ಈ ಪದಗಳ ಜೊತೆಗೆ ಕನ್ನಡ ಶಬ್ದಗಳ ಸಮಾಸ ಮಾಡಬೇಕೆ, ಇಲ್ಲವೆ ಎಂಬ ವಿಷಯವನ್ನು ಕಳೆದು ಹೋದ ಭಾಗದಲ್ಲಿ ಚರ್ಚಿಸುತ್ತ ಬಂದು, ಮುಂದೆ ತತ್ಸಮಶಬ್ದಗಳ ಸಮಾಸವನ್ನು ಹೇಳುವ ಮೂರು ಪ್ರಯೋಗೋದಾಹರಣ ಪದ್ಯಗಳನ್ನು ಕೊಟ್ಟಿದ್ದಾನೆ. ಈ ಪದ್ಯಗಳಲ್ಲಿ ತತ್ಸಮ ಸಂಸ್ಕೃತ, ತತ್ಸಮ ಕನ್ನಡ–ಇವುಗಳ ಸಮಾಸಪದಗಳಿವೆ. ಒಂದು ಪದ್ಯವನ್ನಿಲ್ಲಿ ಕೊಟ್ಟಿದೆ.

ಸಱಗೋಂಟೆ ಸಿಂಡುಗಂಕಣ |
ಕಿಱುಗಾಳಂ ಮಲ್ಲವಾತು ಕಟ್ಟಂಕಂ ಪಾಂ ||
ಗಱಯೆ ಬಿಲಸಗ್ಗಮಿಂತಿವು |
ನೆಱೆಗುಂ ತತ್ಸಮಕೆ ಕನ್ನಡಕ್ಕೆ ಸಮಾಸಂ ||

'ನೆಱೆಗುಂ ತತ್ಸಮಕೆ ಕನ್ನಡಕ್ಕೆ ಸಮಾಸಂ' ಎಂದು ಹೇಳಿರುವ ರೀತಿಯನ್ನು ನೋಡಿದರೆ ಇದೂ ಒಂದು ಸೂತ್ರವಿರುವಂತೆ ಗೋಚರವಾಗುವುದು.

ಇದೇ ಸಂದರ್ಭದಲ್ಲಿ ತದ್ಭವ ಪ್ರಕರಣದಲ್ಲಿನ ಸೂ. ೨೯೯ ನ್ನು ಉದ್ಧರಿಸಿ, "ಅಪಭ್ರಂಶಕ್ಕಂ ದೇಶೀಯ ಪದಕಮುಂಟು ಸಮಾಸಂ" ಎಂಬುದನ್ನು ಎರಡು ಪದ್ಯಗಳಿಂದ ಉದಾಹರಿಸಿದ್ದಾನೆ. ಅವೆರಡು ಪದ್ಯಗಳೂ ಸೂತ್ರಪ್ರಾಯವಾಗಿವೆ.

ಸೂತ್ರ ೧೭೫, ೧೭೬ ಇವೆರಡರ ಕೆಳಗೆ ಕಾವ್ಯಾವಲೋಕನವ ೨೫೩, ೨೫೨,

೨೫೪, ೨೫೧ ಪದ್ಯಗಳು, ಮತಾಂತರಕ್ಕಾಗಿ ಸೂತ್ರ ೫೫, ಮತ್ತು ಪದ್ಯಗಳು ೨೪೮, ೨೫೦, ಸೂತ್ರ ೫೪ ಅನುಕ್ರಮವಾಗಿ ಉದ್ಧೃತವಾಗಿವೆ.

ಸೂ. ೧೭೭ರ ಪ್ರಯೋಗಗಳಿಂದ ಆರಂಭವಾಗಿ (೧೫) ಗರಿಗಳು ನಷ್ಟವಾಗಿವೆ.

## —: ತದ್ಧಿತ ಪ್ರಕರಣ: —

ಸೂತ್ರ ೧೯೯ರ ಕೆಳಗೆ ಕಾವ್ಯಾವಲೋಕನದ ಪದ್ಯ ೩೭೯, ಮುದ್ರಿತ ಪ್ರತಿಗಳಲ್ಲಿ ಅಪೂರ್ಣವಾಗಿ ಅಚ್ಚಾಗಿದೆ. ಇಲ್ಲಿ ಅದನ್ನು ಪೂರ್ಣವಾಗಿ ಕೊಟ್ಟಿದೆ.

ಸೂ. ೨೦೦ ರ ಕೆಳಗೆ ಕಾವ್ಯಾವಲೋಕನದ ಪದ್ಯ ೩೨೫ ಪೂರ್ತಿಯಾಗಿ ಉದಾಹೃತವಾಗಿದೆ.

ಸೂ. ೨೦೨ ಶೀಲಗ್ರಹಣಾರ್ಥಗಳಲ್ಲಿ ಬಿಂದುವೆರಸು 'ಗುಳಿ' ಪ್ರತ್ಯಯ ಬರುವುದನ್ನು ಹೇಳುತ್ತದೆ. ಎರಡು ಚಾಟು ಪದ್ಯಗಳು ಸ್ವಾರಸ್ಯವಾಗಿವೆ.

ಎಳೆಯನಾಳ್ವರಸು ಕುತ್ತಂ |
ಗುಳಿ, ಲಂಚಂಗುಳಿಗಳೆಯದೆ ನಡೆವಳಿಕಾಱರ್ ||
ಪೊಟಲಿಚರೆಲ್ಲರ್ ಸಾಲಂ |
ಗುಳಿಗಳೆನಲ್ಕಲ್ಲಿ ಬಾಟವೋಪನೆ ಚದುರಂ ||
ಕಳ್ಪುಣಿಗೆ ತತ್ತ್ವಸಾರಂ |
ಸುಳ್ಪಂಗಾಱಂಗೆ ಸವಣರೊಡನಾಟಂ ದಲ್ ||
ಡಿಳ್ಳಿಸಿದ ಹೇಡಿಗಾಜಿಯು |
ಬೆಳ್ಪೋಟಂ ಸಮನಿಸಲ್ಕೆ ಹಿತಮಾಗಿರ್ಕ್ಕುಂ ||

ಸೂ. ೨೦೩ ರ ಕೆಳಗೂ ಒಂದು ಹೊಸ ಪದ್ಯವಿದೆ. ಈ ಸೂತ್ರವು ಉಕ, ಕುಳಿ, ಆಳಿ, ಮುಂತಾದ ಪ್ರತ್ಯಯಗಳು, ಶೀಲ ಮುಂತಾದ ಅರ್ಥಗಳನ್ನು ತಿಳಿಸುವಲ್ಲಿ ಬರುತ್ತವೆಂಬುದನ್ನು ಹೇಳುತ್ತದೆ. ಉದಾಹರಣೆಗಳಲ್ಲಿ ಎರಡು ಶಬ್ದಗಳನ್ನು ಹೆಚ್ಚಿಗೆ ಹೇಳಿದೆ. ಇವುಗಳಲ್ಲಿ 'ಓಕುಳಿ' ಎಂಬುದು ಒಂದು. ಓಕುಳಿ'— ಓಸ್ನೇಹೇ—ಈಗಲೂ ಈ ಶಬ್ದವು ಪ್ರಚಾರದಲ್ಲಿದ್ದರೂ, 'ಓ' ಎಂಬುದು ಸ್ನೇಹಾರ್ಥದಲ್ಲಿ ಬರುತ್ತದೆಂಬುದು ತಿಳಿದಿದ್ದರೂ ವ್ಯುತ್ಪತ್ತಿಕ್ರಮವು ಸರಿಯಾಗಿ ಬೋಧವಾಗಿರಲಿಲ್ಲ. ಸ್ನೇಹವನ್ನು ಸೂಚಿಸುವುದಕ್ಕಾಗಿ ಉಪಯೋಗಿಸುವ ಪದಾರ್ಥವೇ ಓಕುಳಿ. ಲಿಂಗಣಾರಾಧ್ಯನ ಪ್ರತಿಯಲ್ಲಿಯಾಗಲೀ, ಬೇರೆ ಪ್ರತಿಗಳಲ್ಲಾಗಲೀ ಈ ಪದವಿಲ್ಲ.

ಸೂತ್ರ ೨೦೪ ರ ಕೆಳಗಿನ ಚಾಟುಪದ್ಯವನ್ನಿಲ್ಲಿ ಉದ್ಧರಿಸಿದೆ.

ಕೂರದ ಪೆಣ್ಗೆ ಕೂರ್ತ್ತು ಮರುಳಾದವನೊರ್ಬ್ಬನಡರ್ತ್ತನೇಹದಿಂ |
ನೇರಿದಳಪ್ಪ ಕಾಂತೆ ಬಗೆ ಸೋಲ್ತಿರೆ ಸೋಲದನೊರ್ಬ್ಬನೊಲ್ದು ಪೆ ||
ಣ್ಣಾರಯೆ ಪಿಂಗಿ ಪೋಗೆ ತನುವಂ ಬಗೆಗೊಂಡುಳಿದಿರ್ಪ್ಪನೊರ್ಬ್ಬನಿಂ |
**ಯೆಱರುಗ**ರಾದ ಮೂವರನದೇಂ ಬಿದಿ ಪೆತ್ತನೋ ಭೂಮಿಭಾರರಂ ||

ಸೂತ್ರ ೨೦೫ರ ವೃತ್ತಿಯಲ್ಲಿ "ಅದಱಿನೊಳ್ ಇವಂ ವರ್ತಿಸನೆಂಬಲ್ಲಿ 'ಇಲ', ಪ್ರತ್ಯಯಮಕ್ಕುಂ" ಎಂದು ಹೇಳಿದೆ. ಉದಾಹರಣೆಗಾಗಿ 'ಪಚ್ಚೆಯಿಲಂ, ಘೋಳಯಿಲಂ' ಎಂಬಿವುಗಳನ್ನು ಕೊಟ್ಟಿದೆ. ಇಲ್ಲಿ ಯಕಾರಾಗಮಕ್ಕೆ ಸಮಾಧಾನ ವನ್ನು ಯಾವ ಪ್ರತಿಯಲ್ಲೂ ಹೇಳಿಲ್ಲ. ಹೊಸ ಪ್ರತಿಯಲ್ಲಿ ಅದನ್ನು ಹೀಗೆ ಸ್ಪಷ್ಟ ಮಾಡಿದೆ. ''ಸಮಾಸ ಲಕ್ಷಣಂ ತದ್ಧಿತದೊಳುಂಟಾದುದಱಿಂ ಯಕಾರ ಮುಚಿತಾ ಕ್ಷರಾಗಮಂ." ಅಚ್ಚಿನ ಪ್ರತಿಗಳಲ್ಲೆಲ್ಲ 'ಗಾವಿಲ' ಎಂಬುದನ್ನೂ ಇಲ್ಲಿಯೇ ಉದಾ ಹರಿಸಿದೆ. ಹೊಸ ಪ್ರತಿಯಲ್ಲಿ ಇದು ಇಲ್ಲ. ಇದಕ್ಕೆ ಕಾರಣವಿಲ್ಲದಿಲ್ಲ. 'ಗಾವಿಲ' ಎಂಬುದು 'ಗ್ರಾಮೀಣ' ಎಂಬುದರ ತದ್ಭವವೆಂದು ಸೂತ್ರ ೨೮೦ರಲ್ಲಿ ಹೇಳಿದೆ. ಇಲ್ಲಿಯ 'ಇಲ' ಕನ್ನಡದ ಪ್ರತ್ಯಯವಲ್ಲ. ಇದರಲ್ಲಿಯೂ 'ಇಲ' ಎಂಬುದಿರುವುದನ್ನು ನೋಡಿ ಆ ಮೇಲೆ ಸೇರಿಸಿದ ಪದವಾಗಿರಬೇಕು ಇದು. ಇದರಂತೆಯೇ ಸೂ. ೧೯೭ರ ಕೆಳಗೆ 'ಶಿಲ್ಪಕ' ಎಂಬುದಕ್ಕಾಗಿ 'ಚಿಪ್ಪಿಗಂ' ಎಂಬುದನ್ನು ಉದಾಹರಿಸಿದೆ. ಸೂತ್ರ ೨೬೩ರಲ್ಲಿ 'ಶಿಲ್ಪಿಕಂ' ಎಂಬುದರ ತದ್ಭವ 'ಚಿಪ್ಪಿಗ' ಎಂದು ಹೇಳಿದೆ. ಇದೂ ಸಂಸ್ಕೃತ ದಿಂದ ವಿಕೃತವಾಗಿ ಬಂದ ಪದ. ಆದರೆ ಕನ್ನಡದಲ್ಲಿ ಬೇರೆ ಅರ್ಥದಲ್ಲಿ ಪ್ರಯೋಗ ವಾಗಿದೆ. 'ಚಿಪ್ಪ' ಎನ್ನುವುದಕ್ಕೆ 'ಇಗ' ಪ್ರತ್ಯಯ ಸೇರಿ ಆದ ರೂಪವೇ ಇದು? 'ಚಿಪ್ಪ' ಎನ್ನುವುದು 'ಶಿಲ್ಪ' ದ ತದ್ಭವವಾಗಬೇಕಾಯಿತು.

ಸೂತ್ರ ೨೦೬ರ ಕೆಳಗೆ ಕಾವ್ಯಾವಲೋಕನದ ಸೂತ್ರ ೭೪ನ್ನೂ ೩೩೭, ೩೩೮, ೩೩೯ ಪದ್ಯಗಳನ್ನೂ ಉದ್ಧರಿಸಿದೆ.

ಸೂ. ೨೦೭ಕ್ಕೂ ಕಾವ್ಯಾವಲೋಕನದ ಸೂತ್ರ ೮೧, ಪದ್ಯಗಳು ೩೬೮, ೩೬೯, ೩೭೦ ಉದ್ಧೃತವಾಗಿ ಬಂದಿವೆ.

ಸೂ. ೨೦೮ರ ಪ್ರಯೋಗ ಸಂದರ್ಭದಲ್ಲಿ (೨) ಗರಿಗಳು ನಷ್ಟವಾಗಿವೆ. ತದ್ಧಿತ ಪ್ರಕರಣದಲ್ಲಿ ಕೆಲವು ಹೊಸ ಪ್ರಯೋಗಗಳ ಶಬ್ದಗಳು ಬಂದಿವೆ.

## —: ಆಖ್ಯಾತ ಪ್ರಕರಣ: —

ಸೂತ್ರ ೨೧೭ರ ಕೆಳಗೆ "ತೆಗೆದಯ್ ಮೋಕ್ಷದ ಬಟ್ಟೆಯುಂ" ಎಂಬ ಪದ್ಯವು ಪೂರ್ತಿಯಾಗಿ ಬಂದಿದೆ. ಇರ್‌ಗೆ (ಇರ್ಗೆ)—ಹೊಸಪದ್ಯವೊಂದಿದೆ

ಸೂತ್ರ ೨೧೯. ಈ ಸೂತ್ರವು ಆಖ್ಯಾತಪ್ರತ್ಯಯಗಳು, ಗುಣವಚನ, ಸರ್ವ ನಾಮ, ಸಂಖ್ಯೆ, ಸಂಸ್ಕೃತಗುಣೋಕ್ತಿ ಇವುಗಳಲ್ಲಿ ವರ್ತಿಸುವುವು ಎಂಬುದನ್ನು ಹೇಳುತ್ತದೆ. ಆದರೆ ಪ್ರಯೋಗಭಾಗದಲ್ಲಿ, "ಸಮುಚ್ಚಯದಿಂ ಗುಣವಚನಮಲ್ಲದಲ್ಲಿ ಯುಮುಂಟು." ಎಂದು ಹೇಳಿ ಕವಿಕೇಶವನೆಂ; ಮಲ್ಲಿಕಾರ್ಜುನಸುತನೆಂ, ದೌಹಿ ತ್ರನೆಂ ಎಂಬ ಪ್ರಯೋಗವಾಕ್ಯಗಳನ್ನು ಉದಾಹರಿಸಿದೆ. ನಾಮಪದಗಳಿಗೂ ಆಖ್ಯಾತ ಪ್ರತ್ಯಯಗಳು ಹತ್ತುತ್ತವೆ. ಆದರೆ ಕೇಶಿರಾಜನು ಈ ಅಂಶವನ್ನು ಸೂತ್ರದಲ್ಲಿ ಯಾಗಲೀ, ವೃತ್ತಿಯಲ್ಲಾಗಲೀ ಹೇಳಲಿಲ್ಲ. 'ಸಮುಚ್ಚಯದಿಂ' ಎಂದು ಪ್ರಮುಂತಾಗಿ

ಹೇಳಿ ಅದಕ್ಕೆ ಉದಾಹರಣೆಗಳನ್ನು ಶಬ್ದಮಣಿದರ್ಪಣದ ಪೀಠಿಕೆಯಲ್ಲಿ ತನ್ನ ವಿಷಯವಾಗಿ ಹೇಳಿಕೊಂಡಿರುವ ಪದ್ಯದಿಂದ ಎತ್ತಿಕೊಂಡುದು ಚಮತ್ಕಾರವಾಗಿದೆ. ಕೇಶಿರಾಜನು ತನ್ನ ವ್ಯಾಕರಣಕ್ಕೆ ಪ್ರಾಚೀನ ಕವಿಗಳ ಪ್ರಯೋಗವನ್ನೇ ಆಧಾರವಾಗಿಟ್ಟುಕೊಂಡಿದ್ದಾನೆ. ನೃಪತುಂಗನಂತೆ ಪೂರ್ವಕವಿಗಳನ್ನು ಹೆಸರಿಸುವಾಗ ತನ್ನನ್ನೂ ಸೇರಿಸಿಕೊಂಡಿಲ್ಲ. ಇಲ್ಲಿಯಾದರೋ ತನ್ನ ಪ್ರಯೋಗಗಳನ್ನು ಕೊಟ್ಟಿದ್ದಾನೆ 'ಪೆಂಡತಿಯೆಂ' ಎಂಬುದೊಂದು ಮಾತ್ರ ತನ್ನನ್ನು ಕುರಿತು ಇಲ್ಲ! ಅಲ್ಲದೆ ಈ ಹೆಚ್ಚಿನ ವಿಷಯಗಳನ್ನು ಹೇಳಿರುವುದನ್ನು ನೋಡಿದರೆ ಪ್ರಯೋಗಕ್ಕೂ ಸೂತ್ರಕ್ಕೂ ಸಮನ್ವಯವಾಗುವುದಿಲ್ಲವೆಂಬ ಶಂಕೆ ಬಂದು ಸೂತ್ರಕಾರನು ಬೇರೆ, ವೃತ್ತಿಗೂ ಪ್ರಯೋಗಕ್ಕೂ ಅಂತರ ಬರುವುದರಿಂದ ಅವುಗಳನ್ನು ಬರೆದವನು ಬೇರೆ ಬೇರೆ ಎಂಬ ಆಕ್ಷೇಪಕ್ಕೆಡೆಯಾಗುವಂತಿದೆ. ಇದನ್ನು ಪ್ರಕ್ಷಿಪ್ತವೆಂದು ಗ್ರಹಿಸಿದರೆ, ಈ ಸಂಶಯಕ್ಕೆ ಆಸ್ಪದವೇ ಇಲ್ಲ. ಹೊಸ ಪ್ರತಿಯಲ್ಲಿ ಇದು ಇಲ್ಲವೇ ಇಲ್ಲ. ಲಿಂಗಣಾರಾಧ್ಯನ ಪ್ರತಿಯಲ್ಲಿಯೂ ಈ ವಿವರಣೆಪ್ರಯೋಗಗಳಿಲ್ಲ. ಎಂಡ ಮೇಲೆ ಅತ್ಯಂತ ಪ್ರಾಚೀನವೆಂದು ತೋರುವ ಈ ಪ್ರತಿಯಲ್ಲಿ ಇವು ಇಲ್ಲದಿರುವುದರಿಂದ ಇವುಗಳನ್ನು ಮತ್ತಿನವರು ಆ ಮೇಲೆ ಸೇರಿಸಿರುವರೆಂದು ನಿರ್ಧರಿಸಬೇಕಷ್ಟೆ. ಈ ಸೂತ್ರದಲ್ಲಿ ಗುಣವಚನ ಮೊದಲಾದುವುಗಳಲ್ಲಿ ಆಖ್ಯಾತ ವಿಭಕ್ತಿಗಳು ಬರುವುವೆಂಬುದನ್ನು ಹೇಳಿದೆ. ನಾಮಪದಕ್ಕೆ, ಅದರಲ್ಲಿಯೂ, ಅಂಕಿತನಾಮಕ್ಕೆ ಆಖ್ಯಾತ ಪ್ರತ್ಯಯಗಳು ಬರುವ ಸಂಗತಿ ಸ್ಪಷ್ಟವಾಗಿ ಹೇಳಿಲ್ಲವಾದುದರಿಂದ ಅದನ್ನು ಸಮುಚ್ಚಯ ವಶದಿಂದ ವಿಶದಗೊಳಿಸಿರಬೇಕೆಂದು ಸಮಾಧಾನ ತಂದುಕೊಳ್ಳಬಹುದಲ್ಲವೇ ಎಂದು ಪ್ರಶ್ನಿಸಬಹುದು. ಆ ಆಖ್ಯಾತ ಪ್ರತ್ಯಯಗಳು ಎಲ್ಲಾ ನಾಮಪದಗಳಿಗೂ (Nominal themes) ಬರುತ್ತವೆ ಎಂಬುದು ಸೂತ್ರದ ವಿವರಣೆಯಿಂದ ಸ್ಪಷ್ಟವಾಗಿದೆ. 'ಕವಿಕೇಶವನೆಂ' ಇತ್ಯಾದಿಗಳು ಉತ್ತಮ ಪುರುಷವನ್ನು ಹೇಳುತ್ತವೆ. ಪುರುಷತ್ರಯಗಳಲ್ಲಿ ಉತ್ತಮ ಪುರುಷವೂ ಸೇರಿದೆ. ಎಲ್ಲವುಗಳಂತೆ ಉತ್ತಮ ಪುರುಷ ಸ್ಥಾನದಲ್ಲಿರುವುವುಗಳಿಗೆಲ್ಲ ಈ ಪ್ರತ್ಯಯಗಳು ಸೇರಬೇಕು. ಇದಕ್ಕೆ ಸ್ಪಷ್ಟೀಕರಣ ಅನಾವಶ್ಯಕ. ಮುಂದಿನ ಸೂತ್ರ ೨೨೦ರಲ್ಲಿ ಉತ್ತಮ ಪುರುಷಕ್ಕೆ ಎನ್ ಪ್ರತ್ಯಯ ಸೇರುವಾಗ ಮಧ್ಯ ನಕಾರ ಬರುವುದನ್ನು ಕೇಶಿರಾಜನು ಸ್ಪಷ್ಟ ಮಾಡಿದ್ದಾನೆ. ಅಲ್ಲಿ ಅತಿ ಚತುರನೆನ್, ಕಳಾಪಂಡಿತನೆನ್, ಮುಂತಾದುವುಗಳು ಬಂದಿವೆ. ಇವೆಲ್ಲ 'ದೌಹಿತ್ರನೆನ್, ಮಲ್ಲಿಕಾರ್ಜುನಸುತನೆನ್' ಎಂಬಿವುಗಳಂತಿವೆ.

ಸೂ. ೨೨೧ರ ಕೆಳಗೆ,

> ಪಡೆದಂ ರಜೋಧಿಕಂ ಬಿದಿ ।
> ಪೆಡೆವಣಿಯಂ ಫಣಿಯುನಮೃತರಸಮಂ ವಿಷಮಂ ॥
> ಕಡಲಂ ಸುಱಿಯಂ ಮುಱಿಯಂ ।
> ಸಿಡಿಲಂ ಪಡೆವಂತೆ ಸುಜನರಂ ದುರ್ಜನರಂ ॥

ಈ ಪದ್ಯ ಇಲ್ಲಿ ಪೂರ್ಣ ರೂಪದಲ್ಲಿದೆ. ಮತ್ತು 'ಮರುತ್ತರಂಗಿಣಿಯನೊಲ್ದಾಲಿಂಗನಂ ಮಾಡುವಂ' ಇದು ರಾಮಚರಿತೆ ಎಂದು ಗ್ರಂಥದ ಹೆಸರನ್ನು ಹೇಳಿದೆ.

ಸೂ. ೨೫೫ರ ಕೆಳಗೆ ಆದಿಪುರಾಣದ ೩ನೆಯ ಆಶ್ವಾಸದ ೪೩ನೆಯ ಪದ್ಯದ ಕೊನೆಯ ಎರಡು ಚರಣಗಳು ಹೆಚ್ಚಿಗೆ ಉದಾಹೃತವಾಗಿವೆ. ಇದೇ ಸೂತ್ರದ ಪ್ರಯೋಗದ ಕೊನೆಯಲ್ಲಿ 'ಉದು' ಎಂಬುದು ವಿಧ್ಯರ್ಥದಲ್ಲಿಯೂ ಇದೆ ಎಂದು ಹೇಳಿ, ಅದಕ್ಕೆ ಕೆಲವು ಉದಾಹರಣೆಗಳನ್ನೂ ಕೊಟ್ಟಿದೆ. ಇವು ಹೊಸ ಪ್ರತಿಯಲ್ಲಿಯೂ ಲಿಂಗಾಣಾರಾಧ್ಯನ ಪ್ರತಿಯಲ್ಲಿಯೂ ಇಲ್ಲ.

ಸೂ. ೨೫೯ರ ಕೆಳಗೆ ವಿಧ್ಯರ್ಥದಲ್ಲಿನ 'ಇಂ' ಗೆ ಈ ಕೆಳಗಿನ ಪದ್ಯವು ಹೆಚ್ಚಿಗೆ ಉದಾಹೃತವಾಗಿದೆ.

ಗಗನಾಧ್ವರ್ ಸರಣಾಗಿ ಮಾಗಿಮುಮರರ್ ಒಂದಾಗಿಮಾಗಿಂದಿಶಾ |
ಳಿಗಧೀಶರ್ ನೆಱೆದೊಡ್ಡಿಮೊಡ್ಡಿಮುರುಗರ್ ಬಂದೆಯ್ದಿಮೆಯ್ದೀಮನ ||
ಸ್ವಿಗಳೀದೈತ್ಯನಮಿಕ್ಕಿಮಿಕ್ಕಿಮಧಟರ್ ಪೂಣ್ದಾಣ್ಮಿಮಾಣ್ಮಿಂ ಯಶೋ |
ರ್ಥಿಗಳೆನ್ನಂನೆಲೆಗುಯ್ಯಿಮುಯ್ಯಿಮೆನುತುಂ ತನ್ನಂಗಿ ಪುಯ್ಯಲ್ಚಿದಳ್ ||

ಸೂ. ೨೬೧ರಲ್ಲಿ 'ಇಸು'ವಿನ ಪ್ರಯೋಗವನ್ನು ಹೇಳಿದೆ. ಈ 'ಇಸು' ಎಂಬುದು ಸ್ವಯಂಕರ್ತೃವಿನಲ್ಲಿಯೂ, ಅನ್ಯಕರ್ತೃವಿನಲ್ಲಿಯೂ ಬರುವುದು. ಸಂಸ್ಕೃತ ಶಬ್ದಗಳಲ್ಲಿ ಅನೇಕಾಕ್ಷರ ಶಬ್ದಗಳಲ್ಲಿ ಸ್ವಯಂಕರ್ತೃವಿವಕ್ಷೆಯಾಗೆ 'ಇಸು' ಉಂಟು ಎಂದು ಹೇಳಿ ಅದಕ್ಕೆ 'ಖಂಡಿಸಿದಂ' ಎಂಬ ಪ್ರಯೋಗವನ್ನು ಕೊಟ್ಟಿದೆ. ಅದೇ ಸಂಸ್ಕೃತ 'ಭಿನ್ನಕರ್ತೃವಿನೊಳಿಸುವಿಲ್ಲ' ಎಂಬುದನ್ನು ಮುದ್ರಿತಪ್ರತಿಗಳಲ್ಲಿ ಉದಾಹರಣೆಯಿಂದ ಸ್ಪಷ್ಟಗೊಳಿಸಿಲ್ಲ. ಲಿಂಗಣಾರಾಧ್ಯನ ಪ್ರತಿಯಲ್ಲಿ 'ಖಂಡಿಸಿಸಿದನೆಂಬಂತೆ' ಎಂದು ಹೇಳಿದೆ. ಹೊಸಪ್ರತಿಯಲ್ಲಿಯಾದರೋ 'ಖಂಡಿಸಿದಪಂ' ಎಂಬ ಪ್ರಯೋಗವನ್ನೇ ಕೊಟ್ಟಿದೆ. 'ಖಂಡಿಸಿಸಿದಂ' ಎಂಬುದು ಪ್ರಯೋಗವಲ್ಲವಾದುದರಿಂದ 'ಖಂಡಿಸಿದಪಂ' ಎಂಬ ಪ್ರಯೋಗವನ್ನು ಕೊಟ್ಟಿರಬೇಕು.

ಸೂತ್ರ ೨೩೩ರಲ್ಲಿ 'ದಪ' ದ ಪಕಾರಕ್ಕೆ ದ್ವಿಭಾವವನ್ನು ಹೇಳಿದೆ. ಇದರಲ್ಲಿ ಪ್ರಯೋಗಕ್ಕಾಗಿ 'ನಿರಿದಪ್ಪಂ' ಎಂಬ ಪದವನ್ನು ಕೊಟ್ಟಿದೆ. ಇದು ಕೇಶಿರಾಜನ ಧಾತುಪಾಠದಲ್ಲಿ—ಮುದ್ರಿತಪ್ರತಿಗಳಲ್ಲಿ—ಇಲ್ಲ. ಕಿಟಲ್ ಅವರ ನಿಘಂಟುವಿನಲ್ಲಿ 'ನಿರಿ' ಎಂಬ ಧಾತುವಿಲ್ಲ. ಈ ಪದಕ್ಕೆ ಈ ಪ್ರತಿಯಲ್ಲಿ ಅರ್ಥವನ್ನೂ ಕೊಟ್ಟಿದೆ, ನಿರಿ, ಹನನೇ ಎಂದು. ಇದರ ಪ್ರಯೋಗವನ್ನು ನೋಡಿ.

**'ನಿರಿದಪ್ಪಂಮಗಧೇಶನಂ ನಿಲಿಸಿದಪ್ಪಂಚೋಳನಂ'** ಇಲ್ಲಿ ನಿರಿ, ನಿಲಿ ಎಂಬ ಪ್ರಯೋಗವನ್ನು (ಅನುಪ್ರಾಸ) ಗಮನಿಸಬೇಕು.

ಸೂತ್ರ ೨೩೭ ರಲ್ಲಿ ಮಿೞ, ಕೊಲ್, ಸಲ್, ತರ್, ಬರ್, ಇವುಗಳಿಗೆ, ದ, ದಪಗಳು ಪರವಾದರೆ ಕೊನೆಯಅಕ್ಷರ ಲೋಪವಾಗಿ ನಕಾರವಾಗುವುದೆಂದು ಹೇಳಿದೆಯಷ್ಟೆ. ಇಲ್ಲಿ ಮಿೞ ಧಾತುವನ್ನು ಮಿಯ್, ವ್ಯಂಜನ ಯ್‌ಕಾರಾಂತವಾಗಿ

ಕೊಟ್ಟಿದೆ. ವೃತ್ತಿಯಲ್ಲಿ 'ಮಿಯ್' ಎಂಬ ಯಕಾರಕ್ಕಂ' ಎಂದು ಹೇಳಿದೆ. ಇದರಿಂದ ಈ ಧಾತು ಯ್‌ಕಾರಾಂತವೆಂದೇ ತಿಳಿಯಬೇಕು. 'ಲ್'ಕಾರಾಂತಕ್ಕೆ ನ್‌ಕಾರಬರುವಂತೆ, ಯ್‌ಕಾರಾಂತಕ್ಕೂ ನ್‌ಕಾರ ಬರುವುದು ಸಹಜವಾಗಿದೆ. ಏಕೆಂದರೆ ಯಲವಕಾರಗಳು ಕನ್ನಡದಲ್ಲಿ ಅನುನಾಸಿಕಗಳಾಗಿವೆ. ಈ ವಿಷಯವಾಗಿ ನನ್ನ ಗುರುಗಳಾಗಿದ್ದ ಪೂಜ್ಯಶ್ರೀಮಾನ್ ಟಿ. ಎಸ್. ವೆಂಕಣ್ಣಯ್ಯನವರು ಕೈಪಿಡಿಯ ಭಾಷಾಚರಿತ್ರೆಯಲ್ಲಿ ಬರೆದುದನ್ನು ಇಲ್ಲಿ ಉದ್ಧರಿಸಿದೆ.

"ಭೂತಕಾಲದಲ್ಲಿ (೧) ಮಿೂ, ಬೇ, ನೋ ಎಂಬ ಧಾತುಗಳಿಗೆ ಮಿಂದ, ಬೆಂದ, ನೊಂದ ಎಂಬ (೨) ಕೊಲ್, ಸಲ್ ಧಾತುಗಳಿಗೆ ಕೊಂದ, ಸಂದ, ಎಂಬ (೩) ಕೊಳ್‌ಧಾತುಗೆ ಕೊಂಡ, ಎಂಬ (೪) ಸಾ, ಈ, ಧಾತುಗಳಿಗೆ ಸತ್ತ, ಇತ್ತ, ಎಂಬ (೫) ತರ್. ಬರ್, ಧಾತುಗಳಿಗೆ ತಂದ ಬಂದ, ಎಂಬ ರೂಪಗಳು ಬರುತ್ತವೆ. ಕನ್ನಡ ವ್ಯಾಕರಣಗಳಲ್ಲಿ ಈ ರೂಪಗಳು ಹೇಗೆ ಸಿದ್ಧಿಸುತ್ತವೆಂಬ ವಿಚಾರವಾಗಿ ಹೇಳಿರುವುದು ಭಾಷಾಶಾಸ್ತ್ರದೃಷ್ಟಿಯಿಂದ ಸಮರ್ಪಕವಾಗಿಲ್ಲ. 'ಮಿೂ ಧಾತುಗೆ 'ದ'ಪರವಾದಾಗ ಅದರ ದೀರ್ಘಕ್ಕೆ ಹ್ರಸ್ವಾದೇಶವಾಗುವುದೆಂದೂ, ಅನುಸ್ವಾರಾಗಮವಾಗುವುದೆಂದೂ ಹೇಳಿದರೆ, ಆಗತಕ್ಕ ಕಾರ್ಯವನ್ನು ಶಾಸ್ತ್ರಪರಿಭಾಷೆಯಲ್ಲಿ ಹೇಳಿದಂತಾಯಿತೆ ಹೊರತು ಕಾರಣವನ್ನು ಹೇಳಿದಂತೆ ಆಗುವುದಿಲ್ಲ. ಆ ಕಾರಣವೇನಿರಬಹುದೆಂಬುದು ವಿಚಾರಾರ್ಹವಾದ ವಿಷಯವಾಗಿದೆ. ಅದನ್ನು ಹೀಗೆ ಸೂಚಿಸಬಹುದು. (೧) ಮಿೂ, ಬೇ, ನೋ, ಧಾತುಗಳರೂಪವು "ಮಿಯ್, ಬೆಯ್, ನೊಯ್" ಎಂದಿದ್ದು ಅಂತ ಯಕಾರವು ಅನುನಾಸಿಕವಾಗಿದ್ದಿರಬೇಕು." ಇತ್ಯಾದಿ (ಕನ್ನಡ ಕೈಪಿಡಿ ಎರಡನೆಯ ಮುದ್ರಣ. ಪುಟ ೪೩೫) ಶ್ರೀಮಾನ್ ಪೂಜ್ಯ ವೆಂಕಣ್ಣಯ್ಯನವರು ಬರಿಯ ಭಾಷಾಶಾಸ್ತ್ರ ದೃಷ್ಟಿಯಿಂದ ಊಹಿಸಿ 'ಮಿಯ್' ಧಾತುವಿನ ಸ್ವರೂಪವನ್ನು ಸೂಚಿಸಿದ್ದರು. ಅವರ ಈ ಸೂಚನೆ ಯಥಾರ್ಥವಾದುದೆಂಬುದು ಹೊಸಪ್ರತಿಯ ಪಾಠ 'ಮಿಯ್ ಎಂಬ ಯಕಾರಕ್ಕಂ....ನಕಾರಾದೇಶಂ' ಎಂಬುದರಿಂದ ನಿರ್ಣಯವಾಗುತ್ತದೆ. ಪಂಡಿತರ ಸಮಂಜಸವಾದ ಊಹೆ ಸತ್ಯಾಂಶಕ್ಕೆ ವಿರೋಧವಾಗಿರುವುದಿಲ್ಲವೆಂಬುದು ಇದರಿಂದ ಗೊತ್ತಾಗುತ್ತದೆ.

ಸೂತ್ರ ೨೪೦ರಲ್ಲಿ ಱಾಂತವಾದ ಪದಗಳಿಗೆ ದಕಾರ ಪರವಾದಾಗ ಸ್ವರ ರಹಿತ 'ತ' ಕಾರವಾಗುವುದೆಂದು ಹೇಳಿದೆ. ಇದಕ್ಕೆ ಉದಾಹರಣೆಯಲ್ಲಿ:–ಕಿಱು > ಕೆತ್ತಂ, ತಿಱು > ತೆತ್ತಂ, ಗಿಱು > ಗೆತ್ತಂ ಇವುಗಳ ಜೊತೆಗೆ ಪೆಱು > ಪೆತ್ತಂ, ಎಂದು ಹೇಳಿದೆ. ಇಲ್ಲಿ ಕಿಱು, ತಿಱು, ಗಿಱು ಇವೆಲ್ಲ ಆದಿಯಲ್ಲಿ 'ಇ' ಕಾರವುಳ್ಳವುಗಳು. ಭೂತಕಾಲವನ್ನು ತಿಳಿಸುವಾಗ ಇವುಗಳಲ್ಲಿಯ ಇಕಾರವು ಎಕಾರವಾಗುವುದು. (ಸೂ. ೨೩೮) 'ಪೆಱು' ಎಂಬ ಧಾತು ಆದಿಯಲ್ಲಿ 'ಪಿಱು' ಆಗಿರಬೇಕೆಂದು ಇದರಿಂದ ಊಹಿಸಬೇಕಾಗಿದೆ. ಆದರೆ ಎಲ್ಲಾ ಮುದ್ರಿತ ಪ್ರತಿಗಳಲ್ಲಿ 'ಪೆಱು' ಎಂಬ ಪಾಠವಿದೆ. ಹೊಸ ಪ್ರತಿಯಲ್ಲಿ 'ಪಿಱು' ವೆಂಬ ಸಾಧು ಪಾಠವನ್ನೇ ಕೊಡಲಾಗಿದೆ.

ಸೂತ್ರ ೨೪೧ರಲ್ಲಿ ಕ, ಚ, ಟ, ತ, ಪಕಾರಗಳು ಕೊನೆಯೂದ ಧಾತುಗಳಿಗೆ ಭೂತಕಾಲದ 'ದ' ಕಾರವು ಪರವಾದಾಗ ಆ 'ದ' ಕಾರಕ್ಕೆ ಹಿಂದಿನ ರೂಪವೇ ಬರುವುದು ಎಂದೂ, ಕೆಲವೆಡೆಗಳಲ್ಲಿ ಈ ದಕಾರಕ್ಕೆ ಡಕಾರವೂ, ತಕಾರವೂ ಬರುವುದೆಂದೂ ಹೇಳಿದೆ. ಒಮ್ಮೆ ಇದಕ್ಕೆ 'ಅ' ಕಾರ ಬರುವುದೆಂಬುದನ್ನು ತಿಳಿಸಿದೆ. ಇವುಗಳಿಗೆ ಉದಾಹರಣೆಗಳಲ್ಲಿ ಒಕ್ಕರ್, ಎಚ್ಚಂ, ತೊಟ್ಟಂ, ಪೆತ್ತಂ, ತಪ್ಪಂ, ಉಂಡಂ, ನೋಲ್ತಂ, ಎಂಬಿವುಗಳು ಅನುಕ್ರಮವಾಗಿ ಬಂದಿವೆ. ಕೊನೆಯದಾದ 'ಒಮ್ಮೆಯಕಾರಂ' ಎಂಬುದಕ್ಕೆ ಪ್ರಯೋಗದಲ್ಲಿ, ಅಕಾರಕ್ಕೆ:— ಬೆರಂಟಂ. ಬೆರಂಟುವು ಪೊಕ್ಕುಲನುಗುರಿಸಿದುವು ತುಱುಂಬು—ಎಂದಿದೆ. ಬೆರಂಟಂ ಎಂಬುದಕ್ಕೆ ಅಡಿ ಟಿಪ್ಪಣಿಯಲ್ಲಿ ಒಂದು ಸೂಲ್, ದಕಾರಕ್ಕೆ ಟಕಾರಮುಕ್ಕುಂ ಎಂದಿದೆ. ಇದೆಲ್ಲ ಸಂದಿಗ್ಧವಾಗಿದೆ. ಸೂತ್ರದಲ್ಲಿ ಅಕಾರವೆಂದಿದೆ, ಪ್ರಯೋಗದಲ್ಲಿ ಬೆರಂಟುವು ಎಂದಿದೆ, ಅಡಿಟಿಪ್ಪಣಿಯಲ್ಲಿ ದಕಾರಕ್ಕೆ ಟಕಾರವೆಂದಿದೆ. ಇದರಲ್ಲಿ ಯಾವುದು ಸರಿ? ಸೂತ್ರಕಾರನ ಅಭಿಮತವೇನು? ಇದು ಸ್ಪಷ್ಟವಾಗಿಲ್ಲ. ಲಿಂಗಣಾರಾಧ್ಯನ ಪ್ರತಿಯಲ್ಲಿ ಕೊನೆಯ ಚರಣದ ಅಂತ್ಯದಲ್ಲಿ 'ಒರ್ಮೆಟಕಾರಂ' ಎಂದು ಪಾಠಾಂತರವಿದೆ. ಅದಕ್ಕೆ ಪ್ರಯೋಗವೂ ಇಲ್ಲ, ಉದಾಹರಣೆಯೂ ಇಲ್ಲ ಇದು ನಡು ನೀರಿನಲ್ಲಿ ಕೈ ಬಿಟ್ಟಂತಾಗಿದೆ. ಹೊಸ ಪ್ರತಿಯ ಸೂತ್ರದ ಪಾಠವನ್ನೂ, ಪ್ರಯೋಗವನ್ನೂ ನೋಡಿದರೆ ಈ ಸಂದೇಹವೆಲ್ಲ ನಿವಾರಣವಾಗುವುದು.

ನಿರುತಂ ಕ ಚ ಟ ತ ಪಂಗಳ |
ಪರದ, ದಕಾರಕ್ಕೆ ಪೂರ್ವ್ವರೂಪ ಮುದಕ್ಕುಂ ||
ಪರವರ್ಣ್ಣಂ ಧಾತ್ವಂತ್ಯದೊ |
ಳಿರೆ ಡತ್ವಂ ಮೇಣ್ ತಕಾರಮೊರ್ಮ್ಮೆ ಟಕಾರಂ ||

"ಒರ್ಮ್ಮೆಟಕಾರಂ" ಎಂಬ ಪಾಠ ಇಲ್ಲಿಯೂ, ಲಿಂಗಣಾರಾಧ್ಯನ ಪ್ರತಿಯಲ್ಲಿಯೂ ಒಂದೇ ರೂಪದಲ್ಲಿದೆ ಒಮ್ಮೆ 'ಅ' ಕಾರವೆಂಬ ಪಾಠ ಸರಿಯಲ್ಲವೆಂದು ಇದರಿಂದ ತಿಳಿಯಬಹುದಾಗಿದೆ. ಪ್ರಯೋಗದಿಂದ ಇದು ಮತ್ತಷ್ಟು ಸ್ಪಷ್ಟವಾಗುವುದು.

'ಒರ್ಮ್ಮೆಟಕಾರಂ' ಎಂಬುದರ ವಿವರಣೆಯಲ್ಲಿ 'ಒಂದು ಸೂಲು 'ದ'ಕಾರಕ್ಕೆ ಟಕಾರಮುಕ್ಕುಂ' ಎಂದು ಹೇಳಿದೆ. ಅದಕ್ಕೆ ಪ್ರಯೋಗವಾಗಿ "ಬೆರಂಟುವು ಪೊಕ್ಕುಲನುಗ್ಗುರಿಸಿದುವು ತುಱುಂಬು" ಎಂದು ಹೇಳಿದೆ. ಇಲ್ಲಿ ಧಾತುವೇನು? ಹೊಸ ಪ್ರತಿಯಲ್ಲಿ ಆ ಭಾಗವು ಬಿಟ್ಟುಹೋಗಿದೆ. ಆದರೆ ಆ ಧಾತುವಿನ ಅರ್ಥವನ್ನು ಮಾತ್ರ ಸರಿಯಾಗಿ ಕಾಣಬಹುದಾಗಿದೆ. ಅದಕ್ಕೆ "ಅಂಟಂ ಮುಟ್ಟಿದನೆಂಬರ್ಥಂ" ಎಂದು ಹೇಳಿದೆ. 'ಬೆರಂಟುವು ಪೊಕ್ಕುಲಂ' ಎಂದರೆ (ದೃಷ್ಟಿಗಳು) ಹೊಕ್ಕುಳನ್ನು ಚೆನ್ನಾಗಿ ಅಂಟಿಕೊಂಡುವು ಎಂಬ ಭಾವ. ಕವಿ ವಿಟನಾಯಕನ ದೃಷ್ಟಿಯನ್ನು ಕುರಿತು ಹೇಳಿದ ಮಾತಾಗಿರಬೇಕು ಇದು. ನಾಯಕನ ದೃಷ್ಟಿ—ಕಣ್ಣು—ಗಾಢವಾಗಿ ನಾಟಿದುವು ಎಂದು ತಾತ್ಪರ್ಯ. ಧಾತು ಪಾಠದಲ್ಲಿಯಾದರೋ ಬೆರಂಟು ಎಂಬ

ಧಾತುಗೆ ಅಂಗುಲಿ ಕ್ರಿಯಾಯಾಂ ಎಂದು ಹೇಳಿದೆ. ಈ ಅರ್ಥವು ಈ ಸಂದರ್ಭದ ಹೊಂದಿಕೆಯಾಗುವುದಿಲ್ಲ. ಬೆರಣ್ ಎಂಬುದು ಮೂಲ ಧಾತುವಾಗಿರಬೇಕೆಂದು ಊಹಿಸಬಹುದಾಗಿದೆ.

ಸೂತ್ರ ೨೪೫ರ ಪ್ರಯೋಗಕ್ಕೆ ಗ್ರಂಥವು ನಷ್ಟವಾಗಿದೆ. ಧಾತು ಪಾಠದಲ್ಲಿಯೂ ಅನೇಕ ಗರಿಗಳು ಕಳೆದು ಹೋಗಿವೆ. ನಷ್ಟವಾದಭಾಗದಲ್ಲಿ ಹೊಸ ಧಾತುಗಳೆಷ್ಟೋ ಕಣ್ಮರೆಯಾಗಿರಬೇಕು.

ತದ್ಭವ ಪ್ರಕರಣ, ಅವ್ಯಯ ಪ್ರಕರಣ ಇವೆರಡು ಬರಿಯ ಶಬ್ದಗಳ ಪಟ್ಟಿಯನ್ನು ವಿವರಿಸುವುದರಿಂದ ಅಲ್ಲಿ ಹೆಚ್ಚಿನ ವ್ಯಾಖ್ಯಾನಕ್ಕೂ ಪಾಠಾಂತರಕ್ಕೂ ಅವಕಾಶವಿಲ್ಲ. ತದ್ಭವ ಪ್ರಕರಣ ಸೂ. ೨೬೧ರ ಕೆಳಗೆ ಎರಡು ಪದ್ಯಗಳು ಪೂರ್ಣವಾಗಿ ಉದಾಹೃತ ವಾಗಿವೆ.

ಅಚ್ಚಾಗಿರುವ ಪ್ರತಿಗಳ ಪಾಠಗಳಲ್ಲಿಯ ಅನೇಕ ಸಂದೇಹಗಳನ್ನು ಹೊಸ ಪ್ರತಿ ಎಷ್ಟರಮಟ್ಟಿಗೆ ನಿವಾರಿಸುತ್ತದೆ ಎಂಬುದು ಇದುವರೆಗೆ ನಡೆಸಿದ ಪರಿಶೀಲನೆಯಿಂದ ವ್ಯಕ್ತವಾಗಿದೆ. ಬರಿಯಪಾಠಗಳ ಸಾಧುತ್ವವೇ ಅಲ್ಲ, ಈ ಪ್ರತಿಯಿಂದ ತಿಳಿಯಬಂದ ಇನ್ನಿತರ ಅಂಶಗಳು ಎಂದರೆ, ಕವಿರಾಜಮಾರ್ಗದ ಕರ್ತೃ, ಆಡಯ್ಯ ಎಂಬ ಹೆಸರಿನ ಸುಪ್ಪು ಪ್ರಯೋಗ, ದಕ್ಷಿಣೋತ್ತರ ಮಾರ್ಗಗಳು, ಅನೇಕ ಹೊಸ ಪ್ರಯೋಗಗಳು. ಇವೆಲ್ಲ ಮಹತ್ತ್ವವುಳ್ಳುವಾಗಿವೆ. ಈಗಿನಕಾಲದಲ್ಲಿ ನಾವುಗಳು ನಮಗೆ ಉಪಲಬ್ಧ ವಾಗಿರುವ ವ್ಯಾಕರಣಗಳಲ್ಲಿ ಪ್ರತಿಪಾದಿತವಾದ ವಿಷಯಗಳಲ್ಲಿ ಹೋಲಿಕೆಎಲ್ಲೆಲ್ಲಿ ಕಾಣುವುದೆಂಬ ವಿಷಯವಾಗಿ ತುಲನಾತ್ಮಕವಾದ ವ್ಯಾಸಂಗವನ್ನು ನಡೆಸುತ್ತಿದ್ದೇ ವೆಯಷ್ಟೆ. ಶ್ರೀ. ಪಂಜೆ ಮಂಗೇಶರಾಯರೂ, ಲಿಂಗಣಾರಾಧ್ಯನ ಪ್ರತಿಯನ್ನು ಸಂಪಾದಿ ಸಿರುವ ಮಹಾಶಯರೂ ಶಬ್ದಮಣಿದರ್ಪಣ, ಕಾವ್ಯಾವಲೋಕನದ ಶಬ್ದಸ್ಮೃತಿ, ಭಾಷಾಭೂಷಣಗಳಲ್ಲಿ ವಿಷಯೈಕತೆಯುಳ್ಳ ಹೋಲಿಕೆಗಳ ಸೂತ್ರಗಳನ್ನು ಸೇರಿಸಿ ದ್ದಾರೆ. ಹೊಸ ಪ್ರತಿಯ ವ್ಯಾಖ್ಯಾನಕಾರನು ಈ ಕಾರ್ಯವನ್ನು ನೂರಾರುವರ್ಷಗಳ ಕೆಳಗೆ ಮಾಡಿರುವುದು ನಮಗೆ ಹೊಸಪ್ರತಿಯಿಂದ ವ್ಯಕ್ತವಾಗಿದೆ. ಈ ಎಲ್ಲ ದೃಷ್ಟಿಯಿಂದ ಹೊಸ ಪ್ರತಿಯ ಮಹತ್ತ್ವವು ಹೆಚ್ಚಿದೆಯೆಂದು ಹೇಳಬೇಕಾಗುತ್ತದೆ.

---

# ಅನುಭವಾಮೃತ
## ಮತ್ತು
# ಹರಿಕಥಾಮೃತಸಾರ

ಕನ್ನಡ ನುಡಿಯ ಸೊಬಗನ್ನೂ, ಅದರ ಸುಭಗತೆಯನ್ನೂ ಮುಕ್ತಕಂಠದಿಂದ ಹಾಡಿದ ಮಹಲಿಂಗರಂಗನ ಕೃತಿ ಅನುಭವಾಮೃತವನ್ನು, ಕನ್ನಡ ನಾಡಿನ ಆಬಾಲ ವೃದ್ಧರು ಎಲ್ಲರು ಚಿಕ್ಕಂದಿನಲ್ಲಿ ಕನ್ನಡದ ಓದು ಸ್ವಲ್ಪ ಮಟ್ಟಿಗೆ ಕಲಿತು ಪದ್ಯಗಳನ್ನು ಕಂಠಪಾಠ ಮಾಡುವ ಕಾಲ ಪ್ರಾಪ್ತವಾದಾಗಲೇ

> ಸುಲಿದ ಬಾಳೆಯಹಣ್ಣಿನಂದದಿ |
> ಕಳಿದ ಸಿಗುರಿನ ಕಬ್ಬಿನಂದದ |
> ಲಳಿಸಿದುಷ್ಣದ ಹಾಲಿನಂದದಿ ಸುಲಭವಾಗಿರ್ಪ ||
> ಲಲಿತಪಹ ಕನ್ನಡದ ನುಡಿಯು .... ಪರಿಚಯವಾಗುವುದು.

ಅಂದಿನಿಂದಲೇ ಈ ಕವಿಯ ವಿಷಯವಾಗಿ ಹೆಸರು ತಿಳಿದಾಗಲಿ, ತಿಳಿಯದಾಗಲಿ ಅಭಿಮಾನ ಸಹಜವಾಗಿ ಹುಟ್ಟುವುದು. ಇವನ ಆ ಎರಡು ಪದ್ಯಗಳು ಕನ್ನಡ ಸಾಹಿತ್ಯದಲ್ಲಿ ಅಮರತೆಯನ್ನು ಪಡೆದಿವೆ. ಆದರೂ ರಂಗನಾಥನ ಕಾವ್ಯದ ವಿಷಯದಲ್ಲಿ ಕನ್ನಡಿಗರು ಎಷ್ಟು ಬೇಕೋ ಅಷ್ಟು ಆಸ್ಥೆಯನ್ನು ತೋರಿಸುತ್ತಿಲ್ಲ. ಇದಕ್ಕೆ ಕಾರಣವೇನು? ಇದರಲ್ಲಿ ಪ್ರತಿಪಾದಿತವಾದ ವಿಷಯವು ಅಧ್ಯಾತ್ಮವೆಂದೋ? ಸಾಮಾನ್ಯವಾಗಿ ಅನುಭವಾಮೃತವನ್ನು ಪೆನ್‌ಷನ್ ತೆಗೆದುಕೊಂಡವರು ಓದುವ ಪುಸ್ತಕವೆಂದು ಭಾವಿಸಲಾಗಿದೆ. ಎಂದರೆ ಪೆನ್‌ಷನ್ ತೆಗೆದುಕೊಳ್ಳುವ ಮುಂಚೆ

ಈ ಗ್ರಂಥವು ಓದಲರ್ಹವಾದುದಲ್ಲವೆಂದು ಜನರ ಅಭಿಪ್ರಾಯ. ಹಾಗೆ ಯಾರಾದರೂ ಓದಿದರೂ ಅವರ ವಿಷಯವಾಗಿ ನಾವು ಎಂಥ ಅಭಿಪ್ರಾಯಪಡುತ್ತೇವೆಂಬುದನ್ನು ಇಲ್ಲಿ ಹೇಳಬೇಕಾಗಿಲ್ಲ. ಹೀಗಿರುವಾಗ ಅಂಥ ಎರಡು ಗ್ರಂಥಗಳನ್ನು ಕುರಿತು ಇಲ್ಲಿ ಮಾತಾಡುವ ಸನ್ನಿವೇಶ ಒದಗಿರುವಾಗ ಭಾಷಣಕಾರನನ್ನು ಕುರಿತು ಏನು ಅಭಿಪ್ರಾಯ ಉಂಟಾಗುವುದರೆಂಬುದರ ಅರಿವು ಭಾಷಣಕಾರನಿಗೆ ಚೆನ್ನಾಗಿದೆ. ನಮ್ಮ ಜನರು ಇತ್ತೀಚೆಗೆ ಅಧ್ಯಾತ್ಮ ವಿಷಯದಲ್ಲಿ ಆಸಕ್ತಿ ತೋರಿಸುವುದನ್ನು ಬಿಟ್ಟಿದ್ದಾರೆ. ಅಥವಾ ಪರಿಸ್ಥಿತಿ ಅವರನ್ನು ಹೀಗೆ ಮಾಡಿದೆಯೋ? ಅಧ್ಯಾತ್ಮವನ್ನು ಚಿಂತಿಸಿ ಚಿಂತಿಸಿ ನಮ್ಮವರು ಬೇಸತ್ತಿದ್ದಾರೆ, ಇವರಿಗೆ ಅದರಲ್ಲಿ ರೋಸಿಕೆಯುಂಟಾಗಿದೆ, ಇವರ ಕೈಯಲ್ಲಿ ಅಂಥ ಪುಸ್ತಕಗಳು ಶೋಭಿಸವು, ಎಂದೂ ಹೇಳುವುದುಂಟು. ಅವು ಸ್ವಯಂ ನೀರಸವಾದುವುಗಳು. ಇಂಥವುಗಳಿಗೆ ಸಂಶೋಧನೆಯ ಬಣ್ಣ ಬಳಿದರೆ ನಿರ್ಗಂಧ ಕುಸುಮವು ವರ್ಣ ವಿಹೀನವೂ ಆದಂತಾಗುವುದು. ಈ ಭಾವನೆ ಎಷ್ಟು ಮಟ್ಟಿಗೆ ಯುಕ್ತವಾದುದೆಂಬುದು ಇಲ್ಲಿ ವಿಚಾರಣೀಯವಲ್ಲ. ಅಧ್ಯಾತ್ಮ ವಿದ್ಯೆಯ ವ್ಯಾಸಂಗವೂ ಆ ವಿಷಯದ ಸಂಶೋಧನೆಯೂ ಎಲ್ಲರಿಗೂ, ಎಲ್ಲಾ ಕಾಲಾವಸ್ಥೆಯಲ್ಲಿಯೂ ರುಚಿಸತಕ್ಕುವಲ್ಲವಾದರೂ ಆ ವಿದ್ಯೆಗೆ ಜೀವನದಲ್ಲಿ ಒಂದು ಸ್ಥಾನವಿದೆ; ಮಹತ್ತ್ವದ ಸ್ಥಾನವಿದೆಯೆಂಬುದು ಪೆನ್‌ಷನ್ ತೆಗೆದುಕೊಳ್ಳುವ ಮುಂಚೆ ತಿಳಿಯದಿದ್ದರೂ ಪೆನ್‌ಷನ್ ತೆಗೆದುಕೊಂಡ ಮೇಲಾದರೂ ತಿಳಿಯುತ್ತದೆಂದು ಹೇಳಬಹುದು. ಆ ಒಂದು ನಂಬುಗೆಯಿಂದ ಈಗ ಈ ವಿಷಯವನ್ನು ಕೈಗೆ ತೆಗೆದುಕೊಂಡಿದೆ. ಅಲ್ಲದೆ ಇದು ಸರ್ವ ಧರ್ಮಗಳನ್ನೂ ಸಮದೃಷ್ಟಿಯಿಂದ, ಸಹಾನುಭೂತಿಯಿಂದ ನೋಡುವ ಕಾಲ ಕನ್ನಡದಲ್ಲಿ ಸಕಲ ಮತೀಯರೂ ಗ್ರಂಥಗಳನ್ನು ರಚಿಸಿದ್ದಾರೆ. ಜೈನ, ವೀರಶೈವ, ಬ್ರಾಹ್ಮಣ ಸಾಹಿತ್ಯಗಳನ್ನು ಎಲ್ಲರೂ ನಿರ್ವಂಚನೆಯಿಂದ ಅಭ್ಯಾಸ ಮಾಡುತ್ತಾರೆ. ಜೈನ, ವೀರಶೈವ ಸಾಹಿತ್ಯ ಗ್ರಂಥಗಳನ್ನು ಅನ್ಯಮತೀಯರು ಶೋಧಿಸಿ ತಂತಮ್ಮ ಅಭಿಪ್ರಾಯಗಳನ್ನು ವ್ಯಕ್ತಗೊಳಿಸುತ್ತಲಿದ್ದಾರೆ. ಬ್ರಾಹ್ಮಣ ಸಾಹಿತ್ಯದಲ್ಲಿ ಸಂಶೋಧನೆಯ ಕೆಲಸವು ಹೆಚ್ಚು ನಡೆದಿಲ್ಲ. ದ್ವೈತಾದ್ವೈತ ಗ್ರಂಥಗಳು ಕನ್ನಡದಲ್ಲಿ ಮೊದಲೇ ಕಡಮೆ. ಇದರಲ್ಲಿ ಮಾಡಬೇಕಾದ ಕೆಲಸ ಬೇಕಾದಷ್ಟಿದೆ. ಪ್ರಸ್ತುತ ವಿಷಯವನ್ನು ತೆಗೆದುಕೊಳ್ಳುವುದಕ್ಕೆ ಇದೂ ಒಂದು ಕಾರಣವಾಗಿದೆ.

ಈ ಅಧ್ಯಾತ್ಮ ಗ್ರಂಥಗಳಲ್ಲಿ ಮೊದಲಿಂದ ಕೊನೆಯ ವರೆಗೆ ಪಾರಮಾರ್ಥಿಕ ವಿಷಯದ ಪ್ರಸ್ತಾಪವಿದ್ದರೂ ಇವುಗಳಲ್ಲಿ ಕಾವ್ಯ ಭಾಗವಿಲ್ಲದೆ ಇಲ್ಲ. ಕಾವ್ಯವೆಂದರೆ ಬರಿಯ ಶೃಂಗಾರ–ಸ್ತ್ರೀ ಶೃಂಗಾರವಲ್ಲವಷ್ಟೆ. ಚಿತ್ತಾಕರ್ಷಕವಾದ, ಭಾವೋದ್ರೇಕಗಳಾದ ಬೋಧಪ್ರದವಾದ ಪದ್ಯಗಳು ಅಲ್ಲಲ್ಲಿ ರಸಿಕರ ಮನಸ್ಸನ್ನಾಕರ್ಷಿಸುತ್ತವೆ ಈ ಗ್ರಂಥಗಳಲ್ಲಿ. ಸತ್ಯ, ಅದೇ ಪರಮಾತ್ಮ ತತ್ತ್ವ–ಅದರ ವರ್ಣನೆ, ಆ ತತ್ತ್ವದಲ್ಲಿ ಗಾಢವಾದ ಅನುರಕ್ತಿ, ಅದನ್ನು ಸಂಪಾದಿಸುವ ಮಾರ್ಗ–ಇವುಗಳನ್ನು ಹೇಳುವ

ರೀತಿ, ಭಾಷೆ ಇವೆಲ್ಲ ಈ ಗ್ರಂಥಗಳಲ್ಲಿ ಹೃದಯಂಗಮವಾಗಿವೆ. ಈ ದೃಷ್ಟಿಯಿಂದ ಅನುಭವಾಮೃತ, ಹರಿಕಥಾಮೃತಸಾರ ಇವೆರಡು ಒಂದನ್ನೊಂದು ಹೇಗೆ ಹೋಲುತ್ತವೆ, ಕವಲೊಡೆದು ಎರಡು ದಾರಿಗಳು ಒಂದು ನಿರ್ದಿಷ್ಟ ಸ್ಥಾನವನ್ನು ಹೇಗೆ ಸೇರುತ್ತವೆ ಎಂಬುದನ್ನು ಇಲ್ಲಿ ಪರಿಕಿಸಬೇಕು.

ಅನುಭವಾಮೃತದಿಂದಲೂ ಕವಿಚರಿತೆಯಿಂದಲೂ ರಂಗನಾಥನ ವಿಷಯವಾಗಿ ಈ ಕೆಳಗಣ ಅಂಶಗಳು ತಿಳಿದು ಬರುತ್ತವೆ. "ಇವನು ಬ್ರಾಹ್ಮಣ ಕವಿ. ಇವನ ತಂದೆ ಸಹವಾಸಿ ವಂಶದ ಮಹಲಿಂಗದೇವ; ಗುರು ಪರಮಹಂಸ ಪರಿವ್ರಾಜಕಾಚಾರ್ಯ ಸಹಜಾನಂದ. ಇವನಿಗೆ ರಂಗಾವಧೂತ ಎಂಬ ಹೆಸರೂ ಉಂಟು. ತನ್ನ ಗ್ರಂಥವನ್ನು ಶ್ರೀಗಿರಿಯ ಮಲ್ಲಿಕಾರ್ಜುನ ದೇವರ ಅಂಕಿತದಲ್ಲಿ ಬರೆದಿದ್ದಾನೆ.... ಕವಿಯ ಕಾಲ ಸುಮಾರು ೧೬೭೫ ಆಗಬಹುದು. (ಕವಿಚರಿತೆ ಭಾಗ ೨ ಪುಟ ೪೯೦. ೪೯೧)

ಈ ಕವಿಗೆ ಮಹಲಿಂಗರಂಗ, ರಂಗಾವಧೂತ, ರಂಗನಾಥ ಹೀಗೆ ಮೂರು ಹೆಸರು ಬಳಕೆಯಲ್ಲಿದ್ದಂತೆ ಕಂಡು ಬರುತ್ತದೆ. ಮಹಲಿಂಗರಂಗ ಎಂಬುದರಲ್ಲಿ ಇವನ ಹೆಸರಿನ ಜೊತೆಗೆ ತಂದೆಯ ಹೆಸರೂ ಇದೆ. ರಂಗಾವಧೂತನೆಂಬುದು ಇವನು ಯೋಗಿಯಾದ ಮೇಲೆ ಪ್ರಚಾರಕ್ಕೆ ಬಂದ ಹೆಸರಾಗಿರಬೇಕು ಇವನ ಬಳಕೆಯ ಹೆಸರು ರಂಗನಾಥನೆಂದಿರಬೇಕು. ಕವಿ ಈ ಹೆಸರನ್ನೇ ಗ್ರಂಥಾರಂಭದ ಎರಡನೆಯ ಪದ್ಯದಲ್ಲಿ "ಶ್ರೀಗುರುವಿನುಪದೇಶದಿಂದನುರಾಗವುದಿಸಲು ರಂಗನಾಥನು ಯೋಗಿಜನರಹುದೆನಲು ಪೇಳಿದನನುಭವಾಮೃತವ" ಎಂದು ಹೇಳಿದ್ದಾನೆ. ರಂಗಾವಧೂತನೆಂಬುದು ಗ್ರಂಥದಲ್ಲಿ ಕಾಣುವುದಿಲ್ಲವಾದುದರಿಂದ ಇವನು ತುರೀಯಾಶ್ರಮವನ್ನು ಸ್ವೀಕರಿಸುವುದಕ್ಕೆ ಮುನ್ನವೇ ಅನುಭವಾಮೃತವನ್ನು ಬರೆದಿರಬೇಕು. ಅದನ್ನು 'ಯೋಗಿಜನರಹುದೆನಲು 'ಪೇಳಿ' ದುದರಿಂದ ಯೋಗಿಗಳ ಪ್ರೇರಣೆಗೊಳಗಾಗಿ ಇವನು ಆಮೇಲೆ ಸಹಜಾನಂದ ಗುರುವಿನಲ್ಲಿ ಆಶ್ರಮವನ್ನು ಗ್ರಹಿಸಿರಬೇಕು. ಅದೇಗಿ ಇರಲಿ, ಇಲ್ಲಿ ಇವನ ಹೆಸರಿನಲ್ಲಿರುವ 'ನಾಥ' ಎಂಬ ಪದವು ನಮ್ಮ ದೃಷ್ಟಿಯನ್ನು ಮತ್ತೊಂದು ಹೊಸ ವಿಷಯದ ಕಡೆಗೆ ತಿರುಗಿಸುತ್ತದೆ. ರಂಗನಾಥನು ನಾಥ ಸಂಪ್ರದಾಯದ ಬ್ರಾಹ್ಮಣನಾಗಿರಬೇಕು ಎಂದು ಊಹಿಸಲು ಅವಕಾಶವಿದೆ. ರಂಗನಾಥನು ಅನುಭವಾಮೃತವನ್ನು ಮಹಾರಾಷ್ಟ್ರ ಕವಿ ಮುಕುಂದರಾಜನ ವಿವೇಕ ಸಿಂಧುವನ್ನು ಆಧರಿಸಿ ಬರೆದಂತೆ ಕಾಣುತ್ತದೆ. ವಿವೇಕ ಸಿಂಧುವಿಗೂ, ಅನುಭವಾಮೃತಕ್ಕೂ ಅನೇಕ ಕಡೆಗಳಲ್ಲಿ ಹೋಲಿಕೆಗಳಿವೆ. ಅದನ್ನು ಮುಂದೆ ಸ್ವಲ್ಪ ವಿವರಿಸಿದೆ. ಮುಕುಂದರಾಜನು ಮಹಾರಾಷ್ಟ್ರ ಸಾಹಿತ್ಯದಲ್ಲಿ ಅತ್ಯಂತ ಪ್ರಾಚೀನ ಕವಿಯೆಂದು ಪ್ರಸಿದ್ಧನಾಗಿದ್ದಾನೆ. ಇವನು ಹದಿಮೂರನೆಯ ಶತಮಾನದ ಕವಿ. ನಾಥ ಪಂಥದವನು. ವಿವೇಕ ಸಿಂಧುವನ್ನು "ಶಂಕರೋಕ್ತೀವರೀ । ಮಿಾ ಬೋಲಿಲೋ ಮರಾಠಿ

ವೈಖರೀ” (ಪೂರ್ವಾರ್ಧ ಪದ್ಯ ೪೭) ಬರೆದಿರುವುದಾಗಿ ಹೇಳಿರುವುದರಿಂದ ಶ್ರೀಮತ್ ಶಂಕರಾಚಾರ್ಯರ ಅದ್ವೈತವನ್ನೇ ತನ್ನ ಗ್ರಂಥದಲ್ಲಿ ಪ್ರತಿಪಾದಿಸಿರುವ ನೆಂದು ಗೊತ್ತಾಗುತ್ತದೆ. ರಂಗನಾಥನು ಅನುಭವಾಮೃತದಲ್ಲಿ ಅದ್ವೈತ ತತ್ತ್ವ ವನ್ನೇ ಪ್ರತಿಪಾದಿಸಿದ್ದಾನೆ. ಮುಕುಂದರಾಜನು ಗುರುವಿಗೆ ಹೆಚ್ಚು ಮಹತ್ತ್ವ ಕೊಟ್ಟಿದ್ದಾನೆ. ರಂಗನಾಥನೂ ಗುರುವಿನ ದ್ವಾರವಾಗಿ ಮುಕ್ತಿ ಪ್ರಾಪ್ತವಾಗುವು ದೆಂದು ಪದೇ ಪದೇ ಹೇಳುತ್ತಾನಲ್ಲದೆ ಪ್ರತಿಯೊಂದು ಅಧ್ಯಾಯದ ಕೊನೆಯಲ್ಲಿ ಗುರುವನ್ನು ಸ್ಮರಿಸುತ್ತಾನೆ. ನಾಥ ಸಂಪ್ರದಾಯದವರು ಯೋಗಕ್ಕೆ ಮಹತ್ತ್ವ ಕೊಡುತ್ತಾರೆ. ವಿವೇಕ ಸಿಂಧುವಿನಲ್ಲಿಯೂ, ಅನುಭವಾಮೃತದಲ್ಲಿಯೂ, ಯೋಗಕ್ಕೆ ಪ್ರಾಶಸ್ತ್ಯ ಒದಗಿದೆ. ನಾಥ ಸಂಪ್ರದಾಯದವರು ಸಾಮಾನ್ಯವಾಗಿ ತಮ್ಮ ಹೆಸರಿನ ಜೊತೆಗೆ ನಾಥ ಎಂಬುದನ್ನು ಇಟ್ಟುಕೊಳ್ಳುತ್ತಾರೆ. ಇವೆಲ್ಲ ರಂಗನಾಥನು ನಾಥ ಸಂಪ್ರದಾಯದವನಾಗಿದ್ದನೆಂಬುದುಕ್ಕೆ ಪ್ರಮಾಣಗಳಾಗಿವೆ. ಮುಕುಂದರಾಜನ ವಿವೇಕ ಸಿಂಧುವನ್ನು ರಂಗನಾಥನು ಆಧಾರವಾಗಿ ತೆಗೆದುಕೊಂಡುದು ಸ್ವಸಂಪ್ರ ದಾಯಾಭಿಮಾನದಿಂದಲೇ ಎಂದು ತೋರುತ್ತದೆ.

ವಿವೇಕಸಿಂಧು, ಅನುಭವಾಮೃತ ಇವೆರಡರಲ್ಲಿ ಕಂಡು ಬರುವ ಹೋಲಿಕೆ ಗಳಿಂದ ಈ ಅಂಶವು ಮತ್ತಷ್ಟು ದೃಢಪಡುತ್ತದೆ.

೧ ಮುಕುಂದ ರಾಜನು ಗ್ರಂಥಾರಂಭದಲ್ಲಿ “ಜ್ಞಾನ ಸಂಪಾದನೆಯಿಂದ ಆತ್ಮನ ಸ್ವರೂಪವನ್ನು ತಿಳಿಯಬೇಕಾಗಿದ್ದಲ್ಲಿ ಸಂಸ್ಕೃತವಾದರೇನು ಮರಾಠಿಯಾದ ರೇನು? ಮುಖ್ಯ ಮುಕ್ತಿಯನ್ನು ಪಡೆಯಬೇಕು. ಅದು ದೇಶಭಾಷೆಯಲ್ಲಿ ಬರೆದ ಗ್ರಂಥಗಳ ಪಠನದಿಂದಲೂ, ಗುರ್ವನುಗ್ರಹದಿಂದಲೂ ಪ್ರಾಪ್ತವಾಗುತ್ತಿರುವಾಗ ದೇಶಭಾಷೆಯನ್ನು ಬಿಡುವುದೆಂತು? ಮನೆಯ ಹಿತ್ತಿಲ ವೃಕ್ಷವೇ ಕಲ್ಪವೃಕ್ಷವಾಗಿ ಪರಿಣಮಿಸಿದರೆ ಮನೆಯ ಗಿಡವನ್ನು ತ್ಯಜಿಸಬಹುದೆ ?[೧] ಎಂದು ಪ್ರಶ್ನಿಸಿ

ದೇಶೀ ಹೋ ಕಾ ಮರಾಠೀ | ಪರೀ ಉಪನಿಷದಾಚಿ ಚ ರಾಹಟೀ |
ತರೀಹಾ ಅರ್ಥೂ ಜೀವಾಚೀ ಯಾ ಗಾಂಠೀ ಕಾನಾಂಬಾಂಧಾವಾ | ೨

ವೇದ ಶಾಸ್ತ್ರಾಚಾ ಮಥಿತಾರ್ಥೂ | ಮರಾಠಿಯಾ ಹೋಯ ಫಲಿತಾರ್ಥೂ |
ತರೀ ಚತುರೀ ಪರಮಾರ್ಥೂ ಕಾನ ಘ್ಯಾವಾ | [೧] ಎಂದು ಕೇಳುತ್ತಾನೆ. ಅನುಭವಾಮೃತಕಾರನೂ,

---

೧ ಹದಿಮೂರನೆಯ ಶತಮಾನದ ಕರ್ನಾಟಕಾಂಧ್ರ ಮಹಾರಾಷ್ಟ್ರ ಸಾಹಿತ್ಯಾವಲೋಕನ ಪುಟ೬೨. ೨ ವಿವೇಕ ಸಿಂಧು ಪುಟ ೬ ಪದ್ಯ ೨೫

೧ ವಿವೇಕಸಿಂಧು ಪ್ರಕರಣ ೧ ಪದ್ಯ ೧೧

"ಲಲಿತವಹ ಕನ್ನಡದ ನುಡಿಯಲಿ |
ತಿಳಿದು ತನ್ನೊಳು ತನ್ನ ಮೋಕ್ಷವ |
ಗಳಿಸಿಕೊಂಡರೆ ಸಾಲದೇ ಸಂಸ್ಕೃತದಲಿನ್ನೇನು ?

ಅನುಭವಾಮೃತ: ಅಧ್ಯಾಯ ೧. ಪದ್ಯ ೫,

ಮುನ್ನಲುಪನಿಷದರ್ಥವನು ಸಂ |
ಪನ್ನ ಮತಿಗಳು ಪೇಳ್ದುದನೆ ನಾ |
ಕನ್ನಡಿಸಿದೆನು....

(ಅನುಭವಾಮೃತ: ಅಧ್ಯಾಯ ೧- ಪದ್ಯ ೪,) ಎಂದು ಹೇಳಿದ್ದಾನೆ.

೨. ವಿವೇಕ ಸಿಂಧುವಿನಲ್ಲಿ ಕವಿ ಆರಂಭದಲ್ಲಿ ಚಂದ್ರಮೌಳಿಯಾದ ಶಿವನನ್ನು ಸ್ತುತಿಸಿದ್ದಾನೆ. ರಂಗನಾಥನೂ ಸೋಮಶೇಖರನಾದ ಶ್ರೀ ಗಿರಿಮಲ್ಲಿಕಾರ್ಜುನನನ್ನು ವಂದಿಸಿದ್ದಾನೆ.

೩. ವಿವೇಕಸಿಂಧುವಿನಲ್ಲಿ ವಿಷಯವು ಗುರುಶಿಷ್ಯ ಸಂವಾದ ರೂಪವಾಗಿದೆ. ಅನುಭವಾಮೃತದಲ್ಲಿಯಾದರೋ ಪ್ರಶ್ನೋತ್ತರ ರೂಪದಲ್ಲಿದೆ. ಪ್ರಶ್ನೋತ್ತರವು. ತಂದೆ ಮಕ್ಕಳಾದ ವೇದವ್ಯಾಸ, ಶುಕ ಇವರಲ್ಲಿ ನಡೆದಿದೆ. ವೇದವ್ಯಾಸರು ತಮ್ಮ ಮಗನಾದ ಶುಕನಿಗೆ ಉಪದೇಶ ಮಾಡಿರುವುದರಿಂದ ಇಬ್ಬರಲ್ಲಿ ಗುರುಶಿಷ್ಯ ಭಾವವಿದೆಯೆಂಬುದು ಸ್ಪಷ್ಟ.

೪. ಆರಂಭದಲ್ಲಿ ಎರಡು ಗ್ರಂಥಗಳಲ್ಲಿಯೂ ಗ್ರಂಥಪಠನದಿಂದುಂಟಾಗುವ ಸದ್ಯ: ಫಲವನ್ನು ಒಂದೇ ವಿಧವಾಗಿ ಹೇಳಿದೆ ವಿವೇಕಸಿಂಧು ಪ್ರ. ೧. ಪ. ೨೩ ಅನುಭವಾಮೃತ ಅ. ೧. ಪ. ೬

೫. ಮುಕುಂದರಾಜನು ಸಂವಾದಾರಂಭದಲ್ಲಿ ಗುರು ಶಿಷ್ಯ ಲಕ್ಷಣವನ್ನು ನಿರವಿಸುತ್ತಾನೆ. ಸದ್ಗುರುವಿನ ಲಕ್ಷಣ ಕಥನೋತ್ತರ ಸಚ್ಛಿಷ್ಯನೇ ಮೋಕ್ಷ ದೀಕ್ಷೆಯನ್ನು ವಹಿಸಲು ಅಧಿಕಾರಿ ಎಂಬುದರ ವರ್ಣನೆ ಇದೆ. ರಂಗನಾಥನು ಸದ್ಗುರುವಿನ ಲಕ್ಷಣ ಹೇಳಿಲ್ಲವಾದರೂ ಅಧಿಕಾರಿ ಲಕ್ಷಣವನ್ನು ವಿಸ್ತರವಾಗಿ ವರ್ಣಿಸಿದ್ದಾನೆ. ಮುಮುಕ್ಷುವಿನ ಲಕ್ಷಣವೇನು ? ಅವನು ಮಾಡಬೇಕಾದ ಕಾರ್ಯಗಳೇನು? ಸದ್ಗುರುವಿನಲ್ಲಿ ಅವನ ಭಕ್ತಿ ಹೇಗಿರುತ್ತದೆ ? ಎಂಬ ವಿಷಯಗಳನ್ನು ವಿವರಿಸಿದ್ದಾನೆ. ವಿವೇಕಸಿಂಧು ಪ್ರಕರಣ ೧ ಪದ್ಯಗಳು ೫೯ ರಿಂದ ೬೩ ರ ವರೆಗೆ ಮುಕುಂದರಾಜನು ಒಳ್ಳೆಯ ಶಿಷ್ಯನ ಲಕ್ಷಣವನ್ನು ಹೇಳಿದ್ದಾನೆ. ಆ ಭಾವವನ್ನೇ ಅನುಭವಾಮೃತದಲ್ಲಿ ರಂಗನಾಥನು ಮೊದಲನೆಯ ಅಧ್ಯಾಯದ ೧೯–೨೦ ಪದ್ಯಗಳಲ್ಲಿ ನಿರೂಪಿಸಿದ್ದಾನೆ. ಇಲ್ಲಿ ಒಂದು ಪದ್ಯವನ್ನು ಉದ್ಧರಿಸಬಹುದು.

ಜೇ ವಿಷಯ ರಸೀ ಆಸಕ್ತ | ಅಥವಾ ಅಹಂಕಾರೇ ಗರ್ವಿತ |
ಜ್ಯಾಸೀ ಪಾಷಂಡಾಚೀ ಸಂಗತ | ತೇ ಶಿಷ್ಯ ನಕರಾವೇ |

ವಿ. ಸಿಂ. ಪ್ರ. ೧ ಪ. ೫೪

ವೇದಶಾಸ್ತ್ರದ ಹೊಲಬನರಿಯದೆ |
ಭೇದವಾದವ ಮಾಡಿ ಪಾಷಂ |
ಡಾದಿ ಮತದಲಿ ನಡೆದು ದಂಭಾಚಾರ ಪರನಾಗಿ ||
ಸಾದರದ ಸಂಸಾರದಲಿ ಹಿರಿ |
ದಾದ ಯತ್ನದಿ ಕುದಿವ ಖೂಳಗೆ |
ಬೋಧೆಯೇತಕೆ (ಮಗನೆ ಮರ್ಕಟಗೇಕೆ ಮಾಣಿಕವು)

ಅನುಭವಾಮೃತ ಅ. ೧. ಪ. ೩೧

ಇಲ್ಲಿ ಕನ್ನಡ ಪದ್ಯದ ಒಂದನೆಯ ಮತ್ತು ಆರನೆಯ ಚರಣದ ಉದಾಹರಣ ಭಾಗ ವನ್ನು ಬಿಟ್ಟು ಉಳಿದದ್ದು ಮರಾಠೀ ಪದ್ಯದ ಭಾಷಾಂತರದಂತಿದೆ.

ವಿವೇಕ ಸಿಂಧುವಿನಲ್ಲಿ ಶಿಷ್ಯನು ಗುರುವನ್ನು ಕೇಳಿದ ಪ್ರಶ್ನೆಗಳೂ, ಗುರು ಶಿಷ್ಯನಿಗೆ ಹೇಳಿದ ಉತ್ತರಗಳೂ, ಅನುಭವಾಮೃತದಲ್ಲಿ ಶುಕನು ವೇದವ್ಯಾಸರನ್ನು ಕೇಳಿದ ಪ್ರಶ್ನೆಗಳಂತೆಯೂ ಅವುಗಳಿಗೆ ದೊರೆತ ಉತ್ತರಗಳಂತೆಯೂ ಇವೆ. ಇಲ್ಲಿ ಉದಾಹರಣೆಗಾಗಿ ಕೆಲವು ಪ್ರಶ್ನೆಗಳನ್ನು ಎರಡೂ ಗ್ರಂಥಗಳಿಂದ ಕೊಡಲಾಗಿದೆ.

"ಜೀವ ಶಬ್ದೇ ಕಾಯ ಬೋಲಜೇ?" "ಬ್ರಹ್ಮ ಹೇನಾವತೇವಿಜೇ ಕವಣಾಸೀಜೇ?" "ಪರಮಾತ್ಮಾ ತೋ ಕವಣ?" "ಸಗುಣ ಕಿನಿರ್ಗುಣ?" "ಮಾಯಾತೇಕವಣಶಕ್ತಿ?" "ತಿಯೇಸಿ ಕೈಸೀ ಸ್ವರೂಪಸ್ಥಿತೀ?" "ಅವಿದ್ಯೇಚೀ ಕೈಸೀ ರೀತೀ"? "ಕಿಮಾಶ್ರಯತೇ?" "ಪ್ರಪಂಚ ಕವಣೆ ನಿರ್ಮಿಲಾ?" "ಕಾಸಯಾಚಾ ಉಭಾರಲಾ?" "ಜೀವಾಸೀ ಸಂಸಾರ ನಾಥಿಲಾಕಿಂ ಸಿಮಿತ್ರಜೀ?" ಎಂಬ ಪ್ರಶ್ನೆಗಳೂ, "ಜೀವ ಪರಮರ ಪರಿಯೆಂತೈ?" "ಬ್ರಹ್ಮವೆಂದೊಡದೆಂತಹುದು"? "ಎರಡು ತನುವೆಂತಾಯಿತೊಬ್ಬಗೆ"? "ಪರಮಾತ್ಮ ಪದವನು ತಿಳುಹಲು ಬೇಕು?" "ಮಾಯೆಯ ಚೆಂದವಾವುದು?" "ಜೀವ ಜಗವಾರಿಂದ ಲಾದುದದಾದಪರಿಯೆಂತು?" ಎಂಬ ಅನುಭವಾಮೃತದ ಪ್ರಶ್ನೆಗಳೂ ಪ್ರಾಯಶಃ ಒಂದೇ ಆಗಿವೆ. ಇದರಂತೆಯೇ ಇವುಗಳ ಉತ್ತರ ರೂಪವಾಗಿ ನಿರೂಪಿಸಿದ ವಿಷಯ ವಾದರೂ ಎರಡೂ ಗ್ರಂಥಗಳಲ್ಲಿ ಸಮಾನವಾಗಿದೆ.

ಹೀಗೆಯೆ ಇಂಥ ಅನೇಕ ಹೋಲಿಕೆಗಳನ್ನು ಕೊಡಬಹುದು. ಇದನ್ನು, "ಹದಿಮೂರನೆಯ ಶತಮಾನದ ಕರ್ನಾಟಕಾಂಧ್ರ ಮಹಾರಾಷ್ಟ್ರ ಸಾಹಿತ್ಯಾವ ಲೋಕನ" ಎಂಬ ಗ್ರಂಥದಲ್ಲಿ ವಿಸ್ತರವಾಗಿ ಪ್ರತಿಪಾದಿಸಿದೆ.

ಇನ್ನು ಪ್ರಸ್ತುತ ವಿಷಯಕ್ಕೆ ಬರಬಹುದು.

ಜಗನ್ನಾಥದಾಸರ ಜೀವನ ಚರಿತ್ರೆಗೆ ಸಂಬಂಧಿಸಿದ ಅನೇಕ ಸಂಗತಿಗಳು ತಿಳಿಯದಿದ್ದರೂ ರಂಗನಾಥನ ಜೀವನಚರಿತ್ರೆಗಿಂತಲೂ ಜಗನ್ನಾಥದಾಸರ ಜೀವನ ಚರಿತ್ರೆ ತಕ್ಕಮಟ್ಟಿಗೆ ಸಮಗ್ರವಾಗಿಯೇ ತಿಳಿದಿದೆಯೆಂದು ಹೇಳಬೇಕು. ಜಗನ್ನಾಥ ದಾಸರೂ ರಂಗನಾಥನಂತೆ ಉತ್ತರ ವಯಸ್ಸಿನಲ್ಲಿ ತುರೀಯಾಶ್ರಮವನ್ನು ಸ್ವೀಕರಿಸ

ದಿದ್ದರೂ ತ್ಯಾಗಿಗಳೂ, ವಿರಕ್ತರೂ, ಜ್ಞಾನಿಗಳೂ ಆಗಿ ಗೃಹಸ್ಥಾಶ್ರಮದಲ್ಲಿಯೇ ಇದ್ದರು. ಇವರ ಯೋಗಸಾಧನವೂ, ಜ್ಞಾನಾರ್ಜನವೂ, ತುರೀಯಾಶ್ರಮಿಗಳನ್ನೂ ಬೆರಗುಗೊಳಿಸುವಂಥವುಗಳು. ಚಿಕ್ಕಂದಿನಲ್ಲಿಯೇ ಸಂಸ್ಕೃತ ಕನ್ನಡ ಭಾಷೆಗಳಲ್ಲಿ ಅದ್ವಿತೀಯ ಪಾಂಡಿತ್ಯವನ್ನು ಸಂಪಾದಿಸಿರಬೇಕೆಂದು ಇವರ ಕೃತಿಗಳ ಆಧಾರದಿಂದ ಹೇಳಬಹುದಾಗಿದೆ. ಸಂಸ್ಕೃತವನ್ನಿವರು ಸಶಾಸ್ತ್ರೀಯವಾಗಿ ವ್ಯಾಸಂಗ ಮಾಡಿದ ರೆಂಬ ವಿಷಯಗಳಲ್ಲಿ ಆಧಾರಗಳಿವೆ. ಆದರೆ ಕನ್ನಡದ ವಿದ್ಯಾಭ್ಯಾಸವು ಹೇಗೆ ನಡೆಯಿತೆಂಬುದು ಇದುವರೆಗೆ ತಿಳಿದಿಲ್ಲ. ಚಿಕ್ಕಂದಿನಲ್ಲಿ ಅಕ್ಷರಾಭ್ಯಾಸ ಮೊದಲು ಕನ್ನಡದಲ್ಲಿಯೇ ಆಗಿರಬೇಕು. ಬೇಗವಾಟ, ಮಾನವಿ ಸ್ಥಳಗಳಲ್ಲಿ ಆಗಿನ ಕಾಲದಲ್ಲಿ ಸಂಸ್ಕೃತದ ಅಭ್ಯಾಸ ಅಷ್ಟು ಹೆಚ್ಚಾಗಿ ಪ್ರಚಾರದಲ್ಲಿದ್ದಿತೆಂದು ಹೇಳಲಾಗದು. ಅಲ್ಲದೆ ಇವರು ಗೃಹಸ್ಥ (ರಾಯ) ರಾಗಿದ್ದುದರಿಂದಲೂ ವಂಶಪರಂಪರವಾಗಿ ಶಾನು ಭೋಗಿಕೆ ಈ ಮನೆತನದವರಿಗೆ ನಡೆದುಬಂದುದರಿಂದಲೂ, ಲೆಕ್ಕಪತ್ರಗಳ ವ್ಯವ ಹಾರಕ್ಕಾಗಿಯಾದರೂ ಇವರಿಗೆ ಬಾಲ್ಯದಲ್ಲಿ ಕನ್ನಡದಲ್ಲಿ ವಿದ್ಯಾಭ್ಯಾಸವಾಗಿರಬೇಕು. ಇವರ ತಂದೆ ಸದಾಚಾರ ಸಂಪನ್ನರೂ, ಸ್ವಯಂದಾಸರೂ ಆಗಿದ್ದುದರಿಂದಲೇ ತಮ್ಮ ಮಕ್ಕಳಿಗೆ ಸಂಸ್ಕೃತ ವಿದ್ಯಾವ್ಯಾಸಂಗಕ್ಕಾಗಿ ತಮ್ಮ ಸಮ್ಮತಿಯನ್ನಿತ್ತಿರಬೇಕು. ಆದರೆ ಇದು ಆ ಮೇಲೆ ನಡೆದ ಘಟನೆ. ಜಗನ್ನಾಥದಾಸರು ಸಂಸ್ಕೃತದಲ್ಲಿ ಅದ್ವಿ ತೀಯ ಪಾಂಡಿತ್ಯವನ್ನು ಸಂಪಾದಿಸಿದ ವಿಷಯವನ್ನು ಅವರ ಚರಿತ್ರಜ್ಞರು ಬಲ್ಲರು. ಜಗನ್ನಾಥದಾಸರು ದಾಸತ್ವ ವಹಿಸುವುದಕ್ಕೆ ಮುಂಚೆ ಸಂಸ್ಕೃತ ಶಾಸ್ತ್ರಾಭ್ಯಾಸ ಬಲ ದಿಂದ ಆಚಾರ್ಯರ ರೀವಿಯನ್ನು ನಡೆಸುತ್ತ ಬಂದರು ದಾಸಸಂಪ್ರದಾಯದವರನ್ನು ನಿಂದಿಸುತ್ತಿದ್ದರೆಂದೂ ಅದೇ ದೋಷವಾಗಿ ಪರಿಣಮಿಸಿ ಇವರು ವ್ಯಾಧಿಗ್ರಸ್ತರಾಗಿ ಆ ಮೇಲೆ ವಿಜಯದಾಸರ ಅನುಗ್ರಹಕ್ಕೆ ಪಾತ್ರರಾಗಿ ಅವರ ಶಿಷ್ಯರಾದ ಗೋಪಾಲ ದಾಸರಿಂದ ಪಾಪನಿರ್ಮುಕ್ತರಾದರೆಂದೂ ಇವರ ವಿಷಯದಲ್ಲಿ ಪ್ರಸಿದ್ಧವಾದ ಕಥೆ ಯಿದೆ. ಇದನ್ನು ಕಥೆಯೆನ್ನುವುದಕ್ಕಿಂತಲೂ ಯಥಾರ್ಥವಾಗಿ ನಡೆದ ಸಂಗತಿ ಯೆಂದೇ ಹೇಳಬೇಕು. ಏಕೆಂದರೆ ಇವರ ಕಾಲ ಬಹಳ ಹಿಂದಿನದಲ್ಲ. ಕಳೆದ ಶತಮಾನದ ಆರಂಭದಲ್ಲಿ ಜಗನ್ನಾಥದಾಸರು ಜೀವಿಸಿದ್ದರು. ಸುಮಾರು ಒಂದೂ ಕಾಲು ಶತಮಾನದ ಕೆಳಗೆ ಜೀವಿಸಿದ್ದವರ ವಿಷಯವಾಗಿ ಅತಿಶಯೋಕ್ತಿಯ ಘಟನೆ ಗಳಾಗಲೀ, ಬುದ್ಧಿಗೆ ಮೀರುವ ಸಂಗತಿಗಳಾಗಲೀ ಹುಟ್ಟಲಾರವು. ಇವರ ಶಿಷ್ಯ ಪ್ರಶಿಷ್ಯ ಪರಂಪರೆಯವರು ಅಲ್ಲಲ್ಲಿ ಇರುವುದರಿಂದ ಅವರಲ್ಲಿರುವ ಲಿಖಿತವಾದ ಆಧಾರಗಳೂ, ಇವರೇ ರಚಿಸಿದ ಕೀರ್ತನೆಗಳೂ, ವಿಜಯದಾಸರು, ಗೋಪಾಲ ದಾಸರುಗಳ ಕೀರ್ತನೆಗಳೂ, ಇವರ ಜೀವನ ಚರಿತ್ರೆಯ ನಿರ್ಮಾಣಕ್ಕೆ ತಕ್ಕ ಸಾಧನ ಗಳಾಗಿವೆ. ದಾಸರುಗಳ ಹಾಡುಗಳೆಂದರೆ ಅವರ ಅನುಭವಗಳ ದಿನಚರಿಗಳಂತೆ. ತಮಗುಂಟಾದ ಅನುಭವಗಳನ್ನು ಲೋಕಹಿತಾರ್ಥವಾಗಿ ಪರಮಾತ್ಮನಲ್ಲಿ ಅರ್ಪಿ ಸುವ ಸಂಪ್ರದಾಯವು ದಾಸಕೂಟದವರಲ್ಲಿ ಮೊದಲಿಂದಲೂ ನಡೆದು ಬಂದಿದೆ.

ಪುರಂದರದಾಸರಿಂದ ಆರಂಭವಾದ ಈ ಕ್ರಮವನ್ನು ಅವರ ಪರಂಪರೆಯವರೆಲ್ಲರೂ ಅನುಸರಿಸಿಕೊಂಡು ಬಂದಿದ್ದಾರೆ. ಆದ್ದರಿಂದ ಇವರ ಜೀವನದಲ್ಲಿ ಅಗಾಧವಾದ ಬದಲಾವಣೆಯನ್ನುಂಟು ಮಾಡಿದ ಈ ಸನ್ನಿವೇಶವನ್ನು ಬರಿಯ ಕಲ್ಪನೆಯೆಂದು ಅಲ್ಲಗಳೆಯಲಾಗುವುದಿಲ್ಲ ಇವರು ದಾಸತ್ವವನ್ನು ವಹಿಸಿದ ಮೇಲೆ ಕನ್ನಡದಲ್ಲಿಯೇ ಲೇಖನಕಾರ್ಯವನ್ನು ನಡೆಸಬೇಕೆಂದು ನಿರ್ಬಂಧವಾದುದು. ಅಂದಿನಿಂದಲೇ ಇವರು ಕನ್ನಡದ ವ್ಯಾಸಂಗವನ್ನು ಬಲಪಡಿಸಿಕೊಂಡಿರಬೇಕು. ಸ್ವಯಂಮೇಧಾವಿ ಗಳಾಗಿದ್ದುದರಿಂದಲೂ, ಭಗವದನುಗ್ರಹಕ್ಕೆ ಪಾತ್ರರಾಗಿದ್ದುದರಿಂದಲೂ ಬಹು ಕ್ಷಿಪ್ರದಲ್ಲಿಯೇ ಕನ್ನಡದಲ್ಲಿ ಇವರಿಗೆ ಪಾಂಡಿತ್ಯವುಂಟಾಗಿರಬೇಕು. ಇವರ ಹಾಡು ಗಳಲ್ಲಿಯೂ ಬೇರೆ ಕೃತಿಗಳಲ್ಲಿಯೂ ಇವರ ಪಾಂಡಿತ್ಯದ ಆಳವನ್ನು ಕಾಣಬಹುದು ತತ್ತ್ವಸುವಾಲಿಯನ್ನು ತ್ರಿಪದಿಯಲ್ಲಿ ಬರೆದಿರುವುದು ಸರ್ವಜ್ಞನ ಕವಿತ್ವವನ್ನು ಜ್ಞಾಪಿಸುವುದು. ಹಾಡುಗಳಲ್ಲಿಯೂ, ಹರಿಕಥಾಮೃತಸಾರದಲ್ಲಿಯೂ ಪ್ರಯೋಗ ವಾಗಿರುವ ಅನೇಕ ಹಳಗನ್ನಡ ಪದಗಳನ್ನು ನೋಡಿದರೆ ಇವರಿಗೆ ಹಳಗನ್ನಡದಲ್ಲಿ ವಿಶೇಷ ಪ್ರವೇಶವಿದ್ದಿತೆಂದು ಬೋಧವಾಗುವುದು.

ಪ್ರತಿಭೆ, ಅಭ್ಯಾಸ, ಜ್ಞಾನಗಳಿಂದ ಮುಪ್ಪುರಿಗೊಂಡ ಇವರ ಕವಿತಾಶಕ್ತಿ ಇವರ ಪ್ರತಿಯೊಂದು ಕೃತಿಯಲ್ಲಿ ಬಿಂಬಿತವಾಗಿದೆ. ದಾಸಕೂಟದಲ್ಲಿ ಈ ದೃಷ್ಟಿ ಯಿಂದ ಇವರನ್ನು ಮೀರಿಸಿದವರು ಇಲ್ಲವೆಂದೇ ಹೇಳಬೇಕು. ದಾಸರುಗಳ ಜೀವನಾರಂಭದಲ್ಲಿ ಅಂತಹ ಉಚ್ಚ ತರಗತಿಯ ವ್ಯಾಸಂಗವನ್ನು ಮಾಡಿರುವುದು ಇದುವರೆಗೆ ಕಂಡು ಬಂದಿಲ್ಲ. ಇವರ ವೈರಾಗ್ಯ, ಭಕ್ತಿಗಳಿಗೆ ಒಲಿದು ಭಗವಂತನು ಅನುಗ್ರಹ ಮಾಡಿದ ಮೇಲೆಯೇ ಇವರಲ್ಲಿ ಕಾವ್ಯನಿರ್ಮಾಣ ಶಕ್ತಿ ಮೂಡಿ ರುವುದು ಅನೇಕ ದಾಸರುಗಳ ಚರಿತ್ರೆಯಿಂದ ತಿಳಿದುಬರುತ್ತದೆ. ಇದಕ್ಕೆ ದಾಸ ಕೂಟದವರಲ್ಲಿ ಅಗ್ರಗಣ್ಯರಾದ ಪುರಂದರ ದಾಸರೇ ನಿದರ್ಶನವಾಗಿದ್ದಾರೆ. ವ್ಯಾಸ ಕೂಟದವರೆಂದೆನಿಸಿಕೊಂಡು ದಾಸಸಂಪ್ರದಾಯವನ್ನು ಪುರಸ್ಕರಿಸಿದ ಮಹಾನು ಭಾವರು ಇದಕ್ಕೆ ಅಪವಾದವಾಗಿರಬಹುದು. ವ್ಯಾಸರಾಯರು, ವಾದಿರಾಜರು ರಾಘವೇಂದ್ರಸ್ವಾಮಿಗಳು, ವ್ಯಾಸತತ್ತ್ವಜ್ಞರು—ಇವರೆಲ್ಲ—ಕಡೆಯವರನ್ನುಳಿದು- ಪೀಠಸ್ಥರು, ಯತಿಗಳು. ಇವರೆಲ್ಲರೂ ಸಂಸ್ಕೃತದಲ್ಲಿ ಅಗಾಧ ಪಾಂಡಿತ್ಯವುಳ್ಳವರು ಆದರೂ ಕನ್ನಡವನ್ನು ಅನಾದರಣ ಮಾಡದೆ, ಕನ್ನಡವನ್ನು ಮೈಲಿಗೆಯ ಮಾತೆಂದು ತೆಗಳದೆ ಈ ಭಾಷೆಯಲ್ಲಿಯೇ ಪರಮಾತ್ಮನನ್ನು ಕೀರ್ತಿಸಿದರು, ಲೋಕಕ್ಕೆ ಉಪ ದೇಶವನ್ನಿತ್ತರು ಇವರೆಲ್ಲರಿಗಿಂತ ಕನ್ನಡದ ಕೆಚ್ಚನ್ನು ಜಗನ್ನಾಥದಾಸರಲ್ಲಿ ಹೆಚ್ಚಾಗಿ ಕಾಣಬಹುದು. ಸಂಸ್ಕೃತದಲ್ಲಿ ಶಾಸ್ತ್ರಾಭ್ಯಾಸ ಮಾಡಿ ವೇದಾಂತದ ಪಾರವನ್ನು ಕಂಡು ಬಿಕ್ಕೆ ಬೇಡುವ ದಾಸರುಗಳೆಂದರೆ ಅಸಹ್ಯಪಡುವ ವ್ಯಕ್ತಿ ಕೈಯಲ್ಲಿ ತಂಬೂರಿ ಹಿಡಿದು ತಾಳ ಕುಟ್ಟುತ್ತಾ ಮನೆ ಮನೆ ಅಲೆದು ಕನ್ನಡದಲ್ಲಿ ಉಪದೇಶ ಮಾಡಲು ಪ್ರತಿಜ್ಞಾಬದ್ಧವಾದುದು ಆಶ್ಚರ್ಯದ ಸಂಗತಿಯೇ ಸರಿ.

ಜಗನ್ನಾಥದಾಸರ ಕನ್ನಡದ ವ್ಯಾಸಂಗದಲ್ಲಿ ಅನುಭವಾಮೃತವೂ ಒಂದಾಗಿತ್ತೆಂದು ತೋರುತ್ತದೆ. ಅನುಭವಾಮೃತವು ಹುಟ್ಟಿ ಅವರ ಕಾಲಕ್ಕಾಗಲೆ ಸುಮಾರು ಮುಕ್ಕಾಲು ಶತಮಾನವಾಗಿತ್ತು. ಅದು ಕನ್ನಡ ನಾಡಿನಲ್ಲೆಲ್ಲ ಅಷ್ಟು ಹೊತ್ತಿಗೆ ಬೇಕಾದಷ್ಟು ಪ್ರಚಾರವಾಗಿರಬೇಕು. ನಮ್ಮ ಜನ ವೇದಾಂತ, ಭಕ್ತಿ, ವೈರಾಗ್ಯ ಮೊದಲೆ ಮನಸೋಲುವ ಜನ ಅದನ್ನು ಸುಲಭವಾದ ರೀತಿಯಲ್ಲಿ ಹೇಳಿದುದಾದರೆ. ಬರೆದುದಾದರೆ, ಕೇಳುವುದೇನು! ಅನುಭವಾಮೃತವು ಶ್ರೀಮತ್ ಶಂಕರ ಭಗವತ್ಪಾದರ ತತ್ತ್ವವನ್ನು ಬೋಧಿಸುವ ಸುಲಭವಾದ ಗ್ರಂಥ ಕನ್ನಡಿಗರಿಗೆ ಕೈ ಸೇರಿದ್ದು ಅವರ ಭಾಗ್ಯವಾಗಿ ಪರಿಣಮಿಸಿತು. ಎಲ್ಲೆಲ್ಲಿಯೂ ಅದರ ಪಠನ ವಾಚನಗಳು ನಡೆದು ಜನರ ಮನಸ್ಸನ್ನದು ಸೆಳೆದಿತ್ತು. ಸರಳವಾದ ಭಾಷೆಯೇ ಆ ಗ್ರಂಥ ಸರ್ವಾದರಣೀಯವಾಗಲು ಮುಖ್ಯ ಕಾರಣ. ಸೊಗಸಾದ ಉಪಮೆಗಳು, ಅನುಭವ ಯುಕ್ತವಾದ ದೃಷ್ಟಾಂತಗಳು, ವಾಡಿಕೆಯ ಮಾತು ಅನುಭವಾಮೃತದ ಸೊತ್ತು. ಜಗನ್ನಾಥ ದಾಸರೂ ಎಲ್ಲರಂತೆ ಅದನ್ನು ಪಠಿಸಿರಬೇಕು. ಅದರಂತೆ ತಾವೂ ಕನ್ನಡದಲ್ಲಿ ಬರೆಯಲು ಯತ್ನಿಸಿರಬೇಕು. ಅನುಭವಾಮೃತದಲ್ಲಿ ಅದ್ವೈತ ಬ್ರಹ್ಮ ತತ್ತ್ವವು ಪ್ರತಿಪಾದಿತವಾಗುತ್ತಿದ್ದರೆ, ಇವರು ದ್ವೈತ ತತ್ತ್ವಸಾರವನ್ನು ಕನ್ನಡಿಗರಿಗೆ ತಿರುಹಲು ಅದರ ರೀತಿಯಲ್ಲಿಯೇ ಹರಿಕಥಾಮೃತವನ್ನು ಬರೆದರು. ಒಂದು ಅನುಭವಾಮೃತವಾದರೆ ಮತ್ತೊಂದು ಹರಿಕಥಾಮೃತ. ಇದರ ಜೊತೆಗೆ ಸಾರವೂ ಬೆರೆತಿದೆ. ಒಂದರಲ್ಲಿ ಪರಮಾತ್ಮ ತತ್ತ್ವದ ಅನುಭವವು ಅಮೃತವಾಗಿದೆ, ಮತ್ತೊಂದರಲ್ಲಿ ಹರಿಕಥೆಯ ಶ್ರವಣ ಮನನಾದಿಗಳು ಅಮೃತವಾಗಿವೆ. ಈ ತಾರತಮ್ಯವು ಇವೆರಡು ಗ್ರಂಥಗಳಲ್ಲಿ ಚೆನ್ನಾಗಿ ಒಡೆಮೂಡಿರುವದನ್ನು ಹೋಲಿಕೆಯ ದೃಷ್ಟಿಯಿಂದ ಅವಲೋಕಿಸಿದರೆ ಕಾಣಬಹುದು

ಹರಿಕಥಾಮೃತಸಾರವು ಸರಿಯಾಗಿ ಪರಿಷ್ಕೃತವಾಗಿ ಇನ್ನೂ ಅಚ್ಚಾಗಬೇಕಾಗಿದೆ. ಅದರ ಆವೃತ್ತಿಗಳು ಅನೇಕವಾಗಿದ್ದರೂ ಅವೆಲ್ಲವುಗಳಲ್ಲಿ ಕ್ರಮಬದ್ಧತೆಯಿಲ್ಲವೆಂಬುದು ಅವುಗಳ ಅವಲೋಕನ ಮಾತ್ರದಿಂದ ಹೇಳಬಹುದು. ಜಗನ್ನಾಥ ದಾಸರು ಹರಿಕಥಾಮೃತಸಾರವನ್ನು ಬರೆದ ಮೇಲೆ ಸರಿಯಾಗಿ ಕ್ರಮ ಪಡಿಸಲು ಅವರಿಗೆ ಅವಕಾಶವೊದಗಲಿಲ್ಲವೇನೋ? ವಿಷಯಾನುಕ್ರಮಣಿಕೆಯಲ್ಲಿ ಹೆಚ್ಚು ಕಡಮೆಯಾಗಲು ಕಾರಣವನ್ನೂಹಿಸುವುದು ಕಷ್ಟ. ಅವರ ಶಿಷ್ಯರನೇಕರು ತಂತಮ್ಮ ಮನಸ್ಸಿಗೆ ಬಂದಂತೆ ಅವರ ಕೃತಿಯನ್ನು ಬಳಸಿಕೊಂಡಿರುವಂತೆ ಕಾಣುತ್ತದೆ. ಸ್ವತಃ ಅವರೇ ಗ್ರಂಥವನ್ನು ಒಂದು ಸಕ್ರಮವಾದ ರೂಪದಲ್ಲಿ ಬರೆಯದೆ ಆಗಾಗ ವಿಷಯ ಸ್ಫುರಣವಾದಂತೆಲ್ಲ ಗ್ರಂಥರಚನೆ ಮಾಡಿದ್ದಾರೆ. ಈ ವಿಷಯವಾಗಿ ಒಂದು ಹೇಳಿಕೆಯೂ ಉಂಟು. ಗ್ರಂಥರಚನೆಯ ಕಾಲದಲ್ಲಿ ವರ್ಣಾಭಿಮಾನಿದೇವತೆಗಳು ಅಹಮಹಮಿಕೆಯಿಂದ ತಂತಮ್ಮನ್ನು ಮೊದಲು ಪ್ರಯೋಗಿಸಲು ಹಾತೊರೆಯುತ್ತಿದ್ದಂತೆ ಅವರಿಗೆ ಬೋಧವಾಗುತ್ತಿತ್ತಂತೆ. ಹೀಗಾಗಿ ಯಾವುದನ್ನು ಮೊದಲು

ಬರೆಯುವುದು, ಯಾವುದನ್ನು ಆ ಮೇಲೆ ಬರೆಯುವುದೆಂಬ ದಾಕ್ಷಿಣ್ಯಕ್ಕೆ ಅವರು ಒಳಗಾಗಿರಬೇಕು. ಅದೇನೆ ಇರಲಿ, ವಿಷಯಾನುಪೂರ್ವಿಯಲ್ಲಿ ವ್ಯತ್ಯಾಸವಾಗಿರುವುದನ್ನು ಅವರ ಕೃತಿಯಲ್ಲಿ ಅಲ್ಲಲ್ಲಿ ಕಾಣಬಹುದು. ಉದಾಹರಣೆಗಾಗಿ ಇಲ್ಲಿ ಒಂದು ಪದ್ಯವನ್ನು ಉದ್ಧರಿಸಿದೆ.

ಬುದ್ಧಿ ವಿದ್ಯಾ ಬಲದಿ ಪೇಳಿದ |
ಶುದ್ಧ ಕಾವ್ಯಮಿದಲ್ಲ ತತ್ತ್ವಸು |
ಪದ್ಧತಿಗಳನು ತಿಳಿದ ಮಾನಪನಲ್ಲ ಬುಧರಿಂದ ||
ಮಧ್ವವಲ್ಲಭ ತಾನೆ ಹೃದಯದೊ |
ಳಿದ್ದು ನುಡಿದಂದಲಿ ನುಡಿದೆನ |
ಬದ್ಧಗಳ ನೋಡದಲೆ ಕಿವಿಗೊಟ್ಟಾಲಿಪುದು ಬುಧರು ||

ಈ ಪದ್ಯ ಕೃತಿಯ ಆರಂಭದಲ್ಲಿಯೋ, ಅಂತ್ಯದಲ್ಲಿಯೋ ಇರಬೇಕೆಂಬುದನ್ನು ಎಲ್ಲರೂ ಒಪ್ಪಬೇಕು. ಆದರೆ ಉಡುಪಿಯ ಆವೃತ್ತಿಯಲ್ಲಿ ಇದು ಹತ್ತನೆಯ ಸರ್ವಪ್ರತೀಕ ಸಂಧಿಯ ೧೮ನೆಯ ಪದ್ಯವಾಗಿದೆ. ಈ ಪದ್ಯವಾದ ಮೇಲೆ ಏಳು ಪದ್ಯಗಳು ಬಂದಿವೆ. ಅವುಗಳಲ್ಲಿ ಪೂರ್ವ ವಿಷಯವನ್ನು ಮುಂದುವರಿಸಿದೆ. ಹಾಗೆಯೇ ಹದಿನೈದನೆಯ ಸಂಧಿಯಲ್ಲಿಯ ೨೨ನೆಯ ಪದ್ಯ

ಬೆಳಗೆ ಹೂಜೆಯು ನೋಳ್ಪರಿಗೆ ಥಳ |
ಥಳಿಸುತಲಿ ಕಂಗೊಳಿಸುವಂದದಿ |
ತೊಳೆದು ದೇಹವ ನಾಮ ಮುದ್ರೆಗಳಿಂದಲಂಕರಿಸಿ ||
ಒಲಿಸಿ ನಿತ್ಯ ಕುತರ್ಕ ಯುಕ್ತಿಗ |
ಳಲವಬೋಧರ ಶಾಸ್ತ್ರ ಮರ್ಮವ |
ತಿಳಿಯದಿಹ ನರ ಬರಿದೆ ಇದರೊಳು ಶಂಕಿಸಿದರೇನು ? ||

ನಿಂದಾತ್ಮಕವಾದುದು ಈ ಪದ್ಯವು ಆರಂಭದಲ್ಲಿ ಇರಬೇಕಾಗಿತ್ತೇನೊ ಎನಿಸುವುದು. ಕನ್ನಡ ಭಾಷೆಯನ್ನು ಕುರಿತು ಹೇಳುವ ೧೬ನೆಯ ಸಂಧಿಯ ಕೊನೆಯಲ್ಲಿರುವ ೩೮–೩೫–೩೬ ಪದ್ಯಗಳು ಪೀಠಿಕಾ ಸಂಧಿಯಲ್ಲಿ ಸೇರಬೇಕಾದುವುಗಳು. ಹೀಗೆ ತಮ್ಮ ಪಾಂಡಿತ್ಯ ನಿರಸನಯುಕ್ತವಾದ ಆತ್ಮನೈಚ್ಯಾನುಸಂಧಾನವನ್ನು ವ್ಯಕ್ತಗೊಳಿಸುವ ಪದ್ಯಗಳೂ ಅಲ್ಲಲ್ಲಿ ಹುದುಗಿಕೊಂಡಿವೆ. ಇವೆಲ್ಲ ಒಂದು ಪ್ರಕರಣವಾಗಿ ಭಾಗ ಮಾಡಿಕೊಳ್ಳುವುದರಿಂದ ವಿಷಯಾನುಪೂರ್ವಿಯಲ್ಲಿ ಒಂದು ಕ್ರಮವು ಏರ್ಪಡುವುದು.

ಸಂಸ್ಕೃತಕ್ಕೂ ದೇಶಭಾಷೆಗಳಿಗೂ ಹೋರಾಟ ಬಹುಕಾಲದಿಂದಲೇ ನಡೆದು ಬಂದಮ್ಮ. ಆತ್ಮಜ್ಞಾನಕ್ಕಾಗಿಯೂ ವೇದಾಂತ ಬೋಧನೆಗಾಗಿಯೂ ಸಂಸ್ಕೃತವಲ್ಲದೆ ದೇಶಭಾಷೆ ಅಲ್ಲನೆಂಬ ಭಾವವು ಎಲ್ಲರಲ್ಲಿಯೂ ಬೇರೂರಿತ್ತು. ಆತ್ಮವಿದ್ಯೆಯನ್ನು ಬೋಧಿಸಬೇಕಾದರೆ ಸಂಸ್ಕೃತವೇ ಸರಿಯೆಂಬ ಬಲವಾದ ತಿಳಿವಳಿಕೆಯನ್ನು ಮರಾಠಿಯ ಕವಿ ಮುಕುಂದರಾಜನು ಹದಿಮೂರನೆಯ ಶತಮಾನದಷ್ಟು ಹಿಂದೆಯೇ

ನಿರಾಕರಿಸಿದುದನ್ನು ಈ ಮೊದಲೇ ಹೇಳಿದೆ. ಈ ಸಂಸ್ಕೃತದ ವಿಷಯವಾಗಿ ಕನ್ನಡದ ಪೂರ್ವಕವಿಗಳೂ ಪ್ರಸ್ತಾಪ ಮಾಡಿರುವುದು ಕನ್ನಡ ಸಾಹಿತ್ಯಜ್ಞರಿಗೆ ಗೊತ್ತಿದೆ. ಕನ್ನಡ ಸಂಸ್ಕೃತಗಳನ್ನು ಬೆರಸಬಾರದೆಂದು ನೃಪತುಂಗನೂ, ಅವೆರಡರ ಬೆರಕೆ ತುಪ್ಪ ಎಣ್ಣೆಯ ಬೆರಕೆ ಎಂದು ನಯಸೇನನೂ, ಕೊಳೆಸಕ್ಕದಮಂ ಪುದುಂಗೊಳಿಸಿದಂತೆಯೆಂದು ಮತ್ತೊಬ್ಬನೂ, ಕನ್ನಡ ಸಂಸ್ಕೃತಕ್ಕೆ ಕಡಮೆಯಲ್ಲವೆಂದು ಇನ್ನೊಬ್ಬನೂ ಸಂಸ್ಕೃತದ ವಿಷಯವಾಗಿ ಆಭಾಸಯುಕ್ತವಾಗಿ ಹೇಳಿದುದು ಬರಿಯ ಭಾಷಾದೃಷ್ಟಿಯಿಂದ ಆದರೂ ಈ ಹೇಳಿಕೆಗಳಲ್ಲಿ ಆ ಕವಿಗಳ ಇಂಗಿತವೇನೆಂಬುದು ಸ್ಪಷ್ಟವಾಗಿದೆ. ಆದರೆ ವಸ್ತು, ಭಾಷೆ ಎರಡೂ ಕನ್ನಡವಾಗಿರಬೇಕೆಂಬ ಭಾವವನ್ನು ಇತ್ತೀಚಿನ ಕವಿಗಳು ಬಳಕೆಯಲ್ಲಿ ತಂದರು. ಕನ್ನಡದಲ್ಲಿ ವೇದಾಂತ ತತ್ತ್ವಗಳನ್ನು ಬೋಧಿಸುವಷ್ಟು ಧೈರ್ಯ, ಆ ವಿಷಯಗಳನ್ನು ಕುರಿತು ಉದ್ಗ್ರಂಥಗಳನ್ನು ಬರೆಯುವ ಎಂಟೆದೆ ಮೊದಲು ಕಾಣುವುದು ರಂಗನಾಥನಲ್ಲಿಯೇ ವೀರಶೈವ ಶರಣರೂ, ವೈಷ್ಣವದಾಸರೂ ತತ್ತ್ವೋಪದೇಶವನ್ನು ಬಿಡಿಬಿಡಿಯಾಗಿ ಕನ್ನಡದಲ್ಲಿ ಮಾಡಿದರಾದರೂ ಆ ವಿಷಯವನ್ನು ಕುರಿತು ಉದ್ಗ್ರಂಥಗಳನ್ನು ಬ್ರಾಹ್ಮಣಕವಿಗಳು ಬರೆಯದಿರುವುದಕ್ಕೆ ಸಂಸ್ಕೃತಜ್ಞರ ಹೆದರಿಕೆಯೇ ಕಾರಣವೆಂದು ಹೇಳಬೇಕು ರಂಗನಾಥನು ಮರಾಠೀ ಕವಿಯ ಜಾಡನ್ನು ಹಿಡಿದು "ಲಲಿತವಹ ಕನ್ನಡದ ನುಡಿಯಲಿ ತಿಳಿದು ತನ್ನೊಳು ತನ್ನ ಮೋಕ್ಷವ ಗಳಿಸಿಕೊಂಡರೆ ಸಾಲದೆ? ಸಂಸ್ಕೃತದಲಿನ್ನೇನು?" ಎಂದು ಕೋಟೆಯೇರಿಸಿದನು ಈ ಮಾತು ಹೇಳಬೇಕಾದರೂ ಅವನಿಗೆ ಹಿರಿಯರ ಅಂಜಿಕೆ. ಆದ್ದರಿಂದಲೇ ಅಂಜುತ್ತಂಜುತ್ತ "ಕನ್ನಡದ ನುಡಿಯೆಂದುಪೇಕ್ಷಿಸಲಿನ್ನು ಹಿರಿಯರಿಗಂಜಿ ನುಡಿವೆನು" ಎಂದು ಹೇಳಿ ಅವರನ್ನು ಸಮಾಧಾನ ಮಾಡುವುದಕ್ಕೋ ಎಂಬಂತೆ ಸೊಗಸಾದ ದೃಷ್ಟಾಂತವನ್ನು ಕೊಟ್ಟನು. "ಕನ್ನಡಿಯೆದರ್ಪಣವದಲ್ಲದೆ ಭೇದವೇನಿದಕೆ?" ಎಂದು ಅವರನ್ನು ಪ್ರಶ್ನಿಸಿ ಅವರ ಗೌರವಕ್ಕೆ ಕೊರತೆಯಾಗಬಾರದೆಂದು ಸ್ವಲ್ಪ ಅವರನ್ನು ಉಬ್ಬಿಸುವ ಧಾಟಿಯಲ್ಲಿ "ಮುನ್ನಲುಪನಿಷದರ್ಥವನು ಸಂಪನ್ನ ಮತಿಗಳು ಪೇಳ್ದುದನೆ ನಾ ಕನ್ನಡಿಸಿದೆನು" ಎಂದೂ, "ಕೊರತೆಯಿರ್ದೊಡೆ ಮನ್ನಿಸುವುದೊಲಿದು" ಎಂದೂ ಅವರ ಕರುಣೆಯನ್ನು ಯಾಚಿಸಿದ್ದಾನೆ. ಹೀಗೆ ರಂಗನಾಥನು ಅಂಜುತ್ತಂಜುತ್ತ ವೇದಾಂತವನ್ನು ಜನರಲ್ಲಿ ಪ್ರಚಾರ ಮಾಡಿದನು. ಆದರೆ ದ್ವೈತಿಗಳಾದ ಬ್ರಾಹ್ಮಣರು ತಮ್ಮ ಹಠವಾದವನ್ನು ಬಿಟ್ಟಿರಲಿಲ್ಲವೆಂದು ಕಾಣುತ್ತದೆ. ಅದಕ್ಕೆ ಸಾಕ್ಷಿಯಾಗಿ ಜಗನ್ನಾಥದಾಸರೇ ತಮ್ಮ ಪೂರ್ವ ವಯಸ್ಸಿನ ವರ್ತನೆಯನ್ನು ತೆಗೆದುಕೊಂಡು ರಂಗನಾಥನನ್ನು ಅನುಸರಿಸಿ ಅವನ ರೀತಿಯಲ್ಲಿಯೇ, ಅವನ ಮಾತಿನಲ್ಲಿಯೇ, ಅವನ ದೃಷ್ಟಾಂತದಲ್ಲಿಯೇ ಪಂಡಿತರನ್ನು ಸಂಬೋಧಿಸಿದ್ದಾರೆ. ರಂಗನಾಥನು ಎರಡು ಪದ್ಯಗಳನ್ನು ಬರೆದರೆ ಜಗನ್ನಾಥ ದಾಸರು ಮೂರು ಪದ್ಯಗಳನ್ನು ಬರೆದರು. ಪಂಡಿತರು ಒಂದೆರಡು ಮಾತಿಗೆ ಸಮಾಧಾನವಾಗುವವರಲ್ಲವೆಂದೊ?

'' ಆದರುಶವ ಗತಾಕ್ಷ ಭಾಷಾ |
ಭೇದದಿಂದಲಿ ಕರೆಯಲದನು ನಿ |
ಷೇಧಗೈದವಲೋಕಿಸದೆ ಬಿಡುವರೆ ವಿವೇಕಿಗಳು ||

ಕನ್ನಡಿಯನ್ನು ಆದರ್ಶವೆನ್ನದೆ, ಕನ್ನಡಿಯೆಂದುದರಿಂದ ನೋಡಲಾರೆನೆಂದು ಕುರು ಡನೆಂದರೆ, ವಿವೇಕಿಗಳು ಕುರುಡನಿಗೆ ಕನ್ನಡಿಯೆಂದರೇನು? ಆದರ್ಶವೆಂದರೇನು? ಎಂದು ಅವನನ್ನು ಹಾಸ್ಯ ಮಾಡಿ ತಾವು ಕನ್ನಡಿಯನ್ನು ನೋಡಿಕೊಳ್ಳುವುದು ಬಿಡುವರೆ? ಹಾಗೆಯೇ, ''ಮಾಧವನ ಗುಣ ಪೇಳ್ವ ಪ್ರಾಕೃತವಾದರೆಯು ಸರಿ ಕೇಳಿ ಪರಮಾಹ್ಲಾದ ಪಡದಿಪ್ಪರೆ ನಿರಂತರ ಬಲ್ಲ ಕೋವಿದರು?". ಪರಮಾತ್ಮನ ಗುಣ ಗಾನವನ್ನು ಕನ್ನಡದಲ್ಲಿ ಮಾಡಿದರೆ ತಿಳಿದವರು ತೆಗಳುವರೆ? ಎಂದು ಪ್ರಶ್ನಿಸಿದ್ದಾರೆ. ಇದನ್ನು ಮತ್ತೊಂದು ದೃಷ್ಟಾಂತದಿಂದ ಒತ್ತಿ ಹೇಳಿದ್ದಾರೆ.

ಭಾಸ್ಕರನ ಮಂಡಲವ ಕಂಡು ನ |
ಮಸ್ಕರಿಸಿ ಮೋದಿಸದೆ ದ್ವೇಷದಿ |
ತಸ್ಕರನು ನಿಂದಿಸಲು ಕುಂದಹುದೆ ದಿವಾಕರಗೆ ||
ಸಂಸ್ಕೃತವಿದಲ್ಲೆಂದು ಕುಹಕ ತಿ |
ರಸ್ಕರಿಸಲೇನಹುದು ಭಕ್ತಿ ಪು |
ರಸ್ಕರದಿ ಕೇಳ್ವರಿಗೆಯೊಲಿವನು ಪುಷ್ಕರಾಕ್ಷ ಸದಾ ||

ಇದು ಕನ್ನಡವನ್ನು ತಿರಸ್ಕರಿಸುವವರನ್ನು ಕಟುವಾಗಿ ಟೀಕಿಸುವ ಮಾತು. ಅವನು ಸೂರ್ಯನನ್ನು ನಿಂದಿಸುವ ಕಳ್ಳನಂತೆ. ಸಂಸ್ಕೃತವಲ್ಲವೆಂದು ತಿರಸ್ಕರಿಸುವವನು ಕುಹಕ. ಆದ್ದರಿಂದ ನಿಂದಕರನ್ನು ಹೀಗೆ ಸಮಾಧಾನ ಮಾಡುವರು. '' ಕೃತಿಪತಿ ಕಥಾನ್ವಿತ ವೆನಿಪ ಪ್ರಾಕೃತವೆ ತಾ ಸಂಸ್ಕೃತವೆನಿಸಿ ಸದ್ಗತಿಯನೀವುದು ಭಕ್ತಿಪೂರ್ವಕ ಪೇಳಿ ಕೇಳ್ವರಿಗೆ"

ಜಗನ್ನಾಥ ದಾಸರ ಈ ಮೂರು ಪದ್ಯಗಳಲ್ಲಿಯೂ ರಂಗನಾಥನ ಮೇಲಿನ ಆ ಎರಡು ಪದ್ಯಗಳ ಭಾವವೂ ಇದೆ; ಅಷ್ಟೇ ಅಲ್ಲ ಕನ್ನಡಿಯ ದೃಷ್ಟಾಂತವೂ ಇದೆ. ಕನ್ನಡ ಸಂಸ್ಕೃತಕ್ಕೆ ಕಡಮೆಯಲ್ಲವೆಂಬ ನಿರ್ಧಾರವೂ ಇದೆ.

ಅನುಭವಾಮೃತದಲ್ಲಿ ಬ್ರಹ್ಮ ಜ್ಞಾನಕ್ಕೆ ಅಧಿಕಾರಿಗಳಾರು? ಅನಧಿಕಾರಿ ಗಳಾರು? ಎಂಬ ವಿಷಯವನ್ನು ಕವಿ ಮೊದಲ ಎರಡು ಅಧ್ಯಾಯಗಳಲ್ಲಿ ವಿಸ್ತಾರ ವಾಗಿ ಹೇಳಿದ್ದಾನೆ. ಜಗನ್ನಾಥ ದಾಸರು ಈ ವಿಷಯ ಪ್ರತಿಪಾದನೆಗಾಗಿ ಪ್ರತ್ಯೇಕ ವಾಗಿ ಪ್ರಕರಣವನ್ನಿಟ್ಟುಕೊಂಡಿಲ್ಲ. ಅವರು ಈ ವಿಷಯವನ್ನು ಬೇರೆ ಬೇರೆ ಸಂಧಿ ಗಳಲ್ಲಿ ಸಂದರ್ಭೋಚಿತವಾಗಿ ಹೇಳಿದಂತೆ ಕಾಣುತ್ತದೆ. ಎಲ್ಲೆಲ್ಲಿ ಈ ಪ್ರಸಕ್ತಿ ಬರುವುದೋ, ಅಲ್ಲಿ ನಾವು ಇವೆರಡು ಗ್ರಂಥಗಳ ಪದ್ಯಗಳಲ್ಲಿ ಹೋಲಿಕೆಯನ್ನು ಕಾಣುತ್ತೇವೆ. ಈ ಪದ್ಯಗಳಲ್ಲಿ ಹೋಲಿಕೆ ಎಷ್ಟು ಸ್ಪಷ್ಟವಾಗಿದೆ.

ಕಾಯ ಸುಖವನು ಬಯಸಿ, ಧನವನು |
ಸಾಯನದಲಾರ್ಜಿಸಿ ಮದಾಂಧರ |
ಗಾಯಕರ ಪಾತಕರ ಭಂಡರ ಬಯಕೆಗಳ ಬಯಸಿ ||
ಬಾಯ ಬಡಕರು ಬಗಳುವರು ನಿ |
ಶ್ರೈಯಸಾಭ್ಯಾಸಿಗಳ ನಿಂದಿಸ |
ನಾಯಿಗೇತಕೆ ನವರಸಾನ್ನವು ? ಮಗನೆ ಕೇಳೆಂದ ||

(ಅನುಭವಾಮೃತ ಅ. ೧. ಪದ್ಯ ೩೬)

ಮರುಳು ಹಿಡಿದವ ಮದ್ದುಗುಣಿಕೆಯ |
ನರೆದು ಕುಡಿವಂದದಲಿ ಮಾಯಾ |
ವರಣದಲಿ ಮರೆದಿರ್ದು ತನ್ನನು ಮೂಢ ಭಾವದಲಿ ||
ಪರಿಪರಿಯ ಸಂಸಾರ ವಿಷಯದಿ |
ಹಿರಿದು ಬಿಗಿವಡೆದಿರ್ಪ ಮನುಜಗೆ |
ದೊರಕುವುದೆ ? ಪರತತ್ತ್ವ ತೆರಳೆಯ ಹುಳುವಿನಂತಿಹಗೆ ||

(ಅನು ಅಧ್ಯಾಯ ೧ ಪದ್ಯ ೩೭)

ಅಧಿಕ ಧನ ಸಂಪತ್ತು ಯೌವನ |
ವೊದಗಿರಲು ವನಿತಾದಿ ವಿಷಯಾ |
ಸ್ಪದನೆನಿಸುತೊಡಲರಿಯದವಗಧ್ಯಾತ್ಮವೇಕೆ ? ||

ಅನು. ಅ. ೧. ಪ. ೩೯

ವಿಷಯಲಂಪಟಗೇಕೆ ನಿರ್ವಾಣ ,, ,, ೪೦
ದುರ್ವ್ಯಸನದಿಂದುರಿವ ಪಾತಕಿಗೇಕೆ ನಿಶ್ರೈಯಾಸಾಭ್ಯಾಸ

ಅನು. ಅ. ೧. ಪ. ೪೨

ಕಬ್ಬಿನೊಳಗಿಹ ರಸವಿದಂತನಿ |
ಗಬ್ಬ ಬಲ್ಲುದೆ ಭಾಗ್ಯ ಯೌವನ |
ಮಬ್ಬಿನಲಿ ಮೈಮರೆದವಗೆ ಹರಿಸುಚರಿತಾಮೃತವು ||
ಲಭ್ಯವಾಗದು ಹರಿಪದಾಬ್ಜದಿ |
ಹಬ್ಬಿದತಿ ಸದ್ಭಕ್ತಿ ರಸವುಂ |
ಡುಬ್ಬಿ ಕೊಬ್ಬಿಸುಖಾಬ್ಧಿಯೊಳಗಾಡುವವಗಲ್ಲದಲೆ ||

ಹರಿಕಥಾಮೃತಸಾರ ಸಂಧಿ ೧೦ ಪದ್ಯ ೧೯

ಖಗವರಧ್ವಜನಂಘ್ರಿ ಭಕುತಿಯ |
ಬಗೆಯನರಿಯದ ಮಾನವರಿಗಿದು |
ಒಗಟನಂದದಿ ತೋರುತಿಪ್ಪುದು ಎಲ್ಲ ಕಾಲದಲಿ ||

ಹರಿ. ಸಂ ೧೦. ಪದ್ಯ ೨೦

ಅರಸಿಕರಿಗಿದು ಪೇಳ್ವುದಲ್ಲ ,, ,, ೨೧
ಕಾಕುಮನುಜರಿಗಿದು ಸಮರ್ಪಕವಾಗಿ ಸೊಗಸುವುದೆ ?
ಕೋಕನದ ಪರಿಮಳವ ಷಟ್ಪದ |
ಸ್ವೀಕರಿಸುವಂದದಲಿ ಜಲಚರ |
ಭೇಕ ಬಲ್ಲುದೆ .... .... .... ಹರಿ. ಸಂ ೧೦. ಪ ೨೩
ನಿಷ್ಠುರಿಗಳಿಗೆ ಪಿಶುಣರಿಗಯೋಗ್ಯರಿಗಿದನು ಪೇಳದಲೆ
ಹರಿ. ಸ. ೧೩ ಪದ್ಯ ೩೨

ತತ್ತ್ವಾಧಿಕಾರಿಗಳಾರು ಎಂಬುದನ್ನು ಎರಡು ಗ್ರಂಥಗಳಲ್ಲಿಯೂ ಸಮಾನ ವಾಗಿ ಹೇಳಿದೆ.

ಭಕ್ತಿಯಿಂದೀಶ್ವರನ ಪೂಜಿಸಿ |
ಚಿತ್ತಶುದ್ಧಿಯ ಪಡೆದು ಮೋಕ್ಷವ |
ನರ್ಥಿಸುತ್ತಿಹ ಸಾಧುಗಳೆ ತತ್ತ್ವಾಧಿಕಾರಿಗಳು ||
ಅನು. ಅ. ೧ ಪ. ೨೧
ದಂಭದರ್ಪಗಳೇನುಮಿಲ್ಲದ ಶಾಂತರೆ ತತ್ತ್ವಾಧಿಕಾರಿಗಳು
ಅನು. ಅ. ೧ ಪ ೧೯
ತ್ರಿಗುಣ ವರ್ಜಿತನಮಲಗುಣಗಳ |
ಪೊಗಳಿ ಹಿಗ್ಗುವ ಭಾಗವತರಿಗೆ |
ಮಿಗೆ ಭಕುತಿ ಸುಜ್ಞಾನ ಸುಖವಿತ್ತವರ ರಕ್ಷಿಪುದು ||
ಹರಿ. ಸಂ, ೧೦ ಪ ೨೦
ಅನ | ವರತ ಭಗವತ್ಪಾದ ಯುಗಳಾಂ |
ಬುರುಹ ಮಧುಕರರೆನಿಸುವರಿಗರುಪುವುದು ಮೋದದಲಿ ||
ಹರಿ. ಸಂ. ೧೦ ಪದ್ಯ. ೨೧
ಹರಿಪದಾಬ್ಜದಿ | ಹಬ್ಬಿದತಿ ಸದ್ಭಕ್ತಿರಸವುಂ | ಡುಬ್ಬಿ ಕೊಬ್ಬಿ ಸುಖಾಬ್ಧಿ
ಯೊಳಗಾಡುವವಗಲ್ಲದಲೆ || ಹರಿ. ಸಂ. ೧೦ ಪದ್ಯ ೧೯
ವೇದ ಶಾಸ್ತ್ರವನೋದಿದುದರಿಂ !
ದಾದ ಫಲವೇನದರ ಸಾರವ |
ಭೇದಿಸಿದರದು ಸಫಲವದನರಿಯದಿರೆ ನಿಷ್ಫಲವು ||
ಅನು. ಅ. ೩ ವ. ೫
ವೇದಶಾಸ್ತ್ರದ ಹೊಲಬನರಿಯದೆ |
ಭೇದವಾದವ ಮಾಡಿ ಪಾಷಂ |
ಡಾದಿ ಮತದಲಿ ನಡೆದು ದಂಭಾಚಾರ ಪರನಾಗಿ ||

ಸಾದರದಿ ಸಂಸಾರದಲಿ ಹಿರಿ |
ದಾದ ಯತ್ನದಿ ಕುದಿವ ಖೂಳಗೆ |
ಬೋಧೆಯೇತಕೆ ?— ಅನು. ಅ. ೧, ಪದ್ಯ ೩೧

ಏನ ಕಲಿತಡದೇನು ? ಯತ್ನದ |
ಲೇನ ಮಾಡಿದೊಡೋನು ? ಸರ್ವವು |
ಕಾನನದ ಬೆಳದಿಂಗಳಂದದಿ ವ್ಯರ್ಥವಾಗಿಹುದು ||
ಸ್ವಾನುಭವ ಸುಜ್ಞಾನವಿಲ್ಲದ |
ಮಾನವನು ಬದುಕಿದೊಡದೇನವ |
ಶ್ವಾನಸೂಕರರಂತೆ ಹೊಟ್ಟೆಯ ಹೊರೆದುಕೊಂಡಿಹನು ||

ಅನು. ಅ. ೧ ಪ. ೪೬

ಅನುಭವಾಮೃತದ ಈ ಪದ್ಯಗಳನ್ನು ಹರಿಕಥಾಮೃತಸಾರದ ಕೆಳಗಿನ ಪದ್ಯಗಳೊಡನೆ ಹೋಲಿಸಬೇಕು.

ವೇದ ಶಾಸ್ತ್ರ ಪುರಾಣ ಕಥೆಗಳ |
ನೋದಿ ಪೇಳಿದರೇನು ಸಕಲ ನಿ |
ಷೇಧ ಕರ್ಮವ ತೊರೆದು ಸತ್ಕರ್ಮಗಳ ಮಾಡೇನು ||
ಓದನಂಗಳ ಜರೆದು ಶ್ವಾಸ ನಿ |
ರೋಧ ಗೈಸಿದರೇನು ಕಾಮ |
ಕ್ರೋಧವಳಿಯದೆ ನಾನು ನನ್ನದು ಎಂಬ ಮಾನವನು ||

ಹರಿ. ಸಂಧಿ ೧೦ ಪದ್ಯ ೧೬

ಏನು ಕೇಳಿದರೇನು ನೋಡಿದ |
ರೇನು ಓದಿದರೇನು ಪೇಳಿದ |
ರೇನು ಪಾಡಿದರೇನು ಮಾಡಿದರೇನು ದಿನದಿನದಿ ||
ಶ್ರೀನಿವಾಸನ ಜ್ಞಾನ ಕರ್ಮ ಸ |
ದಾನು ರಾಗದಿ ನೆನೆದು ತತ್ತತ್ |
ಸ್ಥಾನದಲಿ ತದ್ರೂಪ ತನ್ನಾಮಕನ ಸ್ಮರಿಸದವ ||

ಹರಿ. ಸಂ. ೧೦. ಪ. ೧೭

ಈ ಪದ್ಯಗಳ ರೀತಿ, ಶೈಲಿಗಳು ಒಂದೇ ವಿಧವಾಗಿದ್ದರೂ, ಪ್ರತಿಪಾದ್ಯ ವಿಷಯದಲ್ಲಿ ಭಿನ್ನತೆಯಿರುವುದನ್ನು ಲಕ್ಷಿಸಬೇಕು. ಒಂದರಲ್ಲಿ ಅದ್ವೈತ ತತ್ತ್ವವು ಮುಖ್ಯ ಲಕ್ಷ್ಯವಾಗಿದೆ, ಮತ್ತೊಂದರಲ್ಲಿ ದ್ವೈತ ತತ್ತ್ವವು ಪ್ರಧಾನ ಧ್ಯೇಯುವಾಗಿದೆ. ಅನುಭವಾಮೃತಕಾರನು "ಸ್ವಾನುಭವಯುಕ್ತ" ಜ್ಞಾನವನ್ನು ಪ್ರತಿಪಾದಿಸುತ್ತಾನೆ. ಹರಿಕಥಾಮೃತಸಾರಕರ್ತನು "ಶ್ರೀನಿವಾಸನ ಜ್ಞಾನಕರ್ಮ ಸದಾನುರಾಗದಿ

ನೆನೆದು ತತ್ತತ್ ಸ್ಥಾನದಲಿ ತದ್ರೂಪ ತನ್ನಾಮಕ"ನನ್ನು ಸ್ಮರಿಸುವುದನ್ನು ಬೋಧಿಸುತ್ತಾನೆ. ಅದ್ವೈತಿಗಳ ಸ್ವಾನುಭವ ಜ್ಞಾನಕ್ಕೂ ದ್ವೈತಿಗಳ ಸ್ವಾನುಭವ ಜ್ಞಾನಕ್ಕೂ ಇರುವ ತಾರತಮ್ಯವು ಈ ಎರಡು ಗ್ರಂಥಗಳಲ್ಲಿ ಗಂಗೆ ಯಮುನೆಗಳ ವರ್ಣಗಳಂತೆ ಪ್ರತ್ಯೇಕವಾಗಿ ಗೋಚರವಾಗುತ್ತದೆ. ತನ್ನನ್ನೇ ಸರ್ವ ಪದಾರ್ಥಗಳಲ್ಲಿಯೂ, ಸರ್ವ ಪದಾರ್ಥಗಳ ಆತ್ಮೀಯತೆಯನ್ನು ತನ್ನಲ್ಲಿಯೂ ಕಾಣಬೇಕೆಂಬ ಅದ್ವೈತರ ಸ್ವಾನುಭವ. ದ್ವೈತಾನುಭವವಾದರೋ ತದ್ಭಿನ್ನವಾದುದು. ಪ್ರತಿಪದಾರ್ಥದಲ್ಲಿಯೂ, ಆಯಾ ಪದಾರ್ಥದ ನಾಮಕರ್ಮಗಳಲ್ಲಿಯೂ, ತನ್ನ ರೂಪ, ನಾಮ, ಕರ್ಮಗಳಲ್ಲಿಯೂ ಒಬ್ಬ ಪರಮಾತ್ಮನನ್ನು ಆಯಾ ವಸ್ತುಗಳ ಆಕಾರದಂತೆ, ಆ ನಾಮದಂತೆ, ಆ ಕರ್ಮದಂತೆ, ಭಾವಿಸುವ ಜ್ಞಾನವೇ ದ್ವೈತಭಾವ. ಒಂದರಲ್ಲಿ ತಾನೇ ಎಲ್ಲವಾಗುವನು, ಎಲ್ಲ ತಾನೇ ಆಗುವನು. ಮತ್ತೊಂದರಲ್ಲಿ ತಾನು ಬೇರೆಯಾಗಿದ್ದು ತನ್ನಲ್ಲಿಯೂ, ಅನ್ಯರಲ್ಲಿಯೂ, ಪರಮಾತ್ಮನನ್ನು ತನ್ನಂತೆ, ಅನ್ಯರಂತೆ ಕಾಣುವನು. ಆದ್ದರಿಂದ ಒಂದರಲ್ಲಿ ಎಲ್ಲವೂ ಒಂದೆ; ಮತ್ತೊಂದರಲ್ಲಿ ಎಲ್ಲವೂ ಬೇರೆ ಬೇರೆ, ತಾನೂ ಬೇರೆ, ಪರಮಾತ್ಮನೊಬ್ಬನು ಎಲ್ಲರಲ್ಲಿ ಒಂದೇ. ಈ ವಿಧವಾದ ಜ್ಞಾನದ ಆವಿಷ್ಕರಣಕ್ಕಾಗಿ ಎರಡು ಗ್ರಂಥಗಳ ದಾರಿಗಳು ಕವಲೊಡೆದು ಬೇರೆಯಾಗಿ ದೀರ್ಘವಾಗಿವೆ. ಈ ದಾರಿಗಳು ಪಥಿಕರಿಗೆ ಸುಗಮಗಳೂ ಚಿತ್ತಾಕರ್ಷಕಗಳೂ, ಆಗುವ ಹಾಗೆ ದಾರಿ ಉದ್ದಕ್ಕೂ ಸೊಗಸಾದ ಶಬ್ದಚಿತ್ರಾತ್ಮಕ ವೃಕ್ಷಗಳನ್ನೂ, ದೃಷ್ಟಾಂತಗಳ ಆರಾಮಗಳನ್ನೂ, ಭಾವಗಳ ವಾಪಿಗಳನ್ನೂ ಕವಿಗಳಿರ್ವರು ನಿರ್ಮಿಸಿದ್ದಾರೆ. ಆದರೆ ಕನ್ನಡದಲ್ಲಿ ಮೊದಲನೆಯ ದಾರಿಯನ್ನು ನೋಡಿಯೇ ದ್ವಿತೀಯ ಮಾರ್ಗನಿರ್ಮಾಣವಾಗಿದೆಯೆಂಬುದನ್ನು ಮರೆಯಬಾರದು.

ಸನ್ಮಾರ್ಗವನ್ನು ಕಾಣದೆ ಲೌಕಿಕರು ಸಂಸಾರದಲ್ಲಿ ಮುಳುಗಿದ್ದಾರೆ. ಮೊದಲು ಅವರನ್ನು ಎತ್ತಬೇಕು, ಆ ಮೇಲೆ ಅವರಿಗೆ ಸರಿಯಾದ ಮಾರ್ಗವನ್ನು ತೋರಿಸಬೇಕು, ಎಂಬ ಹಂಬಲು ಇಬ್ಬರು ಕವಿಗಳಲ್ಲಿಯೂ ಒಂದೇ ವಿಧವಾಗಿದೆ. ಅನುಭವಾಮೃತಕಾರನು ಇದನ್ನು ವರ್ಣಿಸುವ ರೀತಿ ಹೀಗೆ,

ವಿಷಯಲಂಪಟರಾಗಿ ಸಂಸೃತಿ |
ವ್ಯಸನದಲ್ಲಿಹ ಜೀವರೆಲ್ಲರು |
ಪಶುಗಳೆನಿಸುವರು—ಅನು. ಅ. ೧ ಪ. ೫೨ ಏಕೆಂದರೆ

ಪಶುಗಳಿಗೂ ಮನುಷ್ಯರಿಗೂ ಭೇದವೇ ಇಲ್ಲವೆಂಬುದನ್ನು ಮೊದಲೇ " ಪಶುಗಳಿಗು ಮನುಜರಿಗು ಭೇದವ | ಸುಸುರಬಾರದದೇಕೆನಲು ಸರಿ | ಹುಸಿಯ ಭೌತಿಕ ದೇಹ ನಿದ್ರಾಹಾರ ಭಯ ಸಂಗ || ವ್ಯಸನ ಮೊದಲಾದುವು ಸಮಾನಗ | ಳೆಸೆದು ತೋರ್ಪುವು....(ಅನು ಅ. ೧. ಪ. ೫೧) ಎಂದು ನಿರ್ಣಯಿಸಿದ್ದಾಗಿದೆ. ಅವರ ಈ ಸಂಸಾರಾಸಕ್ತಿ ಅತಿ ಬಲವಾದುದು. ನಾನಾ ಮುಖವಾದುದು.

ಕೆಲ ಕೆಲರು ಮನೆ ವಾರ್ತೆ ಮಕ್ಕಳಿ |
ಗೊಲಿದು ಮಮತೆಯ ಮಾಡಿ, ಧನವನು |
ಗಳಿಸಿ, ಸಂಸ್ಕೃತಿ ಸಂಭ್ರಮದಲಾಸಕ್ತರಾಗಿಹರು ||

ಹೀಗೆ ಇದೇ ವಿಷಯವನ್ನು ಕವಿ ಹತ್ತಿಪ್ಪತ್ತು ಪದ್ಯಗಳಲ್ಲಿ ವಿಸ್ತರಿಸಿದ್ದಾನೆ. ಜಗನ್ನಾಥ ದಾಸರಾದರೋ, ಅಲ್ಲಲ್ಲಿ ಒಂದೊಂದು ಪದ್ಯದಲ್ಲಿ ಈ ವಿಷಯವನ್ನು ಪ್ರತಿಪಾದಿಸುತ್ತಾರೆ. ಇವರು ಹೇಳುವ ರೀತಿ ಬಹು ಸಂಕ್ಷೇಪವಾದುದು, ಇವರಲ್ಲಿ ವಿಸ್ತರವಿಲ್ಲ. ಮೇಲಿನ ಪದ್ಯಗಳ ಭಾವವು ಈ ಮುಂದಿನ ಪದ್ಯಗಳಲ್ಲಿ ನಿರೂಪಿತವಾಗಿರುವುದನ್ನು ಇಲ್ಲಿ ಕಾಣಬಹುದು.

ಗೃಹ ಕುಟುಂಬ ಧನಾದಿಗಳ ಸ |
ನ್ನಹಗಳುಳ್ಳವರಾಗಿ ವಿಹಿತಾ |
ವಿಹಿತ ಧರ್ಮ ಸುಕರ್ಮಗಳ ತಿಳಿಯದಲೆ ನಿತ್ಯದಲಿ ||
ಆಹರ ಮೈಥುನನಿದ್ರೆಗೊಳಗಾ |
ಗಿಹರು ಸರ್ವ ಪ್ರಾಣಿಗಳು ಹೃ |
ದ್ಗುಹನಿವಾಸಿಯ ನರಿಯದಲೆ ಭವದೊಳಗೆ ಬಳಲುವರು ||
(ಹರಿ. ಸಂ. ೧೩. ಪದ್ಯ ೨೪)

ಆಹರ ನಿದ್ರಾ ಮೈಥುನಗಳಹ |
ರಹರ ಬಯಸಿ ಬಳಲುವ ಲಕ್ಷ್ಮೀ |
ಮಹಿತನ ಮಹಾ ಮಹಿಮೆಗಳನೆಂತರಿವ—(ಹರಿ. ಸ. ೧೮. ಪದ್ಯ ೮)

ಇಂಥವರಿಗೆ ಅವರು ಮಾಡುವ ಉಪದೇಶವಿದು.

ಒರಟು ಬುದ್ಧಿಯ ಬಿಟ್ಟುಲೌಕಿಕ |
ಹರಟೆಗಳ ನೀಡಾಡಿ ಕಾಂಚನ |
ಪರಟೆ ಲೋಷ್ಟಾದಿಗಳು ಸಮವೆಂದು—ಅರಿಯಬೇಕು.

ಈ ಬೋಧೆ ಭಗವದ್ಗೀತೆಯ "ಸಮಲೋಷ್ಟಾಶ್ಮಕಾಂಚನ"ದ ಅನುವಾದದಂತಿದೆ. (ಶ್ರೀಮದ್ಭಗವದ್ಗೀತೆಯ ಅಧ್ಯಾಯ ೬ ಶ್ಲೋಕ ೮)

ಅನೇಕರು ದಂಭಾಚಾರಕ್ಕೊಳಗಾಗಿ ಭಗವತ್ತತ್ತ್ವವನ್ನು ಗ್ರಹಿಸದೆ ದೇಹವನ್ನು ದಂಡಿಸುತ್ತಾರೆ, ತೀರ್ಥಯಾತ್ರೆಗಳನ್ನು ಕೈಕೊಳ್ಳುತ್ತಾರೆ. ಅದು ಸರಿಯಾದ ಮಾರ್ಗವಾಗಲಾರದು. ಇದನ್ನು ಇಬ್ಬರು ಕವಿಗಳು ಹೇಳುವ ರೀತಿ ಇದು.

ಕೆಲರು ಜಪ ತಪಗಳಲಿ, ಕೆಲಬರು |
ಬಲುಮೆಯುಹ ಶಾಸ್ತ್ರದಲಿ, ಕೆಲಬರು |
ಹಲವು ವಿಧ ಯಾಗದಲಿ, ಕೆಲಬರು ದಾನ ಧರ್ಮದಲಿ ||

ಬಳಲುವರು ಬಹು ಕಷ್ಟದಿಂದಲಿ |
ಗಳಿಸಲೆಂದೇ ವಿಷಯ ಸುಖಗಳ |
ತಿಳಿಯಲರಿಯದೆ ನಿತ್ಯ ಸುಖವನು ಸುಲಭ ಮಾರ್ಗದಲಿ ||

ಅನು. ಅ. ೧ ಪ. ೪೪

ಧಾತ್ರಿಯೊಳಗುಳ್ಳಖಿಳ ತೀರ್ಥ |
ಕ್ಷೇತ್ರ ಚರಿಸಿದರೇನು ಪಾತ್ರಾ |
ಪಾತ್ರವರಿತನ್ನಾದಿ ದಾನವ ಮಾಡಿ ಫಲವೇನು ||
ಗಾತ್ರ ನಿರ್ಮಲನಾಗಿ ಮಂತ್ರ |
ಸ್ತೋತ್ರ ಪಠಿಸಿದರೇನು ಹರಿಸ |
ರ್ವತ್ರಗತನೆಂದರಿಯದಲೆ ತಾ ಕರ್ತೃವೆಂಬವನು ||

ಹರಿ. ಸಂ. ೧೦ ಪದ್ಯ ೧೪

ಇದೇ ಭಾವವನ್ನು ಮುಂದುವರಿಸುತ್ತ ಜಗನ್ನಾಥ ದಾಸರು

ಕಂಡನೀರೊಳು ಮುಳುಗಿ ದೇಹವ |
ದಂಡಿಸಿದಫಲವೇನು ದಂಡಕ |
ಮಂಡಲಂಗಳ ಧರಿಸಿ ಯತಿಯೆಂದೆನಿಸಿ ಫಲವೇನು ||
ಅಂಡಜಾಧಿಪನಂಸಗನ ಪದ |
ಪುಂಡರೀಕದಿ ಮನವಹರ್ನಿಶಿ |
ಬಂಡುಣಿಯವೊಲಿರಿಸಿ ಸುಖವಡದಿರ್ಪ ಮಾನವನು ||

ಹರಿ ಸಂ. ೧೦ ಪ. ೧೫

ಎಂದೂ

ಬರಿದೆ ಜಲದೊಳು ಮುಳುಗಿ ಬಿಸಿಲೊಳು |
ಬೆರಳನೆಣಿಸಿದರೇನು ಸದ್ಗುರು |
ಹಿರಿಯರನುಸರಿಸಿರದೆ ಮರ್ಮವನರಿಯದಿಹ ನರನು ||

ಹರಿ ಸಂ. ೭ ಪದ್ಯ ೧೪

ಈ ರೀತಿ ಹೇಳಿದುದನ್ನು ಅನುಭವಾಮೃತಕಾರನು ಉದಾಹರಣೆಗಳಿಂದ ವಿಶದೀ ಕರಿಸಿದ್ದಾನೆ.

ಮೀನು ನೀರೊಳಗಿರ್ದೊಡೇನೈ ? |
ಧ್ಯಾನವನು ಬಕ ಮಾಡಲೇನದು ? |
ಕಾನನವನಾಶ್ರಯಿಸಿ ಮರ್ಕಟವಿದ್ದು ಫಲವೇನು ||
ಮೌನದಲಿ ಕೋಗಿಲೆಯಿರಲ್ಕದ |
ಕೇನು ಫಲ ಸುಜ್ಞಾನವಿಲ್ಲದ |
ಸ್ನಾನ ಮೊದಲಾದವುಗಳಿಂ ಫಲವಿಲ್ಲ ಕೇಳೆಂದ ||

ಅನು. ಅ. ೧ ಪದ್ಯ ೪೯

ಹರಿಕಥಾಮೃತಸಾರದ ಸಂಧಿ ೧೩ ಪದ್ಯ ೬, ಸಂಧಿ ೧೪ ಪದ್ಯ ೨೪, ಸಂಧಿ ೧೫ ಪದ್ಯ ೨೨ ಇದೇ ಭಾವ-ವುಳ್ಳವುಗಳಾಗಿವೆ.

ಸಜ್ಜನರ ಲಕ್ಷಣವನ್ನು ಉಸುರುವ ಈ ಎರಡು ಪದ್ಯಗಳು ಒಂದು ಒಂದರ ಪ್ರತಿಛಾಯೆಯಾಗಿವೆ.

ತನಯ ಕೇಳಧ್ಯಾತ್ಮವಾಸನೆ |
ಯನವರತ ಶಾಸ್ತ್ರಾರ್ಥ ಚಿಂತನೆ, |
ಘನ ವಿವೇಕ, ವಿರಕ್ತಿ, ಸದ್ಗುಣವೃತ್ತಿ, ಸತ್ಸಂಗ, ||
ಅನಘ ಗುರು ಶುಶ್ರೂಷೆ ಮೊದಲಾ |
ದಿನಿತು ಸದ್ವರ್ತನೆಯೊಳೊಂದಿಹ |
ಮನುಜನೇ ತತ್ತ್ವಾಧಿಕಾರಿ ಮುಮುಕ್ಷುವೆನಿಸುವನು ||

ಅನು. ಅ. ೧. ಪದ್ಯ ೩೦

ಜ್ಞಾನ ಭಕುತಿ ವಿರಕ್ತಿ ವಿನಯ ಪು |
ರಾಣ ಶಾಸ್ತ್ರ ಶ್ರವಣ ಚಿಂತನ |
ದಾನ ಶಮ ದಮ ಯಜ್ಞ ಸತ್ಯಾಹಿಂಸ ಭೂತದಯಾ ||
ಧ್ಯಾನ ಭಗವನ್ನಾಮ ಕೀರ್ತನ |
ಮೌನ ಜಪ ತಪ ವ್ರತ **ಸುತೀರ್ಥ** |
ಸ್ನಾನ ಮಂತ್ರ ಸ್ತೋತ್ರವಂದನ ಸಜ್ಜನರ ಗುಣವು ||

ಹರಿ. ಸ. ೧೮. ಪ ೧೮)

ದೇಶ ಭಾಷೆಗಳಲ್ಲಿ ರಚಿತವಾದ ವೇದಾಂತ ಗ್ರಂಥಗಳು ಸಾಮಾನ್ಯವಾಗಿ ವೇದಗಳು, ಉಪನಿಷತ್ತುಗಳು, ಶ್ರೀಮದ್ಭಗವದ್ಗೀತೆ ಇವುಗಳಲ್ಲಿ ಉಕ್ತವಾದ ತತ್ತ್ವಗಳನ್ನೇ ಆಧರಿಸಿರುತ್ತವೆ. ಗ್ರಂಥಕರ್ತೃಗಳು ಈ ವಿಷಯವನ್ನು ತಮ್ಮ ಗ್ರಂಥಗಳಲ್ಲಿ ಹೇಳುವುದೂ ಉಂಟು. ಆದ್ದರಿಂದ ಎಷ್ಟೋ ಸಂದರ್ಭಗಳಲ್ಲಿ ಬೇರೆ ಬೇರೆ ಭಾಷೆಗಳಲ್ಲಿ ರಚಿತವಾದ ಗ್ರಂಥಗಳ ವಿಷಯಗಳಲ್ಲಿ ಹೋಲಿಕೆ ಕಾಣುವುದು ಸಾಮಾನ್ಯವಾಗಿದೆ. ಇದಕ್ಕೆ ಮುಖ್ಯ ಕಾರಣ ಅವುಗಳ ಆಕರವು ಒಂದೇ ಆಗಿರುವುದು. ವಿಷಯುಗಳನ್ನು ಜೋಡಿಸುವುದು, ಹೇಳುವ ರೀತಿ, ಭಾಷೆ, ಇವುಗಳಲ್ಲಿ ಪ್ರತಿಯೊಬ್ಬ ಗ್ರಂಥಕರ್ತನು ತನ್ನ ಮಾರ್ಗವನ್ನು ತಾನೇ ಸೃಷ್ಟಿ ಮಾಡಿಕೊಳ್ಳಬಹುದು. ಕೆಲವೆಡೆಗಳಲ್ಲಿ ಮೇಲಿನ ಆಕರಗಳ ವಿಷಯಗಳೆಲ್ಲ ಒಂದೇ ಗ್ರಂಥದಲ್ಲಿ ಪ್ರತಿಪಾದಿತವಾಗುವುದೂ ಉಂಟು. ಆಗ ಬೇರೆ ಬೇರೆ ಮತಾಚಾರ್ಯರ ಅನುಯಾಯಿಗಳು ತಮ್ಮ ಮತಾಚಾರ್ಯರ ಸಿದ್ಧಾಂತವನ್ನನುಸರಿಸಿ ಮೂಲ ಆಕರಗಳ ಭಾವನನ್ನು ತಮ್ಮ ಗ್ರಂಥಗಳಲ್ಲಿ ನಿರೂಪಿಸುವುದು ಸಹಜವಾಗಿದೆ. ಶ್ರೀ ಶಂಕರಾಚಾರ್ಯರ ಅದ್ವೈತ ಮಾರ್ಗವನ್ನನುಸರಿಸಿ ವೇದೋಪನಿಷತ್ತುಗಳ ಭಾವಗಳನ್ನು ರಂಗನಾಥನೂ, ಶ್ರೀಮಧ್ವಾಚಾರ್ಯರ ದ್ವೈತಸಿದ್ಧಾಂತವನ್ನನುಸರಿಸಿ

ಜಗನ್ನಾಥದಾಸರೂ, ವೇದಾಂತ ತತ್ತ್ವಗಳನ್ನು ಬೇರೆ ಬೇರೆ ಬಣ್ಣದಲ್ಲಿ ಚಿತ್ರಿಸಿದ್ದಾರೆ. ಇಂಥ ಸಂದರ್ಭಗಳಲ್ಲಿ ಮೂಲ ಗ್ರಂಥಗಳ ಭಾವವು ದೇಶ ಭಾಷೆಗಳಲ್ಲಿ ಹೇಗೆ ವ್ಯಕ್ತವಾಗಿದೆಯೆಂಬುದನ್ನು ಭಾಷಾವಿದರು ತುಲನಾತ್ಮಕದೃಷ್ಟಿಯಿಂದ ಅರಿಯ ಬೇಕು. ರಂಗನಾಥನೂ, ಜಗನ್ನಾಥದಾಸರೂ, ತಮ್ಮ ತಮ್ಮ ಕೃತಿಗಳಲ್ಲಿ ಉಪನಿಷದ್ವಾಕ್ಯಗಳನ್ನೂ, ಭಾವಗಳನ್ನೂ, ಗೀತೆಯ ವಾಕ್ಯಗಳನ್ನೂ, ಅಭಿಪ್ರಾಯ ವನ್ನೂ ಕನ್ನಡಿಸಿದ್ದಾರೆ.

ಮನದಿವಾಕ್ಕಾಯದಲಿ ಪಾಪವ |
ನೆನೆಯ; ನುಡಿಯನು ಮಾಡನನ್ಯರು |
ತನಗೆ ಮಾಡಿದೊಡಪಕೃತಿಯನದು ಪೂರ್ವಕೃತವೆಂಬ ||
ತನುಜರಸುಜರು ತಾಯಿತಂದೆಗ |
ಳೆನಿತು ತನ್ನನು ದೂಷಿಸಲು ಭೂ |
ಷಣವ ಮಾಡಲು ಹಿಗ್ಗಿ ತಗ್ಗನು ಮೋಕ್ಷಕಾಂಕ್ಷಕನು ||

ಅನು. ಅ. ೧ ಪದ್ಯ ೨೩

ಬಂದಸುಖದುಃಖಗಳುತನ್ನನು |
ಮುಂದುಗೆಡಿಸಲು ನೋಯದುಬ್ಬದ |
ಬಂದುದೆಲ್ಲವುಮೀಶ್ವರಾಜ್ಞೆಯೆನುತ್ತ ಧೈರ್ಯವನು ||
ತಂದುಮನದಲಿ ದೃಢವಿರಕ್ತಿಯ |
ಹೊಂದಿ ಭೋಗಭ್ರಾಂತಿತನಗಳಿ |
ದಂದು ಮೋಕ್ಷಾಪೇಕ್ಷೆಯಾಗೆ ಮುಮುಕ್ಷುವೆನಿಸುವನು ||

ಅನು. ಅ ೧ ಪದ್ಯ ೨೪

ಎಡರಿನಲ್ಲೆದೆಗುಂದದುಬ್ಬದೆ |
ಪೊಡವಿಗಧಿಪತಿಯಾಗೆ ಹಿಗ್ಗದೆ |
ಬಡತನದಿ ಕಂಗೆಡದೆ ವಿತ್ತವ ಗಳಿಸಿಗರ್ವಿಸದೆ, ||
ಮಡದಿ ಮನೆ ಮನೆವಾರ್ತೆಮಕ್ಕಳ |
ಗೊಡವೆಯಲಿ ಕಡುಮುಃಮತೆಯಿಲ್ಲದೆ |
ದೃಢವಿರಕ್ತಿಯಲಿರಲು ಮೋಕ್ಷವಪಡೆವನವನೆಂದ ||

ಅನು. ಅ. ೧ ಪದ್ಯ ೨೯

ಇದೇ ಅಭಿಪ್ರಾಯವನ್ನು ಜಗ್ನನಾಥದಾಸರು ಹೀಗೆ ಹೇಳಿದ್ದಾರೆ.

ಭಾಗ್ಯಬಡತನ ಬರಲು ಹಿಗ್ಗದೆ |
ಕುಗ್ಗಿ ಸೊರಗದೆ ಸದ್ಭಕುತಿವೈ |
ರಾಗ್ಯಗಳನೇ ಮಾಡುನೀನಿರ್ಭಾಗ್ಯನೆನಿಸದಲೆ ||

ಹರಿ. ಸ. ೧೧ ಪದ್ಯ ೨೩

ಹಾನಿವೃದ್ಧಿ ಜಯಾಪಜಯಗಳು |
ಏನು ಕೊಟ್ಟುದ ಭುಂಜಿಸುತ ಲ |
ಕ್ಷ್ಮೀನಿವಾಸನ ಕರುಣವನೆ ಸಂಪಾದಿಸನುದಿನದಿ ||

ಸ ೧೧ ಪದ್ಯ ೧೬

ತಿಳಿದುಪಾಸನೆಗೈಯುತೀಪರಿ |
ಮಲಿನನಂತಿರು ದುರ್ಜನರ ಕಂ |
ಗಳಿಗೆಗೋಚರಿಸದೆ ವಿಪಶ್ಚಿತರೊಡನೆ ಗರ್ವಿಸದೆ ||
ಮಳೆ ಬಿಸಿಲು ಹಸುತೃಷೆಜಯಾಜಯ |
ಖಳರ ನಿಂದಾನಿಂದೆ ಭಯಗಳಿ |
ಗಳುಕದಲೆ ಮದ್ದಾನೆಯಂದದಿ ಚರಿಸುಧರೆಯೊಳಗೆ ||

ಈಪದ್ಯಗಳು ಶ್ರೀಮದ್ಭಗವದ್ಗೀತೆಯಲ್ಲಿಯ ಸ್ಥಿತಪ್ರಜ್ಞನ ಲಕ್ಷಣಗಳನ್ನು (ಅಧ್ಯಾಯ ೨ ಶ್ಲೋಕ ೫೫--೫೬) ತತ್ತ್ವಜ್ಞಾನಿ ಅಥವಾ ಅಪರೋಕ್ಷ ಜ್ಞಾನಿಯ ಲಕ್ಷಣಗಳನ್ನು (೬ನೆಯ ಅಧ್ಯಾಯ ಶ್ಲೋಕ ೪-೭-೮-೯)ಹೇಳುವ ಶ್ಲೋಕಗಳ ಅನುವಾದಗಳಾಗಿವೆ.

ಸೃಷ್ಟಿಕ್ರಮವು ಅನುಭವಾಮೃತದಲ್ಲಿ ನಾಲ್ಕನೆಯ ಅಧ್ಯಾಯದಲ್ಲಿ ವಿಸ್ತಾರವಾಗಿ ವರ್ಣಿತವಾಗಿದೆ. ಇದನ್ನು ಸಾಂಖ್ಯರ ಸೃಷ್ಟಿಕ್ರಮದಂತೆ ಪ್ರತಿಪಾದಿಸಿದ್ದರೂ ಅದ್ವೈತ ತತ್ತ್ವವು ಇದರಲ್ಲಿ ಓತಪ್ರೋತವಾಗಿದೆ. ದ್ವೈತ ಸೃಷ್ಟಿಗೂ, ಇಲ್ಲಿ ವರ್ಣಿತವಾದ ಸೃಷ್ಟಿಗೂ ತುಂಬ ಭೇದವಿದೆ. ಹರಿಕಥಾಮೃತಸಾರದಲ್ಲಿ ಪರಮಾತ್ಮ, ಪ್ರಕೃತಿ, ಜೀವ ಮುಂತಾದ ಪ್ರಪಂಚ ಸೃಷ್ಟಿ ಅಷ್ಟು ವಿಸ್ತರವಲ್ಲದಿದ್ದರೂ ಸಂಗ್ರಹವಾಗಿ ನಿರೂಪಿತವಾಗಿದೆ. ಇವೆರಡರಲ್ಲಿ ಕಾಣುವ ವ್ಯತ್ಯಾಸವನ್ನು ಇಲ್ಲಿ ಸ್ವಲ್ಪ ವಿಚಾರಿಸಬಹುದಾಗಿದೆ.

ನಿರ್ಗುಣ, ನಿರಂಜನವಾದ ಪರಬ್ರಹ್ಮನಿಂದ ನಾದಮಯವಾದ ಶಬ್ದವು ಜನಿಸಿ ಅಲ್ಲಿಂದ ಪ್ರಪಂಚ ಸೃಷ್ಟಿಯಾಯಿತೆಂಬ ಕ್ರಮವು ಅನುಭವಾಮೃತದಲ್ಲಿ ಈ ಮುಂದಿನಂತೆ ವರ್ಣಿತವಾಗಿದೆ. ಶಬ್ದ ಬ್ರಹ್ಮವು ಪರಮಾತ್ಮನಿಂದ ಸೃಷ್ಟವಾಯಿತು. ಇದರಿಂದ ಅವ್ಯಕ್ತ,— ಪ್ರಧಾನ ಪ್ರಕೃತಿ—ಮಾಯೆ ಹುಟ್ಟಿತು. ಅಲ್ಲಿಂದ ಮೂರು ವಿಧವಾದ ಅಹಂಕಾರ ತತ್ತ್ವಕ್ಕೆ ಆಧಾರಭೂತವಾದ ಮಹತ್ತತ್ತ್ವವು ಜನಿಸಿತು. ಸತ್ತ್ವದಿಂದ ವೈಕಾರಿಕವೂ, ರಜಸ್ಸಿನಿಂದ ತೈಜಸವೂ, ತಾಮಸದಿಂದ ಭೂತಗಳೂ ಉತ್ಪನ್ನವಾದುವು. ಆದ್ದರಿಂದ ಇವೆಲ್ಲವುಗಳ ಉತ್ಪತ್ತಿಗೆ ಕಾರಣವಾದ, ಅನಿರ್ವಚನೀಯವಾದ ಮೂಲ ಮಾಯೆ ಗರ್ಭಿಣಿ ಸ್ತ್ರೀಯಾದಂತಾಯಿತು. ಈಕೆಯಲ್ಲಿ ಹುಟ್ಟಿದ ಮಗು ಆ ಮಹತ್ತತ್ತ್ವ. ಅದರಿಂದ ಹುಟ್ಟಿದ ವೈಕಾರಿಕವೇ ಮನಸ್ಸು ಎಂಬ ಕರಣ. ತೈಜಸವೇ ತನ್ಮಾತ್ರೆಗಳು, ಎಂದರೆ ಪಂಚಭೂತಗಳಿಗೆ ಕಾರಣಗಳಾದ ಸೂಕ್ಷ್ಮ ರೂಪಗಳು. ಈ ಪಂಚಭೂತಗಳೇ ನಮ್ಮ

ಕಣ್ಣಿಗೆ ಕಾಣುವ ಪ್ರಪಂಚಕ್ಕೆ ಮೂಲ ಉಪಾದಾನ ಕಾರಣಗಳು ಇದನ್ನು ಒಂದು ಪದ್ಯದಲ್ಲಿ ಸಂಗ್ರಹವಾಗಿ ಹೀಗೆ ವಿವರಿಸಿದೆ.

ಮಗನೆ ರಾಜಸವಾದ ಹಮ್ಮಿನ ।
ಲೊಗೆದವೀತನ್ಮಾತ್ರೆಗಳು ಕೇ ।
ಳ್ನಿಗಳಿದೀ ತನ್ಮಾತ್ರೆಗಳಿಸೀ ಭೂತ ಪಂಚಕವು ॥
ಬಗೆಯಲದರಿಂದಾದುವೀತೋ ।
ರ್ಪಗಣಿತ ಚರಾಚರಗಳೆಲ್ಲವು ।
ನಿಗಮವಿದ, ಪೃಥ್ವ್ಯಾದಿ ಭೂತಾತ್ಮಕವು ಜಗವೆಂದ ॥

ಅನು. ಅ. ೪. ಪ. ೧೩

ಈ ಪ್ರಪಂಚ ಸೃಷ್ಟಿ ಈ ಪದ್ಯದಲ್ಲಿ ಹೇಳಿರುವಂತೆ ಅಷ್ಟು ಸುಲಭವಾಗಿ ಆದುದಲ್ಲ. ಇದನ್ನರಿವುದು ಎಷ್ಟು ಜಟಿಲವಾದುದೆಂಬುದು ಮುಂದಿನ ಪದ್ಯ ಗಳಲ್ಲಿ ವಿವರಿಸಿದ ಪಂಚೀಕರಣ ವ್ಯವಸ್ಥೆಯಿಂದ ಗೋಚರವಾಗುವುದು. ಭೂತಾಂಶ ಗಳೆಲ್ಲವೂ ಪಂಚೀಕರಣದಿಂದ ಬೆರೆಯಲು ಸ್ವೇದಜ, ಉದ್ಭಿಜ, ಜರಾಯುಜ ಅಂಡಜವೆಂಬ ನಾಲ್ಕು ವಿಧ ಪ್ರಾಣಿಗಳ ಸೃಷ್ಟಿಯಾಯಿತು. ನಮ್ಮ ಕಣ್ಣಿಗೆ ಕಾಣುವ "ಪುರ ಗಗನಜಲ ವನಚರಂಗಳಾದ ಚರ ಪ್ರಾಣಿಗಳೂ, ತರುಲತಾಗುಲ್ಮಾದಿ ಗಳಾದ ಅಚರ ಪದಾರ್ಥಗಳೂ, ಪಂಚೀಕರಣ ವ್ಯವಸ್ಥೆಯಿಂದ ನಿರ್ಮಾಣವಾದುವು ಗಳು. ಜಲವು ಪೃಥ್ವೀ ತತ್ತ್ವದಿಂದ ಹತ್ತು ಗುಣ ಮಿಗಿಲು, ಅಗ್ನಿ ಜಲಕ್ಕೆ ಹತ್ತು ಗುಣ ಹೆಚ್ಚು, ವಾಯು ಅಗ್ನಿಗಿಂತ ಹತ್ತು ಗುಣ ಅಧಿಕ, ಆಕಾಶ ವಾಯುಗಿಂತ ಹತ್ತು ಗುಣ ಅಧಿಕ, ಹಮ್ಮು ಆಕಾಶಕ್ಕಿಂತ ಹತ್ತು ಗುಣ ಅಧಿಕ—ಹೀಗೆ ಸಪ್ತಾ ವರಣದಿಂದ ಆವೃತವಾದುದು ಪ್ರಪಂಚ. ಅದನ್ನೇ ಮೂರು ಲೋಕವೆಂದು ಹೇಳು ವುದು. ಪ್ರತಿಯೊಂದು ತತ್ತ್ವವೂ ಪಂಚಭೂತಗಳ ಐವ್ವೈದು ಅಂಶಗಳ ಸಂಮಿ ಳನದಿಂದಾಗುವುದನ್ನೇ ಮೇಲೆ ಪಂಚೀಕರಣವೆಂದು ವ್ಯವಹರಿಸಿದೆ. ಪಂಚಭೂತ ಗಳೆಲ್ಲ ಎರಡು ಸಮ ಭಾಗವಾಗಿ ಈ ಒಂದೊಂದು ಅರ್ಧ ಸಮ ಭಾಗದಲ್ಲಿ ಉಳಿದ ನಾಲ್ಕು ಅರ್ಧ ಸಮಭಾಗಗಳ ಒಂದೊಂದು ಸಮವಾದ ಚತುರ್ಥಾಂಶ ಬೆರೆತು ಆದುವುಗಳೇ ಇಪ್ಪತ್ತೈದು ಮುಖ್ಯ ತತ್ತ್ವಗಳು. ಈ ಇಪ್ಪತ್ತೈದು ತತ್ತ್ವಗಳಿಂದ ಕರಣಗಳ ಸೃಷ್ಟಿಯಾಯಿತು. ಜ್ಞಾತೃ ಮೊದಲಾದ ಐದು ಕರಣಗಳು ವ್ಯೋಮ ತತ್ತ್ವದಿಂದಾದುವುಗಳು. ಪಂಚ ಪ್ರಾಣಗಳು ವಾಯು ತತ್ತ್ವದಿಂದ ಆದುವುಗಳು ಹೀಗೆಯೇ ಐದು ಜ್ಞಾನೇಂದ್ರಿಯಗಳೂ, ಐದು ವಿಷಯಗಳೂ ಐದು ಕರ್ಮೇಂದ್ರಿ ಯಗಳೂ, ಅಗ್ನಿ, ಜಲ, ಭೂ ತತ್ತ್ವಗಳಿಂದ ಅನುಕ್ರಮವಾಗಿ ಸೃಷ್ಟವಾದುವುಗಳು. ಇವೆಲ್ಲವುಗಳು ಆತ್ಮನೆಂದೆನಿಸಿಕೊಳ್ಳಲಾರವು. ಇವುಗಳ ಕ್ರಿಯೆಗಳನ್ನು ನಡೆಸುವು ದಕ್ಕೆ ಅಧಿದೇವತಾದಿಗಳು (ಸಂ ೪. ಪ. ೧೭) ಅಂತರ್ಹಿತರಾಗಿ ಒಳಗಡೆ ನೆಲೆಸಿ ದ್ದಾರೆ. ಕರಣಗಳಿಗೆ, ಎಂದರೆ ಚಿತ್ತ, ಅಹಂಕಾರ, ಬುದ್ಧಿ ಮನಸ್ಸುಗಳಿಗೆ ಹರಿ,

ಹರ, ಬ್ರಹ್ಮ, ಚಂದ್ರರೂ, ಕಿವಿ, ಚರ್ಮ, ಕಣ್ಣು, ನಾಲಗೆ, ಘ್ರಾಣಗಳಿಗೆ ದಿಕ್ಕು, ವಾಯು, ಸೂರ್ಯ, ವರುಣ, ಅಶ್ವಿನೀ ದೇವತೆಗಳೂ ಮಾತು, ಕೈ, ಕಾಲು ಮೊದಲಾದುವುಗಳಿಗೆ ಅಗ್ನಿ, ಇಂದ್ರ, ವಿಷ್ಣುಗಳೂ ಅಧಿದೇವತೆಗಳು. ಹಾಗೆಯೇ ರುದ್ರ ಮೃತ್ಯುಗಳು ಬೇರೆ ಬೇರೆ ಅವಯವಗಳಿಗೆ ಅಧಿಷ್ಠಾನ ದೇವತೆಗಳು. (ಅ. ೪ ಪ ೨೮). ಪಂಚಭೂತಗಳಿಗೆ ಬ್ರಹ್ಮ. ಹರಿ, ರುದ್ರ, ಈಶ್ವರ ಮೊದಲಾದವರು ಅಧಿದೇವತೆಗಳು. ಇವರೆಲ್ಲರೂ ನಿಯಾಮಕರಾಗಿದ್ದು ಆಯಾ ಇಂದ್ರಿಯಗಳ ಕಾರ್ಯಕಲಾಪಗಳನ್ನು ನಡೆಸುವರು. ಅನುಭವಾಮೃತಕಾರನು ಈ ಅಧಿದೇವತೆಗಳನ್ನು "ಪ್ರತ್ಯಗಾತ್ಮಜ್ಯೋತಿ ತತ್ತ್ವದ ಮೊತ್ತದೊಳು ಪ್ರತಿಫಲಿಸಲವೆ ಅಧಿದೇವತೆಗಳೆಂದಾದುದಭಿಧಾನ" ಎಂದು ಹೇಳುತ್ತಾನೆ. ಮತ್ತು

"ಸದಮಲಾನಂದೈಕರಸವನು |
ಪೊದೆದು, ತಾನೆ ನಾಮರೂಪಂ |
ಬುದ ತಳೆದು, ಬ್ರಹ್ಮಾಂಡತಂಡದಿಹಬ್ಬಿಪಸರಿಸುತ ||
(ಅ. ೪. ಪ. ೩೩)

ಬುದುಬುದಾಕಾರದಲಿ ತೋರುವು
ದದು ಕಣಾಮಾಯಾವಿಲಾಸವು"

ಎಂದು ಇದೆಲ್ಲ ಮಾಯೆಯ ಕಾರ್ಯವೆಂದು ನಿರೂಪಿಸಿ "ವಿಧಿಹರಿಹರಾದಿಗಳಿವನು ಬಗೆಯುದೆಯೆ ಮೋಹಿಪರು'' ಎಂದು ಅಭಿಪ್ರಾಯ ಪಟ್ಟಿದ್ದಾನೆ

ಹರಿಕಥಾಮೃತಸಾರದಲ್ಲಿ ಸೃಷ್ಟಿಕ್ರಮ ಪಂಚತನ್ಮಾತ್ರಗಳು ತತ್ತ್ವದಧಿಷ್ಠಾನ ದೇವತೆಗಳು ಮುಂತಾದುವುಗಳನ್ನು ದ್ವೈತಸಿದ್ಧಾಂತರೀತಿಯಲ್ಲಿ ವಿವರಿಸಿದೆ. ಅಲ್ಲಿ ಪರಮಾತ್ಮನೇ ಎಲ್ಲಾ ಸೃಷ್ಟಿಗೆ ಕರ್ತೃವೆಂದೂ ಆತನ ಲೀಲೆಯಿಂದಲೇ ಪ್ರಕೃತಿ ಮುಂತಾದುವುಗಳು ಹುಟ್ಟಿ ಪ್ರಪಂಚನಿರ್ಮಾಣವಾಯಿತೆಂದೂ ನಿರೂಪಿತವಾಗಿದೆ. ಸೃಷ್ಟಿಯ ಆದಿಯಲ್ಲಿ ಮೂಲ ನಾರಾಯಣನು ಒಡೆದು ವಾಸುದೇವ, ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧ ಎಂಬ ನಾಲ್ಕು ರೂಪಗಳು ವ್ಯಕ್ತವಾದುವು. ಈ ನಾಲ್ಕು ರೂಪಗಳಿಗೂ ನಾಲ್ಕು ಶಕ್ತಿಪ್ರಾಯರಾದ ಮಾಯಾ, ಜಯಾ, ಕೃತಿ, ಶಾಂತಿಯೆಂಬ ನಾಲ್ಕುಜನ ಪತ್ನಿಯರು ಆವಿರ್ಭವಿಸಿದರು. ಮಾಯಾಪತಿಯಾದ ವಾಸುದೇವನು ಅನಂತಾವತಾರಗಳಿಗೆ ಬೀಜಭೂತನಾದನು. ಕೃತಿಪತಿಯಾದ ಪ್ರದ್ಯುಮ್ನನು ಸಕಲ ಚೇತನರಲ್ಲಿ ನಿವಾಸಿಯಾಗಿ ನಾನಾವಿಧಕರ್ಮಗಳನ್ನು ಮಾಡಿಸುನು. ಉಳಿದ ಎರಡು ಭಗವದ್ರೂಪಗಳಲ್ಲಿ ಒಂದು ಜೀವಾಂತರ್ಯಾಮಿಯಾದ ಅಂಶರೂಪ, ಮತ್ತೊಂದು ಬ್ರಹ್ಮಾಂಡದ ಅಂತರಂಗ ಬಹಿರಂಗದಲ್ಲಿ ವ್ಯಾಪ್ತರೂಪ. ಈ ರೂಪಗಳೇ ಪಂಚಪಂಚ ರೂಪಗಳಾಗಿ ಇಪ್ಪತ್ತೈದು ಕಾರ್ಯಗಳಿಗೆ ನಿಯಾಮಕವಾಗುವುವು. ಭೂಮ್ಯಾದಿ ಪಂಚಭೂತಗಳು ಈ ಶರೀರನಿರ್ಮಾಣಕ್ಕೆ ಕಾರಣವಾಗಿವೆ.

ಭೂಸಲಿಲಶಿಖಿ ಪವನ ಭೂತಾ |
ಕಾಶದೊಳಗೈದೈದುತನ್ಮಾ |
ತ್ರಾಸಹಿತ ವೊಂದಧಿಕಪಂಚಾಶದ್ವರಣವೇದ್ಯ ||

ಈ ಶರೀರದಿ ವ್ಯಾಪಿಸಿದ್ದು (ಸಂ. ೫. ಪದ್ಯ ೧.) ಪರಮಾತ್ಮನು ನಿರಂತರದಲ್ಲಿ ಸುಖಾಸುಖಗಳನ್ನು ಕೊಡುವನು. ಶರೀರಾಭಿಮಾನಿಗಳನ್ನು ಎಂಟನೆಯ ಸಂಧಿಯಲ್ಲಿ ಅವರವರು ಮಾಡುವ ಕಾರ್ಯಗಳೊಡನೆ ಬಣ್ಣಿಸಿದೆ. ಅಲ್ಲಿಯ ಮೂರು ಪದ್ಯಗಳನ್ನು ಇಲ್ಲಿ ಕೊಡಲಾಗಿದೆ.

ಚಿತ್ತಜೇಂದ್ರರು ಮನದೊಳಿಪ್ಪರು |
ಕೃತ್ತಿವಾಸನಹಂಕಾರದೊಳು |
ಚಿತ್ತಚೇತನಮಾನಿಗಳು ವಿಹಗೇಂದ್ರ ಫಣಿಪರೊಳು ||
ನಿತ್ಯದಲಿ ನೆಲೆಗೊಂಡು ಹತ್ತೊಂ |
ಬತ್ತು ಮೊಗ ತೈಜಸನು ಸ್ವಪ್ನಾ |
ವಸ್ಥೆಯೈದಿಸಿ ಜೀವರನು ಪ್ರವಿವಿಕ್ತಭುಕುವೆನಿಸ ||
ಜ್ಞಾನಮಯತೈಜಸನು ಹೃದಯ |
ಸ್ಥಾನವೈದಿಸಿ ಪ್ರಾಜ್ಞನೆಂಬಭಿ |
ಧಾನದಿಂ ಕರೆಸುತ್ತಚಿತ್ಸುಖವ್ಯಕ್ತಿಯನೆ ಕೊಡುತ ||
ಆನತೇಷ್ಟಪ್ರದನು ಅನುಸಂ |
ಧಾನವೀಯದೆ ಸುಸ್ತಿಯೈದಿಸಿ |
ತಾನೆ ಪುನರಪಿ ಸ್ವಪ್ನಜಾಗೃತಿಯೀವ ಚೇತನಕೆ ||
ನಾಲಗೆಯೊಳಿಹವರುಣ ಮತ್ಸ್ಯಣು |
ನಾಲಗೆಯೊಳು ಉಪೇಂದ್ರ ಇಂದ್ರರು |
ತಾಲು ಪರ್ಜನ್ಯಾಖ್ಯ ಸೂರ್ಯನು ಅರ್ಧಗರ್ಭನಿಹ ||
ಆಲಿಯೊಳುವಾಮನ ಸುಭಾಮುನ |
ಫಾಲದೊಳು ಶಿವ ಕೇಶವನು ಸುಕ |
ಪೋಲದೊಳಗೆ ರತೀಶಕಾಮನು ಅಲ್ಲಿ ಪ್ರದ್ಯುಮ್ನ ||

ಪದ್ಯ ೧೩-೧೪-೧೫

ಹೀಗೆಯೇ ಎಲ್ಲಾ ಅವಯವಗಳ ದೇವತೆಗಳನ್ನು ನಿರವಿಸಿ ಈ ಪದ್ಯದಿಂದ ಉಪಸಂಹಾರ ಮಾಡಲಾಗಿದೆ.

ಅಮಿತ ಮಹಿಮನಪಾರ ಗುಣಗಳ |
ಸಮಿತ ವರ್ಣಾತ್ಮಕ ಶ್ರುತಿ ಸ್ಮೃತಿ |
ಗಮಿಸಲಾಪವೆ ? ತದಭಿಮಾನಿಗಳೆನಿಸಿಕೊಂಬ ||

ಕಮಲ ಸಂಭವ ಸುರೇಂದ್ರಾ |
ದ್ಯಮರರನುದಿನ ತಿಳಿಯಲರಿಯರು |
ಸ್ವಮಹಿಮೆಗಳಾದ್ಯಂತಮಧ್ಯಗಳರಿವ ಸರ್ವಜ್ಞ ||

ಸಂಧಿ ೮ ಪದ್ಯ ೩೦

ಅನುಭವಾಮೃತದ ಪದ್ಯಗಳಿಗೂ, ಹರಿಕಥಾಮೃತಸಾರದ ಪದ್ಯಗಳಿಗೂ ಇರುವ ವಿಷಯದ ಹೋಲಿಕೆಯನ್ನೂ, ವ್ಯತ್ಯಾಸವನ್ನೂ ಮೇಲೆ ಉದಾಹೃತವಾದ ಪದ್ಯಗಳಿಂದ ಚೆನ್ನಾಗಿ ತಿಳಿದುಕೊಳ್ಳಬಹುದಾಗಿದೆ. ಮಾಯೆಯ ವಿಕಾರವೇ ಪ್ರಪಂಚ ವೆಂದು ಒಂದೂ, ಪ್ರಪಂಚವೆಲ್ಲವೂ ಪರಮಾತ್ಮಸೃಷ್ಟವೂ, ತದಧೀನವೂ ಎಂದು ಮತ್ತೊಂದೂ ನಿರೂಪಿಸುತ್ತ ಎರಡೂ ಒಂದಕ್ಕೊಂದು ವಿರೋಧವಾಗಿವೆ.

ಇನ್ನು ಪರಮಾತ್ಮನ ಸ್ವರೂಪವನ್ನೂ ವ್ಯಾಪ್ತಿಯನ್ನೂ ಎರಡು ಗ್ರಂಥಗಳಲ್ಲಿ ನೋಡಬಹುದು. ''ಪರಬ್ರಹ್ಮ''ವೆಂಬುದನ್ನು ಅನುಭವಾಮೃತದಲ್ಲಿ ಸುಮಾರು ೨೬ ಪದ್ಯಗಳಲ್ಲಿ ವಿವರಿಸಿದೆ. (ಅಧ್ಯಾಯ ೪. ಪದ್ಯ ೪೫–೭೦) ಗ್ರಾಮ, ದೇಶ, ದ್ವೀಪ ವಲ್ಲ ಆಕಾಶವು ಹೇಗೆ ಒಂದೇ ರೀತಿಯಾಗಿ ಇರುತ್ತದೆಯೋ ಹಾಗೆಯೇ ಪರಬ್ರಹ್ಮವು ಮನುಷ್ಯ, ಪಶು, ಪಕ್ಷಿ, ತರು, ಲತೆ, ದೇವತೆಗಳು, ದೈತ್ಯರುಗಳು, ಭೂಮಿ ಮೊದಲಾದ ಭೂತ ಸರ್ವತ್ರದಲ್ಲಿ ಮಣಿಗಳೊಳಗಿರುವ ಸೂತ್ರದಂತೆ ಸಮನಾಗಿ ತೋರುತ್ತದೆ. ಅಷ್ಟೇ ಅಲ್ಲ. ತರುಲತೆಗಳಲ್ಲಿರುವ ರಸವೂ, ಜೀವರುಗಳ ಚೇತನವೂ, ಗಾಳಿಯ ಬಲವೂ, ನೀರಿನ ಸ್ವಾದವೂ, ಪೃಥ್ವಿಯ ಗಂಧವೂ, ಸೂರ್ಯ, ಅಗ್ನಿ, ಚಂದ್ರರ ತೇಜಸ್ಸು, ಆಕಾಶದ ಶಬ್ದವೂ ಬ್ರಹ್ಮವಾಗಿದೆ. ಇದರಂತೆಯೇ ಬಿಂಬ ಪ್ರತಿಬಿಂಬ ಗಳು ಬರಿಯ ಕಲ್ಪಿತಗಳು. ಜೀವ ಈಶರೂ ಸಹ ಕಲ್ಪಿತರು. ಕೊಡದ ಒಳಗಿರುವ ಬಯಲು, ಮನೆಯಲ್ಲಿಯ ಬಯಲು, ಕೊಡ ಮನೆಗಳು ನಾಶವಾದರೆ ಎಲ್ಲಾ ಬಯ ಲಾಗುವುದಷ್ಟೆ; ಅದೇ ಪರಬ್ರಹ್ಮ. ಈ ಪರಬ್ರಹ್ಮವು ಅಣುವಿನಲ್ಲಿ ಅಣುವಾಗಿ, ತನು ವಿನಲ್ಲಿ ತನುವಾಗಿ, ಕಾಣಿಸುವುದು. ಪ್ರಾಣಿಗಳಲ್ಲಿ ಹೊರಗೆ ಒಳಗೆ ಇದ್ದು ಜಗ ತ್ಪ್ರಾಣವಾಗಿ ಚೈತನ್ಯ ರೂಪದಲ್ಲಿ ಪ್ರಾಣವೆಂದೆನಿಸಿಕೊಂಡು ನಿರ್ಲಿಪ್ತವಾಗಿರುವುದು. ಸರ್ವ ವ್ಯಾಪಿಯಾಗಿರುವುದು ಆ ಪರಬ್ರಹ್ಮ. ಒಂದೇ ಅರಿವು ಸುಳ್ಳು ಹೆಸರು ರೂಪ ಗಳಿಂದ ನಾನಾ ಭೇದವಾಗಿ ಜೀವೇಶ್ವರ ಎಂದೆನಿಸಿವೆ. ಸಮಷ್ಟಿ ವ್ಯಷ್ಟಿಯಂತೆ ತೋರುತ್ತದೆ. ಆದ್ದರಿಂದಲೇ ಮಾವ, ಮೈದುನ, ತಂದೆಯೆನಿಸಿಕೊಳ್ಳುವುದು. ಇದೆಲ್ಲ ಅದ್ವಯ. ಇದೇ ಪರಬ್ರಹ್ಮ. ಸೂರ್ಯ ಚಂದ್ರರು, ಹರಿಹರರು ಯಾರ ಪ್ರಕಾಶವನ್ನು ಧರಿಸಿ ಬೆಳಗುವರೋ ಅವನೇ ಪರಬ್ರಹ್ಮ (ಪದ್ಯ ೫೫). ಅವನು ಅಪ್ರತಿಮ ಪ್ರಕಾಶನು. ಈ ಪ್ರಪಂಚವಾದರೋ ಮೊದಲು ತೋರದು, ತೋರುತ್ತ ಅಡಗಿದ ಬಳಿಕ ಮತ್ತೆ ತೋರದು, ಈಗ ಮಾತ್ರ ತೋರುವುದು. ತೋರದೆ, ಅಡ ಗದೆ, ಸಹಜವಾಗಿ ತೋರುತ್ತಿರುವ ವಸ್ತುವೇ ಪರಬ್ರಹ್ಮ (ಪದ್ಯ ೭೦). ಬಿಸಿಲು

ತೊರೆಯ ಜಲದ ಅಂಶವು ಕಳೆದು ಮರೀಚಿಕಾಂಶವು ನಿಜವಾಗಿರುವಂತೆ ನಾಮ ರೂಪಿನ ಮಾಯಾಂಶವಳಿದು ಶೋಭಿಸುವ ಸತ್, ಚಿತ್ ಸುಖವೇ ಪರಬ್ರಹ್ಮ. (೬೧). ನೇಣು ಸರ್ಪವಾಗಿ ತೋರುವುದು, ತಿಳಿದು ನೋಡಿದರೆ ನೇಣಾಗಿ ಸತ್ಯ ರೂಪದಲ್ಲಿ ಕಾಣುವುದು. ಹಾಗೆಯೇ ಭ್ರಮೆ ಹೋಗಲು ತಾನೇ ತಾನಾಗಿರುವ ಸಹಜವು ಪರಬ್ರಹ್ಮ. ಬ್ರಹ್ಮವು ಪ್ರಕೃತಿಯೊಡನೆ ಬೆರೆತಿದ್ದರೂ ಪ್ರಕೃತಿಗಾಗುವ ದುಃಖವು ಅದಕ್ಕಿಲ್ಲ. ಏಕೆಂದರೆ ಅದು ಪ್ರಕೃತಿ ಬದ್ಧವಲ್ಲ, ನಿರ್ಲಿಪ್ತವಾಗಿರುವುದು. (೬೫). ಅತ್ತಿಯ ಮರದ ತುಂಬ ಸಂದು ಬಿಡದೆ ಫಲಗಳು ತುಂಬಿರುವಂತೆ ಮೂಲ ಪ್ರಕೃತಿಯಲ್ಲಿ ಬ್ರಹ್ಮಾಂಡ ತಂಡಗಳು ವ್ಯಾಪಿಸಿವೆ. (೬೬). ಬ್ರಹ್ಮ ಮೊದಲಾಗಿ ಇರುವೆ ಕಡೆಯಾದ ಪ್ರಾಣಿಗಳ ಬುದ್ಧಿಗೆ ಬೆರೆಯದ ತತ್ ಸಾಕ್ಷಿಯಾಗಿ ಬೆಳಗುವುದು ಬ್ರಹ್ಮ. ಎಲ್ಲಾ ಕರಣಗಳು ಆವನ ಸನ್ನಿಧಾನದಿಂದ ಪರಿಪರಿಯ ಕಾರ್ಯಗಳನ್ನು ಮಾಡುವುವೋ ಅವನೆ ಪರಬ್ರಹ್ಮ (೬೭). ಯೋಗಿಗಳು ಹೃದಯದಲ್ಲಿ ಕಂಡು ಹೇಳ ದವರಾಗಿರುವರು. ಅದೇ ಚಿದ್ಘನ ಪರಬ್ರಹ್ಮ (೬೮). ದೇಶ ಕಾಲವನ್ನು ಮೀರಿ. ಜನನ ದುಃಖವನ್ನು ಉಳಿದು, ಆಕಾಶದಂತೆ ಹೊಳೆಯುತ್ತ, ನಿರಾವರಣವಾಗಿ ಕುಂದದ ದಿವ್ಯ ತೇಜೋರಾಶಿಯುಂದ ನಿರವಧಿಯಾಗಿರುವುದೇ ಪರಬ್ರಹ್ಮ. (೬೯). ಇಷ್ಟು ವಿಶೇಷಣಗಳಿಂದ ಕೂಡಿದ ಪರಬ್ರಹ್ಮವು, "ನಿರುಪಮ, ನಿರಾಲಂಬ, ನಿರ್ಗುಣ, ನಿರವಧಿ. ನಿರಾತಂಕ. ನಿರ್ಮಲ, ನಿರತಿಶಯ, ನಿಶ್ಚಲ. ನಿರಂಜನ, ನಿರ್ವಿಕಾರ, ನಿಜ, ಪರತರ, ಪರಾನಂದ, ಪಾವನ, ಪರಮಪದ, ಪರಿಪೂರ್ಣ, ಪರ, ಚಿತ್ಪರ, ಸದದ್ವಯ"ವಾಗಿದೆ

ಇದರೊಡನೆ ಹರಿಕಥಾ ಮೃತಸಾರದಲ್ಲಿ ಉಕ್ತವಾದ ಪರಮಾತ್ಮ ಸ್ವರೂಪ ವನ್ನೂ, ವ್ಯಾಪ್ತಿಯನ್ನೂ ಹೋಲಿಸಬಹುದು ಮಣಿಗಳೊಳಗಿರುವ ಸೂತ್ರದ ಹಾಗೆ ಸುಖಪೂರ್ಣನಾದ ಪರಮಾತ್ಮನು ಚೇತನಾಚೇತನ ಜಗತ್ತಿನೊಳಗೆ ಅನುದಿನದಲ್ಲಿ ಆಡುವನು. (ಸಂಧಿ ೭. ಪ. ೨೮). ಚಿದಾನಂದೈಕದೇಹನು, ಅಣು ಮಹದ್ಗತನು. (ಸಂ. ೧೨ ಪ. ೭). ಜಲಟ, ಕುಕ್ಕುಟ, ಖೇಟ. ಜೀವರ ಕಳೇವರಗಳಲ್ಲಿದ್ದು ಕಾಣಿಸಿ ಕೊಳ್ಳದೆ ತತ್ತದ್ರೂಪ ನಾಮಗಳಿಂದ ಕರೆಸುವನು, ಅವರಿಂದ ವಿವಿಧ ಕರ್ಮಗಳನ್ನು ಮಾಡಿ ಮಾಡಿಸಿ ಫಲಗಳುಣ್ಣದೆ ಸಂಚರಿಸುವನು. ನಿತ್ಯ ಸುಖ ಪೂರ್ಣನು. (ಸ. ೧೨ ಪ. ೧೭). ಲೋಕದಲ್ಲಿ ಶುನಿ ಸೂಕರಾದಿಗಳಲ್ಲಿ ನೆಲೆಸಿದ್ದು ಏಕಮೇವಾ ದ್ವಿತೀಯ ಬಹು ರೂಪಾಹ್ವಯಗಳಿಂದ ಕರೆಸುವನು. (ಸ. ೧೨ ಪ. ೨೦). ಲವಣ ಮಿಶ್ರಿತ ಜಲವು ಲವಣದೋಪಾದಿಯಲಿ ತೋರುವುದು, ವಿವರ ಮಾಡಲು ಶಕ್ಯ ವಾಗುವುದೆ? ಸ್ವವಶ. ವ್ಯಾಪಿಯೆನಿಸಿಕೊಂಡು ಚರಾಚರದೊಳಗೆ ತುಂಬಿರುವನು. (ಸ. ೧೨ ಪ ೨೬). ಸೂರ್ಯನು ಉದಯವಾದೊಡನೆಯೇ ವೃಕ್ಷಗಳ ನೆಳಲು ಪಸರಿ ಸುವುದು, ಅಸ್ತವಾಗಲು ಲೀನವಾಗುವುದು. ಹಾಗೆಯೇ ಪರಮಾತ್ಮನು ಮೂರು ಲೋಕಗಳನ್ನು ತನ್ನ ಬಸಿರಲ್ಲಿ ಇಂಬಿಟ್ಟು ಕರ್ಮವನ್ನು ಮಾಡಿಸುವನು.

(ಸ. ೧೨ ಪ. ೩೨). ದೇಶ ಭೇದಗಳಲ್ಲಿರುವ ಆಕಾಶದಂತೆ ಚೇತನರಾಶಿಗಳಲ್ಲಿ ಅವ್ಯವಧಾನವಾಗಿ ನೆಲೆಸಿರುವನು. (ಪ. ೪೦). ಸಕಲದೋಷವಿದೂರನೂ ಶಶಿ ಪಾವಕ ಸಹಸ್ರಾನಂತ ಸೂರ್ಯ ಪ್ರಕರ ಸನ್ನಿಭಗಾತ್ರನೂ, ಬ್ರಹ್ಮಾಂಡದೊಳಗೆ ಎಲ್ಲರ ಸಖನಾಗಿರುವನು. (೩೯). ಭೋಗ್ಯ ಭೋಕ್ತೃಗಳೊಳಗೆ ಹರಿ ಭೋಗ್ಯ ಭೋಕ್ತನು ಎನಿಸಿ ಯೋಗ್ಯಾಯೋಗ್ಯ ರಸಗಳನ್ನು ದೇವದಾನವಗಣಕೆ ಉಣಿಸುವನು. (ಸ. ೧೨ ಪ ೨೨). ಸಮುದ್ರದಲ್ಲಿ ಜಲಚರ ಪ್ರಾಣಿಗಳು ಸ್ವೇಚ್ಛೆಯಿಂದ ತಂತಮ್ಮ ಸ್ಥಳಗಳಲ್ಲಿ ಸಂಚರಿಸುವಂತೆ ನಳಿನ ನಾಭನಲ್ಲಿ ಸಕಲ ಜೀವರ ಗಣವು ವರ್ತಿಸುವುದು. (ಸ. ೧೧ ಪದ್ಯ ೨೧). ಕಲುಷವಿಲ್ಲದ ಕನ್ನಡಿಯಲ್ಲಿ ಎಲ್ಲ ಪದಾರ್ಥಗಳು ಪ್ರತಿಫಲಿಸಿ ಕಂಗೊಳಿಸುವ ಹಾಗೆ ಸಜ್ಜನರಲ್ಲಿ ನಿಶ್ಚಲನೂ, ನಿರ್ವಿಕಾರನೂ, ನಿರಾಶ್ರಯಾನಂತನೂ, ಬಹು ರೂಪದಲ್ಲಿ ಹೊಳೆಯುವನು. (ಸಂ. ೭ ಪದ್ಯ ೪). ಕನ್ನಡಿಯನ್ನು ಕೈಯಲ್ಲಿ ಹಿಡಿದು ನೋಡಲು ತನ್ನ ಇರುವು ಸನ್ನಾಪನನ್ಯದಿಂದ ತೋರುವುದು. ಅನಿರುದ್ಧನಿಗೆ (ಪರಮಾತ್ಮನಿಗೆ) ಈ ಜಗತ್ತು ಪ್ರತಿಬಿಂಬವಾಗಿ ಭಿನ್ನ ಭಿನ್ನವಾಗಿ ತೋರುವುದು. ಅವನೇ ಬಿಂಬ ರೂಪನು. (ಸ. ೫ ಪ. ೩೪). ಅಣು ಮಹತ್ತಿನೊಳಿರುವನು, ಘನವನ್ನು ಪರನು ಅಣುವಿನಲ್ಲಿ ಅಡಗಿಸುವನು ಸೂಕ್ಷ್ಮವನ್ನು ಮುಳುಗಿಸುವನು; ಸ್ಥೂಲವನ್ನು ತೇಲಿಸುವನು. ಇದು ಅವನ ಮಾಯೆ (ಸ. ೩ ಪ ೧೯). ಮೇಘಗಳು ಮಳೆಯನ್ನು ಕರೆಯಲು ಬೇರೆ ಬೇರೆ ವೃಕ್ಷಗಳ ಫಲಗಳ ರಸವು ಬೇರೆ ಬೇರೆಯಾಗಿರುವಂತೆ ಬಹು ವಿಧ ಜೀವರಲ್ಲಿದ್ದು ಅವರವರ ಗುಣ ಕರ್ಮಗಳ ಅನುಸಾರ ಫಲಗಳನುಣಿಸುವನು. (ಸ. ೩ ಪ. ೨೩). ಸೂರ್ಯನ ಕಿರಣಗಳು ಮಣಿಗಳನ್ನು ಪ್ರವೇಶಿಸಿ ಅವುಗಳ ವರ್ಣವಿಕಾರವಾಗದಂತೆ ಕಣ್ಣಿಗೆ ತೋರುವ ಹಾಗೆ ಮಾರಮಣನು ಮೂರು ಲೋಕಗಳಲ್ಲಿದ್ದು, ಮೂರು ವಿಧಜೀವರಲ್ಲಿ ವಿಹಾರ ಮಾಡುವನು. (ಸಂ. ೩. ಪ. ೨೪) ಕಾದ ಕಬ್ಬಿಣವನ್ನು ಹಿಡಿದು ಬಡಿಯಲು ವೇದನೆ ಕಬ್ಬಿಣಕ್ಕಲ್ಲದ ಅಗ್ನಿಗೆ ಆಗುವುದೆ? ಆದಿ ದೇವನು ಒಳಹೊರಗಿದ್ದು ಎಲ್ಲ ಜೀವರನ್ನು ಕಾದುಕೊಂಡಿಹನು. ಅವನಿಗೆ ದುಃಖಾದಿಗಳ ಸಂಬಂಧವೆಲ್ಲಿ? (ಸ. ೩ ಪ. ೨೭). ಮಕ್ಕಳು ಮಳಲ ಮನೆಗಳನ್ನು ಮಾಡಿ, ಕೆಲವು ಕಾಲ ಆಡಿ, ಆ ಮೇಲೆ ಸಂತೋಷದಿಂದ ತುಳಿದು ಕೆಡಿಸುವಂತೆ, ಲಕ್ಷ್ಮೀರಮಣನು ಲೋಕಗಳನ್ನು ಹಲವು ಬಗೆಯಲ್ಲಿ ನಿರ್ಮಿಸುವನು, ಸಲಹುವನು, ತಾನು ನಿಶ್ಚಲನು. ಅವನು ಎಲರುಣಿಯ ಹಾಗೆ ನುಂಗುತ್ತಾನೆ. ಅವನಿಗೆ ಸುಖದುಃಖಗಳು ಎಲ್ಲಿಯವು? (ಸ. ೩ ಪ. ೨೮). ಗಿಡಗಳ ಅಡಿಯಲ್ಲಿ ನೀರು ಹಾಕಿದರೆ ಕೊಂಬೆಗಳುಬ್ಬಿ ಅವು ಸೊಗಸಾದ ಹೂ ಕಾಯಿಗಳನ್ನು ಕೊಡುವಂತೆ ಸರ್ವೇಶ್ವರನು ಜನರ ಆರಾಧನೆಯುನ್ನು ಕೊಂಡು ಬ್ರಹ್ಮ ಮೊದಲಾದವರ ಹೆಸರುಗಳಲ್ಲಿ ಫಲಗಳನ್ನುಕೊಡುವನು. (ಸ. ೩ ಪ. ೧೩). ಹುಲ್ಲಿನ ಮನೆಯಲ್ಲಿ ಹೊಗೆ ತುಂಬಿ ಛಿದ್ರದಲ್ಲಿ ಹೊರಟು ಬೆಂಕಿಯ ಇರುವನ್ನು ತೋರಿ ತೋರದೆ ಇರುವಂತೆ ಪರಮಾತ್ಮನು ಅನೇಕ ಜೀವರ ಒಳಹೊರಗಿದ್ದು ಕಾಣಿಸದೆ

ಅವರಂತೆ ಎಲ್ಲ ಕರ್ಮಗಳನ್ನು ಮಾಡುವನು (ಸ ೩ ಪದ್ಯ ೧೨). ಗಂಧ. ರಸ, ರೂಪ. ಸ್ಪರುಶ, ಶಬ್ದ ಇವೊಂದು ತಾನಲ್ಲ; ಆದರೆ ಅದರದರ ಹೆಸರಿಂದೆ ಕರೆಸುವನು. ದೀಪ ದಿಂದ ದೀಪಗಳು ಹೊರಟು ಆಪಣಾಲಯುಗತವಾದ ಕತ್ತಲೆಯನ್ನು ಕಳೆದು, ಅಲ್ಲಿಯ ಪದಾರ್ಥಗಳನ್ನು ತೋರುವಂತೆ ಪರಮಾತ್ಮನು ಬಹುರೂಪ ನಾಮುಗಳಿಂದ ಎಲ್ಲ ಕಡೆಗಳಲ್ಲಿ ವ್ಯಾಪಿಸಿದ್ದು ಮಹಿಮೆಯನ್ನು ತೋರುವನು. (ಸಂ. ೧೪ ಪ. ೨೬). ಒಂದು ರೂಪದಲ್ಲಿ, ಒಂದು ಅವಯುವದಲ್ಲಿ, ಒಂದು ರೋಮುದಲ್ಲಿ, ಒಂದು ದೇಶದಲ್ಲಿ ಅನಂತಾನಂತ ಕೋಟಿ ಬ್ರಹ್ಮಾಂಡಗಳು ಹೊಂದಿಕೊಂಡಿರುಪುವು. ಅಣುಮಹ ತ್ತೆನಿಪ ಘಟ, ಮಂದಿರದಿ ಸರ್ವತ್ರ ತುಂಬಿರುವ ಬಾಂದಳದಂತೆ ಇರುತ್ತಿರುವನು. (ಸ. ೩ ಪ. ೨೬). ಸಮುದ್ರದಲ್ಲಿ ಮಕರಾದಿ ಜೀವರು ಇರುಳು, ಹಗಲು ಏಕಪ್ರಕಾರ ವಾಗಿ ಚರಿಸುತ್ತ ಸಂತೋಷದಿಂದಿರುವ ಹಾಗೆ ಈ ಪ್ರಪಂಚವೆಲ್ಲ ಜಗದೀಶ್ವರನ ಉದರದಲ್ಲಿರುವುದು. ಇದೇ ಪ್ರತಿಬಿಂಬವೆಂದು ಕರೆಸುವುದು. (೧೫—೨೪). ಈ ಸಮಸ್ತ ಜಗತ್ತು ಈಶಾವಾಸ್ಯವೆನಿಸುವುದು. ಇದು ಕಾರ್ಯರೂಪ. ಕಾರ್ಯ ರೂಪವು ನಾಶವಾದರೂ ಕಾರಣ ಪ್ರಕೃತಿ ನಿತ್ಯ (ಸಂ. ೨೪ ಪದ್ಯ ೧೩). ಪರಮಾತ್ಮನು ಸರ್ವದೇವೋತ್ತಮನು, ಸರ್ವಗನು, ಸರ್ವ ಗುಣ ಸಂಪೂರ್ಣನು, ಸರ್ವದನು. ಸರ್ವತಂತ್ರ ಸ್ವತಂತ್ರನು, ಸರ್ವಾಧಾರನು, ಸರ್ವಾತ್ಮನು, ಸರ್ವತೋಮುಖನು, ಸರ್ವನಾಮಕನು, ಸರ್ವ ಜನ ಸಂಪೂಜ್ಯನು, ಶಾಶ್ವತನು, ಸರ್ವಕಾಮದನು, ಸರ್ವಸಾಕ್ಷಿಗನು, ಸರ್ವಜಿತ್ತು, ಸರ್ವನು. (ಸಂ. ೨೫ ಪದ್ಯ ೧೫).

ಪರಮಾತ್ಮನ ವಿಶ್ವವ್ಯಾಪಕತ್ವವು ಈ ಎರಡು ಗ್ರಂಥಗಳಲ್ಲಿ ಒಂದೇ ವಿಧವಾದ ಉದಾಹರಣೆಗಳಿಂದ ಹೇಳಿರುವುದನ್ನು ಇಲ್ಲಿ ಉದ್ಧರಿಸಬಹುದು.

ಗ್ರಾಮದೇಶ ದ್ವೀಪದಲ್ಲಿಹ |
ವ್ಯೋಮವೊಂದೇ ಪರಿಯಲಿರ್ಪಂ |
ಕೀ ಮನುಜ ಪಶುಪಕ್ಷಿತರುಲತೆದೇವದೈತ್ಯರಲಿ ||
ಭೂಮಿಮೊದಲಾಗಿರ್ದಭೂತ |
ಸ್ತೋಮದಲಿ ಮಣಿಗಣದ ಸೂತ್ರದ |
ನೇಮದಲಿ ಸಮನಾಗಿ ತೋರುವುದೇ ಪರಬ್ರಹ್ಮ ||

ಅನು. ಅಧ್ಯಾಯ ೪. ಪ ೮೫

ದೇಶಭೇದಗಳಲ್ಲಿ ಇಪ್ಪಾ |
ಕಾಶದೋಪಾದಿಯಲಿ ಚೇತನ |
ರಾಶಿಯೊಳು ನೆಲಸಿಪ್ಪನವ್ಯವಧಾನದಲಿ ನಿರುತ ||

(ಹರಿ ಸಂ ೧೨ ಪದ್ಯ ೪೦)

ಜಲಟ ಕುಕ್ಕುಟ ಖೇಟ ಜೀವರ |
ಕಳೆವರಗಳೊಳಗಿದ್ದು ಕಾಣಿಸಿ |
ಕೊಳದೆ ತತ್ತದ್ರೂಪನಾಮಗಳಿಂದ ಕರೆಸುತಲಿ ||

(ಹರಿ ಸಂ ೧೨ ಪದ್ಯ ೧೭)

ಮಣಿಗಳೊಳಗಿಹ ಸೂತ್ರದಂದದಿ |
ಪ್ರಣವಪಾದ್ಯನು ಚೇತನಾಚೇ |
ತನ ಜಗತ್ತಿನೊಳನುದಿನದಲಾಡುವನು ಸುಖಪೂರ್ಣ ||

(ಹರಿ ಸಂ ೭ ಪದ್ಯ ೨೮)

ಇದೇ ಭಾವವು ಸಂಧಿ ೧೨ ಪದ್ಯ ೭ ರಲ್ಲಿ ಬಂದಿದೆ.

ಭಗವಂತನ ವ್ಯಾಪ್ತಿಯನ್ನೂ, ಸಕಲ ಜಗತ್ತಿಗೂ ಅವನಿಗೂ ಇರುವ ಸಂಬಂಧ ವನ್ನೂ, ಇವರಿಬ್ಬರು ಕವಿಗಳು ಸುಮಾರಾಗಿ ಒಂದೇ ವಿಧವಾದ ಮಾತುಗಳಲ್ಲಿ ವರ್ಣಿಸಿರುವರೆಂಬುದು ಈ ದೀರ್ಘವಾದ ವಿಶೇಷಣಗಳಿಂದ ತೋರಿಬಂದರೂ ಅವರ ವರ ಪ್ರತಿಪಾದನೆಯ ಧ್ಯೇಯವು ಸಂಪೂರ್ಣವಾಗಿ ಬೇರೆಬೇರೆಯಾಗಿದೆಯೆಂಬುದು ಗೊತ್ತಾಗದಿರದು. ಮೊದಲನೆಯದರಲ್ಲಿ ಪರಬ್ರಹ್ಮವು, ಎಲ್ಲದರಲ್ಲಿ ಮಾಯೆಯಿಂದ ಬೆರೆತು, ಸ್ವತಃ ಸುಖರೂಪಿಯಾದುದರಿಂದ ನಿರ್ಲಿಪ್ತವಾಗಿದೆಯೆಂದು ಹೇಳಿದೆ. ಎರಡನೆಯದರಲ್ಲಿ ಪರಮಾತ್ಮನು ತಾನೇ ಒಳಗೂ ಹೊರಗೂ ವ್ಯಾಪಿಸಿದ್ದು ಜೀವರು ಗಳ ಯೋಗ್ಯತೆಗೆ ಅನುಸಾರವಾಗಿ ಕರ್ಮಗಳನ್ನು ಮಾಡಿ ಮಾಡಿಸಿ ಕಾದ ಕಬ್ಬಿಣಕ್ಕೆ ಏಟುಬಿದ್ದರೆ ಅದನ್ನು ಕಾಯಿಸಿದ ಬೆಂಕಿಗೆ ವ್ಯಥೆಯಾಗದಂತೆ ನಿರ್ಲಿಪ್ತನಾಗಿರುವ ನೆಂಬ ಭಾವವನ್ನು ಹೇಳಿದೆ. ಜಗತ್ತು ಮಾಯಾಕಲ್ಪಿತವಾಗಿ ಮಾಯೆ ಅಳಿವುದ ರಿಂದ ಮನೆಕೊಡಗಳ ನಾಶದಿಂದ ಒಳಗಿನ ಬಯಲು, ಹೊರಗಿನ ಬಯಲು ಒಂದಾ ಗುವಂತೆ ಎಲ್ಲಾ ಒಂದಾಗುವುದೆಂದು ಪೂರ್ವಗ್ರಂಥದಲ್ಲಿ ಹೇಳಿದುದನ್ನು, ಸೃಷ್ಟಿ ಕಾರ್ಯರೂಪವಾದದ್ದು, ಕಣ್ಣಿಗೆ ಕಾಣದಂತಾದರೂ ಮೂಲಕಾರಣವಾದ ಪ್ರಕೃತಿ ಯಲ್ಲಿ ಅಡಕವಾಗಿ ಶಾಶ್ವತವಾಗಿರುತ್ತದೆಂದು ಎರಡನೆಯ ಗ್ರಂಥದಲ್ಲಿ ನಿರೂಪಿಸಿದೆ. ಹೀಗೆಯೇ ಪರಮಾತ್ಮನ ಗುಣಗಳು ಬೇರೆಬೇರೆಯಾಗಿ ವರ್ಣಿತವಾಗಿವೆ. ಒಬ್ಬನು ನಿರಾಕಾರನು, ನಿರ್ವಿಕಾರನು, ನಿರ್ಗುಣನು ಆಗಿದ್ದರೆ ಮತ್ತೊಬ್ಬನು, ಸಾಕಾರನು ಬೇಕಾದರೂಪಗಳನ್ನು ತಾಳಬಲ್ಲವನು, ಆನಂದಾದಿ ಗುಣಯುಕ್ತನು ಆಗಿದ್ದಾನೆ

ಈ ವಿಧವಾದ ಪರಮಾತ್ಮನನ್ನು ಪೂಜಿಸುವುದೆಂತು? ಆತನನ್ನು ಪ್ರೀತಿಸಿ ಒಲಿಸುವುದೆಂತು? ಈ ವಿಧಾನವನ್ನು ಇಬ್ಬರು ಕವಿಗಳು ವಿವಿಧ ರೀತಿಯಲ್ಲಿ ವರ್ಣಿಸಿ ದ್ದಾರೆ. ರಂಗನಾಥನು ಪರಮಾತ್ಮನ ಪೂಜಾವಿಧಾನವನ್ನು ನಿರ್ಗುಣಾರಾಧನೆ ಯೆಂದು ಹೆಸರಿಸಿದ್ದಾನೆ. ಸಗುಣವಾಗಿರುವ ಪೂಜಾವಿಧಾನವು ಮನನಾರ್ಥಕ್ಕೆ ಸಾಧನವಾದುದು. ನಿರ್ಜನವಾದ ಪ್ರದೇಶದಲ್ಲಿ ಆಸನಸ್ಥನಾಗಿ ತಾನೇ ಈಶ್ವರ ನೆಂದು ಅರಿತು ಧ್ಯಾನಮಗ್ನನಾಗಬೇಕು. ಜಾಗ್ರತ್, ಕನಸು, ನಿದ್ರೆಯೆಂಬ ಮೂರು

ಅವಸ್ಥೆಗಳನ್ನು ಮೀರಿ ತುರ್ಯವನ್ನೇರಿ ನಿರ್ಗುಣವಾದ ಸತ್, ಚಿತ್ ಸುಖವೆನಿಸುವ ಸಹಜಾಕಾರವಾದ ಪರಬ್ರಹ್ಮತಾನೆಯೆಂದು ಭಾವಿಸುವ ಪರಮಪದವೇ ಸಿಂಹಾಸನವು. (ಸ. ೧೧ ಪದ್ಯ ೯) ಈ ಸಿಂಹಾಸನವು ರತ್ನಖಚಿತವೂ ಆಗಿದೆ ಮಲಿನ ವಾಸನೆಯೆಂಬುದು ಆ ಸಿಂಹಾಸನದ ಹೊದಿಕೆ. ಅದನ್ನು ಅಳಿಯಬೇಕು. ಕಾಮಾದಿಗಳು ಹೊಲಸು. ಅವುಗಳನ್ನು ತೊಳೆಯಬೇಕು. ಶಮದಮಗಳು ರತ್ನಗಳು. ಇವುಗಳಿಂದ ಜಡಿತವಾಗಿದೆ ಆ ಸಿಂಹಾಸನ ಸತ್ ಎಂಬ ಆಕಾರ, ಚಿತ್ ಎಂಬ ಪ್ರಭೆ, ಆನಂದವೆಂಬ ಸೊಬಗು ಇಂಥ ಪ್ರತ್ಯಗಾತ್ಮನನ್ನು ಮತಿಯೆಂಬ ಆಸನದಲ್ಲಿರಿಸುವುದು ಉಪಚಾರದ ಆಹ್ವಾನ. ಅರ್ಘ್ಯವೆಂದರೆ ಬೆಲೆಯುಳ್ಳುದೆಂದರ್ಥ. ಅನರ್ಘ್ಯವಾದ ವಸ್ತುವಿಗೆ ಅರ್ಘ್ಯದಿಂದೇನು? ಆ ಬ್ರಹ್ಮನನ್ನು ಅನರ್ಘ್ಯವೆಂದರಾಯಿತು, ಅರ್ಘ್ಯದ ಉಪಚಾರವಾದಂತೆಯೇ. ತನ್ನಲ್ಲಿತಾನು ತಿಳಿದು ಆನಂದಮಯ ಜಲಧಿಯೆಂದು ಭಾವಿಸುವುದು ಪಾದ್ಯವೆಂಬ ಉಪಚಾರ. ಆ ಮೇಲೆ ಸ್ನಾನ. ಮೇಲೆ ಹೇಳಿರುವ ಮೂರು ಅವಸ್ಥೆಗಳಲ್ಲಿ ಕಾಣಿಸಿಕೊಳ್ಳುವ ಘೋರವಾದ ತಾಪತ್ರಯಗಳಿಂದ ದೂರವಾಗಿರುವೆನೆಂದರಿವುದು ಸ್ನಾನ. ವ್ಯಾಪಿಸಿರುವ ವಿಶ್ವದಿಂದ ನಾನು ಬೇರೆಯಾಗಿದ್ದೇನೆ, ನಾನು ನಿಜಚೈತನ್ಯ ಎಂಬುದು ವಸ್ತ್ರದ ಉಪಚಾರ ಬ್ರಹ್ಮವು ತನ್ನ ತೇಜಸ್ಸಿನಿಂದ ಸಕಲಕ್ಕೂ ತೇಜಸ್ಸನ್ನು ಕೊಡುವುದು ಎಂದು ನಿರ್ಣಯಿಸುವುದು ಆಭರಣದ ಉಪಚಾರ. ಸಂಪೂರ್ಣ ಚಿತ್‌ಸುಖವೆಂಬ ಚೈತನ್ಯಸೂತ್ರದಿಂದ ಅಖಿಳವನ್ನು ಪೋಣಿಸಿದೆ ಎಂಬ ಭಾವನೆಯೇ ಯಜ್ಞೋಪವೀತದುಪಚಾರ. ಎಲ್ಲದರಲ್ಲಿ ತಾನಿದ್ದು ತನ್ನಲ್ಲೆಲ್ಲವನ್ನು ಧರಿಸಿದ್ದರೂ, ನಿರ್ಲೇಪವಾಗಿರುವೆನೆಂಬುದು ಅನುಲೇಪನದ ಉಪಚಾರ. ಮನಸ್ಸು ದುರ್ವಿಷಯಗಳನ್ನೆಳಸುವುದು ಆ ಸರ್ವವಾಸನೆಯನ್ನಳಿದ ಮನಸ್ಸಿನ ನಿರ್ವಾಸನೆಯೆಂಬುದು ಪುಷ್ಪದುಪಚಾರ ಅಮಲಾನಂದವಾಗಿರುವ ಪರಬ್ರಹ್ಮ, ನಿರ್ಗುಣ, ಗಂಧವಾಸನೆಯುಳ್ಳದು ಹೊಂದದು ಎಂಬ ಭಾವನೆ ಧೂಪ. ಎಲ್ಲಾ ತತ್ತ್ವಗಳ ಒಳಹೊರಗೆ ಬೆಳಗುವುದು ಒಂದೇ ತೇಜಸ್ಸು ಎಂಬುದು ದೀಪ. ಭೋಗ, ಭೋಗ್ಯ, ಭೋಕ್ತೃ ಎಂಬ ವಿಭಾಗವಿಲ್ಲದಿರುವ ನಿತ್ಯತೃಪ್ತನಾದವನಿಗೆ ತನ್ನಲ್ಲಿಯ ಭೋಗವೆಂದರೆ ನೈವೇದ್ಯವಾಗುವುದು. ನಿರ್ಗುಣವಾದ ನಿಜ ಸುಖಸಾಗರವೇ ತಾನೆಂದರೆ ತಾಂಬೂಲ. ಪಾವನ ಪರಾನಂದಾದಿ ನಾಮಗಳು ತಾನೆಯೆನೆ ಪ್ರದಕ್ಷಿಣೆ. ಭೇದ ಭಾವ ಭ್ರಾಂತಿ ನಾಶರೂಪವಾದ ಜೀವ ಪರಮಾತ್ಮ ಐಕ್ಯವೆಂಬ ನಿಜಾವಬೋಧವೇ ತಾನು ಎಂದರೆ ನಮಸ್ಕಾರ. ವಿಷಮವಾಗಿರುವ ಮಾಯಾವಿಲಾಸವು ಹಬ್ಬಿ ಜಗತ್ತಾಗಿ ತೋರುವುದು. ಅದು ಸುಳ್ಳೆಂದು ವಿಸರ್ಜಿಸಲು ಅಸಮಾನವಾದ ತೇಜೋರಾಶಿ ತಾನೆ ಆಗ ತನ್ನಲ್ಲಿ ರಮಿಸುತ್ತ ಉಸುರದೆ ಇರುವುದು ವಿಸರ್ಜನೆಯಾಗುವುದು. ಸಗುಣದಲ್ಲಿ ಪೂಜ್ಯಪೂಜಕವೆಂಬ ಭಾವನೆಯಿರುವುದು ನೈಜ. ಅದು ಬಿಂಬದಿಂದ ಪ್ರತಿಬಿಂಬದಂತಿರುವುದು. ಈ ಜಗತ್ಸಾಕ್ಷಿಕವು ಮನಸ್ಸುಗಳ ಸಮುದಾಯದಲ್ಲಿ ಪ್ರತಿಫಲಿಸಿ ಜೀವಸಮುದಾಯವೆನಿಸಿ ಪೂಜ್ಯಪೂಜಕ

ಭಾವವಾಗಿದೆ. ಈ ಜಗತ್ತಿನಲ್ಲಿ ಜನರು ಮಾಡುವ ಪೂಜೆಗಳು ಬಹು ವಿಧವಾಗಿವೆ. ಆದರೆ ಅವೆಲ್ಲಕ್ಕೂ ಇದು ಮಿಗಿಲಾದ ಪೂಜೆ. ಏಕೆಂದರೆ ಇದು ನಿರ್ವ್ಯಾಜವಾದ " ನಿರುಪಾಧಿಸುಖಸಾಮ್ರಾಜ್ಯಸಂಪತ್‌ಪ್ರಾಪ್ತಿಮುಕ್ತಿಯನಿತ್ತು ಸಲಹುವುದು "

(ಅಧ್ಯಾಯ ೧೧ ಪದ್ಯ ೯-೨೩)

ಹರಿಕಥಾಮೃತಸಾರದಲ್ಲಿ ಈ ನಿರ್ಗುಣದ ಪೂಜಾ ವಿಧಾನವನ್ನು ಹೇಳಿಲ್ಲ. ಅಲ್ಲಿಯ ಪೂಜಾ ಕ್ರಮವು ಹೀಗಿದೆ. ಜಲಜನಾಭನ ಮೂರ್ತಿಯನ್ನು ಮನಸ್ಸಿನಲ್ಲಿ ನೆಲೆಗೊಳಿಸಿ ನಿಶ್ಚಲವಾದ ಭಕ್ತಿಯಿಂದ ಚಳಿಮಳೆ ಬಿಸಿಲುಗಾಳಿಗಳೆನ್ನದೆ, ಪ್ರತಿ ನಿತ್ಯವೂ ನೆಲದಲ್ಲಿರುವ ಗಂಧವನ್ನು ಸುಗಂಧವೆಂದೂ, ಜಲವನ್ನು ರಸವೆಂದೂ, ರೂಪವನ್ನು ಸುದೀಪವೆಂದೂ, ಗಾಳಿಯನ್ನು ಚಾಮರವೆಂದೂ, ಶಬ್ದವನ್ನು ವಾದ್ಯವೆಂದೂ ಅರ್ಪಿಸಬೇಕು. ( ಸಂ. ೫ ಪ ೧೩ ) ಗೋಳಕಗಳು ಪರಮಾತ್ಮನ ಆಲಯಗಳು, ಕರಣಗಳು ದೀಪಗಳು, ಸಂಪ್ರಕ್ಷಾಲನೆಯೇ ಸಮ್ಮಾರ್ಜನ, ಎಲ್ಲ ವಿಷಯಗಳ ಸಮ್ಮೇಳನವೇ ಪರಿಯಂಕ, ಸುಖದ ಏಳಿಗೆಯೇ ಸುಪ್ಪತ್ತಿಗೆ, ಆತ್ಮ ನಿವೇದನವೇ ವಸನ. ಪಾಪಕರ್ಮ ಪಾದುಕೆ. ಕೋಪ ಧೂಪ. ಭಕ್ತಿ ಭೂಷಣ. ಸದ್ಬುದ್ಧಿ ಛತ್ರ. ದೀಪವು ಸುಜ್ಞಾನ. ಗುಣಕಥನವು ಆರತಿ. ವಾಸುದೇವನು ಒಳ ಹೊರಗೆ ಆಭಾಸಕನಾಗಿ ಬಿಂಬ ರೂಪದಲ್ಲಿ ತದ್ರೂಪ ತನ್ನಾಮದಲ್ಲಿ ಪ್ರಕಾಶಿಸುವನು. ಗೋಳಕವು ಕುಂಡ. ಅಗ್ನಿ ಕರಣ. ವಿಷಯವು ಸಮಿಧೆ ಗಾಳಿ ಯತ್ನ, ಕಾಮ ಧೂಮ. ಸನ್ನಿಧಾನವೇ ಅರ್ಚಿ. ಮೇಳನವೆಂಬುದು ಪ್ರಜ್ವಾಲೆ, ಆನಂದಗಳು ಕಿಡಿಗಳು. ಮಾತುಗಳು ಮಂತ್ರ. ಇದು ಅಧ್ಯಾತ್ಮ ಪರಮಾತ್ಮನ ಅರಮನೆಯಾದ ಈ ಶರೀರಕ್ಕೆ ಹತ್ತು ಕರಣಗಳು ಕನ್ನಡಿಯ ಸಾಲುಗಳು. ಚಿತ್ತವು ವಿಹಾರ ಮಂಟಪ. ಶ್ವಾಸಗಳು ಚಾಮರಗಳು. ಬುದ್ಧಿ ವಿಲಾಸಿನಿ, ಸಾಷ್ಟಾಂಗ ನಮಸ್ಕಾರಗಳು ಸುಶಯನಗಳು. ಈ ವಿಧವಾದ ಉಪಾಸನೆ ಮಾಡಿ ತನುವಿನಲ್ಲಿ ಮಮತೆ ಬಿಟ್ಟವನೇ ಮಹಾಯೋಗಿ. ಈ ಬ್ರಹ್ಮಾಂಡವೇ ಸುಮಂಟಪ, ಮೇರುಗಿರಿಯೆ ಸಿಂಹಾಸನವು. ಭಾಗೀರಥಿಯೇ ಮಜ್ಜನ ದಿಕ್ಕುಗಳು ವಸ್ತ್ರಗಳು. ನುಡಿಗಳು ಮಂತ್ರಗಳು, ಭೂರುಹಜಲ ಪುಷ್ಪಗಂಧ ಸಮೀರ, ಶಶಿ ರವಿ ದೀಪ, ತಾರಕೆಗಳು ಭೂಷಣಗಳೆಂದು ಅರ್ಪಿಸಲು ಕೈಕೊಳ್ಳುವನು. ಮನ ವಚನ ಕಾಯಿಕ ಪ್ರದಕ್ಷಿಣೆ ಅನುದಿನದಲ್ಲಿ ಸರ್ವತ್ರ ವ್ಯಾಪಕನಾದ ವನರುಹೇಕ್ಷಣಗೆ ಅರ್ಪಿಸುತ್ತ ಸುಖಪಡಬೇಕು. ಈ ಸಮನ್ವಯವೆಂಬ ಸದುಪಾಸನೆಯನ್ನು ಮಾಡುವವನು ಮೋಕ್ಷಾನ್ವೇಷಿಗಳಲ್ಲಿ ಉತ್ತಮನು. ಇವನೇ ಜೀವನ್ಮುಕ್ತನು. ಶ್ರೀಹರಿಯನ್ನು ಸರ್ವತ್ರದಲ್ಲಿ ಅವಲೋಕಿಸುತ್ತ ಗುಣ ರೂಪ ಕ್ರಿಯೆಯಲ್ಲಿವ್ಯತಿರೇಕ ಭಾವಿಸದೆ ಬಿಂಬದಲ್ಲಿ ಅನ್ವಯಿಸಬೇಕು. ಅದನ್ನು ಸ್ವೀಕರಿಸುವನು. ಮಲಗುವಾಗ, ಏಳುವಾಗ, ಕುಳಿತು ಮಾತಾಡುವಾಗ, ಮನೆಯಲ್ಲಿ ಕೆಲಸ ಮಾಡುವಾಗ, ಮೈದೊಳೆವಾಗ, ಮೆಲುವಾಗ ಕಲುಷ ದೂರನನ್ನು ಸಕಲ ತಾವಿನಲ್ಲಿ ತತ್ತನ್ನಾಮ ರೂಪದಿಂದ ತಿಳಿ. ಬಾಂದಳವೆ

ಮೊದಲಾದುದರೊಳು ಒಂದೊಂದರಲ್ಲಿ ಪೂಜಾ ಸುಸಾಧನವೆನಿಸುವ ಪದಾರ್ಥಗಳು ಬಗೆಬಗೆಯ ನೂತನ ರೂಪವಾಗಿ ಸಂದಣಿಸಿಕೊಂಡಿವೆ. ಅವೆಲ್ಲವನ್ನು ಧ್ಯಾನಕ್ಕೆ ತಂದು ಚಿಂತಿಸಿ ಸದಾ ಗೋವಿಂದನನ್ನು ಅರ್ಚಿಸಿ ಸಂತೋಷ ಪಡಬೇಕು. (ಸ. ೫. ಪದ್ಯ ೧೨). ಇದೆಲ್ಲವನ್ನು ಅನುಭವಕ್ಕೆ ತಂದುಕೊಳ್ಳಬೇಕು. ಎಲ್ಲ ಸಾಧನಗಳಲ್ಲಿ ಇದೇ ಮುಖ್ಯವಾದುದು. ನಾಲ್ಕು ವಿಧವಾದ ಪುರುಷಾರ್ಥಗಳನ್ನು ಪಡೆಯಬೇಕಾದರೆ ಜಗತ್ತಿನಲ್ಲಿ ಬೇರೆ ಉಪಾಯಗಳು ಇಲ್ಲ. ಎಲ್ಲ ವಿಷಯಗಳಲ್ಲಿಯೂ ವ್ಯಾಪಿಸಿರುವ ಲಕ್ಷ್ಮೀಪತಿಗೆ ಸರ್ವ ಸಮರ್ಪಣೆ ಎಂಬುದೆ ಮಹಾಪೂಜೆ. ಇದೇ ಸದುಪಾಯ (ಸ. ೫ ಪ. ೧೭).

ಈ ಎರಡು ಬಗೆಯ ಪೂಜಾವಿಧಾನಗಳಲ್ಲಿರುವ ವ್ಯತ್ಯಾಸವು ಸ್ಪಷ್ಟವಾಗಿದೆ. ಮೊದಲನೆಯದರಲ್ಲಿ ತಾನೇ ತನ್ನನ್ನು ಪೂಜಿಸಿಕೊಳ್ಳುವುದನ್ನೂ, ಎರಡನೆಯದರಲ್ಲಿ ತಾನು ಬೇರೆಯಾಗಿದ್ದು ಮತ್ತೊಬ್ಬನನ್ನು ಪೂಜಿಸುವುದನ್ನೂ ಪ್ರತಿವಾದಿಸಿದೆ. ಎರಡು ವಿಧದ ಪೂಜೆಯೂ ಅಷ್ಟು ಸುಲಭವಾದುದಲ್ಲ. ಆಸನವನ್ನು ಬಲಿದು ಸಕಲೇಂದ್ರಿಯಗಳನ್ನು ಕೇಂದ್ರೀಕರಿಸಿ, ಬಾಹ್ಯ ಪ್ರಪಂಚ, ಅಂತರಂಗ ಪ್ರಪಂಚವೆಂಬ ಅರಿವನ್ನೊಂದು ಮಾಡಿ ನಿರಾಕಾರನಾದರೆ ಪರಬ್ರಹ್ಮ ಪೂಜೆಯಾಯಿತು. ಇದು ಸುಲಭವಾಗಿ ಲಭ್ಯವಾಗುವುದೆ? ಕಣ್ಣಿಗೆ ಕಾಣುವ ವಸ್ತುವಿನಲ್ಲಿ, ಕೇಳುವ ಮಾತಿನಲ್ಲಿ, ಮೂಸುವ ವಾಸನೆಯಲ್ಲಿ, ಅಗೆಯುವ ಪದಾರ್ಥದಲ್ಲಿ, ಮುಟ್ಟುವ ವಸ್ತುವಿನಲ್ಲಿ ಪರಮಾತ್ಮನನ್ನು ನೋಡುತ್ತಾ, ಕಂಡದ್ದೆಲ್ಲ, ಉಂಡದ್ದೆಲ್ಲ, ಕೇಳಿದ್ದೆಲ್ಲ, ಆಡಿದ್ದೆಲ್ಲ, ಕೃಷ್ಣಾರ್ಪಣವೆಂದರೆ ಹರಿಪೂಜೆಯಾದಂತಾಯಿತು. ಈ ಕೃಷ್ಣಾರ್ಪಣದಲ್ಲಿ "ಗಾಳಿಗೆ ಹೋದದ್ದೆಲ್ಲ ಕೃಷ್ಣಾರ್ಪಣ"ವೆಂಬ ಭಾವನೆಯಿರಬಾರದು. ಅಥವಾ ತನ್ನದನ್ನು ಜೋಳಿಗೆಗೆ ಹಾಕಿಕೊಂಡು ಉಳಿದವರದನ್ನು ಕೃಷ್ಣಾರ್ಪಣವೆಂಬ ಬುದ್ಧಿಯೂ ಇರಬಾರದು. ತೋರಿಕೆಯ ಪೂಜೆಯೆಲ್ಲವೂ ನಿಷ್ಫಲವಾದುವು. "ಜೀವಕರ್ತೃತ್ವವನ್ನು ಮರೆತು ಪರಾವರೇಶನೆ ಕರ್ತೃವೆಂದರಿದು ಯಾವ ಕರ್ಮವನ್ನು ಮಾಡಿದರೂ ಅದು ಲೇಪಿಸುವುದಿಲ್ಲ." ಈ ರೀತಿಯಾಗಿ ಉಪಾಸನೆ ಮಾಡುವವರು, "ಪ್ರತಿ ಪ್ರತಿ ದಿನಗಳಲಿ ಏನೇನ ಮಾಡುವುದೆಲ್ಲ ಹರಿಪೂಜೆ. ಬಾಹ್ಯ ಕರ್ಮವ ಮಾಡಿ ಫಲವೇನು?" ಎಂದು ಇಬ್ಬರು ಕವಿಗಳು ಭಕ್ತಿ ಇಲ್ಲದ ಪೂಜೆಯನ್ನು ತಿರಸ್ಕರಿಸಿರುವರು.

ಅನುಭವಾಮೃತದ ಐದನೆಯ ಅಧ್ಯಾಯದಲ್ಲಿ ತತ್-ತ್ವಂ ಎಂದರೆ ಬ್ರಹ್ಮವೂ, ಜೀವವೂ ಒಂದೇ ಎಂಬ ಅಸಿಪದಾರ್ಥದ ನಿರ್ಣಯಮಾಡಲಾಗಿದೆ. ಮಾಯೆ ಸೃಷ್ಟಿಯ ಆದಿಯಲ್ಲಿ ಬ್ರಹ್ಮನಿಂದ ಆವಿರ್ಭವಿಸಿದುದನ್ನು ಹಿಂದೆ ಹೇಳಿದೆಯಷ್ಟೆ. ಅದು ಸತ್ತ್ವ, ರಜ, ತಮ ಎಂಬ ಮೂರು ಗುಣೋಪೇತವಾದುದು. ಶುದ್ಧ ಸತ್ತ್ವ ಎಂದರೆ ವಿದ್ಯೆ ವಿದ್ಯೆಯ ಉಪಾಧಿಯುಳ್ಳುದು ಬ್ರಹ್ಮ ರಜ, ತಮಗಳೆಂಬ ಆವರಣ ಅಥವಾ ಅವಿದ್ಯೆಯ ಉಪಾಧಿಯುಳ್ಳುದು ಜೀವ. ಎಂದರೆ ವಿದ್ಯೆಯ ಉಪಾಧಿಯುಳ್ಳವನು ಈಶ್ವರನು:

ಅವಿದ್ಯೆಯ ಉಪಾಧಿಯುಳ್ಳವನು ಜೀವನು. ಈ ವಿದ್ಯೆಯಿಂದ ಬ್ರಹ್ಮವೆನಿಸಿಕೊಂಡುದೂ, ಅವಿದ್ಯೆಯಿಂದ ಜೀವವೆನಿಸಿಕೊಂಡುದೂ ಹೊರಗಣ ಉಪಾಧಿ ವಿನಾಶದಿಂದ ಅಂತರಂಗವೆಲ್ಲವೂ ಒಂದೇ ಆಗಿ ಶುದ್ಧ ಬ್ರಹ್ಮವಾಗುವುದು. ನೀರು ನೀರನ್ನೂ, ಹಾಲು ಹಾಲನ್ನೂ, ಸಕ್ಕರೆ ಸಕ್ಕರೆಯನ್ನೂ ಸೇರಿದಂತೆ ಇದು ಕಲೆತು ಹೋಗುವುದು. ಇದನ್ನು ಸಾಧಿಸುವ ಬಗೆಯನ್ನು ಆರನೆಯ ಅಧ್ಯಾಯದಲ್ಲಿ ವಿವರಿಸಿದೆ. ಇದು ಏಳು ಮೆಟ್ಟಲುಗಳನ್ನುಳ್ಳದು ಇವುಗಳನ್ನು ಸಪ್ತಭೂಮಿಕೆಗಳೆಂದು ಸಂಕೇತಿಸುವರು. ಮೊದಲ ಸೋಪಾನವು ಸುಖೇಚ್ಛೆಯನ್ನು ಕಳೆದುಕೊಳ್ಳುವುದು ಈ ಸುಖವು ಐಹಿಕ ಪಾರತ್ರಿಕವೆಂದು ಎರಡು ಬಗೆಯದು. ಭಾಗ್ಯ, ಹೆಂಡಿರುಮಕ್ಕಳು, ಅಧಿಕಾರ ಮೊದಲಾದುವುಗಳಿಂದ ಉಂಟಾಗುವ ಸುಖವೇ ಐಹಿಕವಾದುದು. ಸತ್ಕರ್ಮಗಳಿಂದ ಸ್ವರ್ಗ ಮೊದಲಾದುವುಗಳನ್ನು ಪಡೆಯುವುದು ಪಾರತ್ರಿಕ ಸುಖವು. ಇವೆರಡೂ ಕ್ಷಣಿಕವಾದುವುಗಳೆಂದು ಭಾವಿಸಿ ಅವುಗಳನ್ನು ತ್ಯಾಗ ಮಾಡುವುದೇ ಸುಖತ್ಯಾಗವೆಂಬ ಭೂಮಿಕೆ. ಈ ಮೆಟ್ಟಲು ತಾನು ಯಾರು? ಪರವಸ್ತು ಅಥವಾ ಬ್ರಹ್ಮನಾರು? ತನಗೂ ಅವನಿಗೂ ಇರುವ ಸಂಬಂಧವೇನು? ಎಂಬ ಎರಡನೆಯ ಮೆಟ್ಟಲನ್ನು ಹತ್ತಿಸುವುದು ಇದೇ ಆತ್ಮವಿಚಾರವೆಂಬ ದ್ವಿತೀಯ ಭೂಮಿಕೆ. ಇದರ ಅರಿವಾದೊಡನೆಯೇ ಸಂತತ ಈ ಚಿಂತನೆಯಿಂದ ಪ್ರಪಂಚದಲ್ಲಿ ನಿಸ್ಸಂಗವಾಗಿರಬೇಕೆಂಬ ಮೂರನೆಯ ಮೆಟ್ಟಲು ತನಗೆ ತಾನೇ ಪ್ರಾಪ್ತವಾಗುವುದು. ಆಗ ಸಂಸಾರದ ಸಹವಾಸವನ್ನು ದೂರಮಾಡಬೇಕೆಂಬ ಬಲವಾದ ಅಪೇಕ್ಷೆ ಹುಟ್ಟುವುದು. ತನ್ನದು ಎಂಬುದರಲ್ಲಿ ಅನಾಸಕ್ತಿ ಹುಟ್ಟುವುದು. ಅದು ಬಲಿತು ನಿರ್ಲಿಪ್ತವಾಗಿರಬೇಕೆಂಬ ಭಾವೋದಯವಾಗುವುದು. ಇದೇ ನಾಲ್ಕನೆಯ ಮೆಟ್ಟಲು. ಇದರಲ್ಲಿ ಮನಸ್ಸು ಸಂಸಾರದಲ್ಲಿದ್ದರೂ ನಿರ್ಲಿಪ್ತವಾಗಿರುವುದು. ಅದು ನೀರಿನ ಕಮಲದಂತೆ. ಇಲ್ಲಿಯೇ ವಾಸನಾಕ್ಷಯವಾಗುವುದು. ಜ್ಞಾನೋದಯವಾಗಿ ತನ್ನ ಸ್ವರೂಪಾವಿರ್ಭಾವವಾಗುವುದು. ಆಗ ಜೀವನು ಆನಂದಿನಿಯೆಂಬ ಐದನೆಯ ಮೆಟ್ಟಲಿಗೆ ಏರುವನು ಜೀವವು ತನ್ನ ಸ್ವರೂಪದ ಹತ್ತಿರ ಹತ್ತಿರವಾಗುವುದು ಒಮ್ಮೊಮ್ಮೆ ಒಂದಾಗುವುದು. ಆಗ ಪ್ರಪಂಚವು ದೂರವಾಗಿ ಯೋಗನಿದ್ರಾವಸ್ಥೆಯುಂಟಾಗುವುದು. ಆನಂದವು ತಲೆದೋರುವುದು ಪುನಃ ಎಚ್ಚರವಾಗುವುದು; ಪುನಃ ಭಾವಾವೇಶವಾಗುವುದು ಇದು ಅಭ್ಯಾಸವಾಗಿ ಆರನೆಯ ಅವಸ್ಥೆ ಅಥವಾ ಮೆಟ್ಟಲು ತುರ್ಯವೆಂಬುದು ಲಭಿಸುವುದು ಇದರಲ್ಲಿ ಒಳಗೆ ಹೊರಗೆ ದ್ವೈತ, ಅದ್ವೈತವೆಂಬ ಭಾವವೇ ನಾಶವಾಗಿ ಶಾಶ್ವತವಾದ ತನ್ಮಯಾವಸ್ಥೆಯಾಗುವುದು. ಇದು ಎರಡೂ ಒಂದೇ ಆಗಿ ನಿಂತ ಅವಸ್ಥೆ ಇದನ್ನು ಮೀರಿದುದೇ ತುರ್ಯಾತೀತವೆಂಬ ಏಳನೆಯ ಮೆಟ್ಟಲು. ಇದರಲ್ಲಿ ಜೀವವು ಬ್ರಹ್ಮನಲ್ಲಿ ಸೇರಿಕೊಂಡಿರುವ ಭಾವನೇ ಇರುವುದಿಲ್ಲ. ನಿತ್ಯ ಬ್ರಹ್ಮವಾಗಿರುವ ಅವಸ್ಥೆಯದು ಈ ಏಳು ಮೆಟ್ಟಲು†

† ಸಪ್ತಭೂಮಿಕೆಗಳನ್ನು ವೀರಶೈವಧರ್ಮದ ಷಟ್‌ಸ್ಥಲಗಳೊಡನೆ ಹೋಲಿಸಬಹುದು.

ಗಳಲ್ಲಿ ಮೊದಲಿನ ಮೂರು ಮೆಟ್ಟಲುಗಳು ಸಾಧನೆಯಾಗಿರುವುವು; ಕೊನೆಯ ಮೂರು ಮೆಟ್ಟಲುಗಳು ಜೀವನ್ಮುಕ್ತಿಯ ಪರ್ಯಾಯಗಳು ನಾಲ್ಕನೆಯದು ಜ್ಞಾನೋದಯವಾಗಿ ಈ ಎರಡು ಗುಂಪುಗಳನ್ನು ಬೇರ್ಪಡಿಸುವ ಅವಸ್ಥೆ. (ಅ ೬ ಪದ್ಯ ೪೧). ಗುರುಶುಶ್ರೂಷೆ, ಶಾಸ್ತ್ರಶ್ರವಣ, ಮನನ ನಿಧಿಧ್ಯಾಸ ಸಮಾಧಿಗಳ ಅಭ್ಯಾಸ ಬಲದಿಂದ ಯೋಗಿ ಪರಬ್ರಹ್ಮನಾಗುವನು. ಕೀಟವು ಭ್ರಮರವಾದಂತೆ ಇದು. ಇದನ್ನು ಮನೋಹರವಾದ ಅನೇಕ ದೃಷ್ಟಾಂತಗಳಿಂದ ವಿವರಿಸಿದೆ.

ಏಳನೆಯ ಅಧ್ಯಾಯದಲ್ಲಿ ಅಂಥ ಪರಮಪದ ಅಥವಾ ಅಪರೋಕ್ಷದ ಪರಿಯನ್ನು ನಿರೂಪಿಸಿದೆ. ಶುಕಯೋಗಿ ಈ ಪರಮಪದದ ಸ್ವರೂಪವನ್ನು ತಿಳಿಸಬೇಕೆಂದು ವೇದವ್ಯಾಸರನ್ನು ಬಿನ್ನಯಿಸಿಕೊಳ್ಳಲು ಅವರು ಅದನ್ನು ಹೇಳುವುದು "ಅಳವಲ್ಲ" ಎಂದು ಬಿಟ್ಟಿದ್ದಾರೆ. ಆದರೂ "ಸಂಭಾಳಿಸುತ ಅರುಪುವೆನು" ಎಂದು ಬಹಳ ಎಚ್ಚರಪಿಟ್ಟುಕೊಂಡು ನಿರೂಪಿಸಿದ್ದಾರೆ. ಇದು ಸ್ವಾನುಭವ ವೇದ್ಯವಾದುದರಿಂದ ಅನುಭವವಿಲ್ಲದವರಿಗೆ ಅದರ ಸ್ವರೂಪವನ್ನು ತಿಳಿಸಿ ಕೊಡುವುದು ಕಷ್ಟಸಾಧ್ಯವೆಂದು ವೇದವ್ಯಾಸರ ಉದ್ದೇಶ. ಅವರು ಇದನ್ನು ಹೆಚ್ಚಿಗೆ ವಿಸ್ತರಿಸದೆ ಹದಿನೇಳು ಪದ್ಯಗಳಲ್ಲಿ ಅಲ್ಲಲ್ಲಿ ಕೆಲವು ಉದಾಹರಣೆಗಳನ್ನಿತ್ತು ಹೇಳಿದ್ದಾರೆ. ಇಲ್ಲಿಗೆ ಅಧ್ಯಾಯ ಮುಗಿದುಹೋಗಿದೆ ಈ ಗ್ರಂಥದಲ್ಲಿರುವ ಹನ್ನೊಂದು ಅಧ್ಯಾಯಗಳಲ್ಲಿ ಇದೇ ಬಹಳ ಸಣ್ಣ ಅಧ್ಯಾಯ ಇಲ್ಲಿ ಎರಡು ಉದಾಹರಣೆಗಳನ್ನು ಕೊಟ್ಟಿದೆ ಅಗ್ನಿ ಹಣತೆಯಲ್ಲಿ ಎಣ್ಣೆ ಅದ್ದಿದ ಬತ್ತಿಯನ್ನು ಹತ್ತಿಕೊಂಡು ಎಲ್ಲ ವಸ್ತುಗಳನ್ನು ಬೆಳಗುವಂತೆ ಸ್ಥೂಲಸೂಕ್ಷ್ಮ ಪದಾರ್ಥಗಳಲ್ಲಿ ಸ್ವಪ್ರಕಾಶವಾಗಿ ಬೆಳಗುವುದನ್ನೇನು ಹೇಳುವುದು? ಅದೇ ಪರಮಪದ (ಅ. ೭. ಪ ೧೭). ಅಚ್ಚಬಿಸುದಿಂಗಳ ಕಾಂತಿಯಲ್ಲಿ ಸ್ಫಟಿಕಶಿಲೆ ಲೀನವಾಗಿರುವಂತೆ ತನ್ನ ಬುದ್ಧಿಯಲ್ಲಿ ಸುಖವು ಮಿಶ್ರವಾಗಿರುವುದೇ ಪರಮಾತ್ಮಪದ. (ಅ ೭. ಪ. ೯)

ಎಂಟನೆಯ ಅಧ್ಯಾಯದಲ್ಲಿ ಮಾಯೆಯಸ್ಥಾನವನ್ನು ನಿರ್ಣಯಿಸಿದೆ. ಮಾಯೆ ಬ್ರಹ್ಮದಿಂದ ಆವಿರ್ಭೂತವಾಗಿದ್ದರೂ ಅದು ಈ ಕಣ್ಣಿಗೆ ಗೋಚರಿಸುವುದಾಗಲಿ ಸತ್ಯದೃಷ್ಟಿಗೆ ಅದರ ಅಸ್ತಿತ್ವವಿಲ್ಲ. ಅದು ಸಂಖ್ಯೆಯ ಮುಂದಿನ ಸೊನ್ನೆಯ ಹಾಗೆ. ಸಂಖ್ಯೆಯಿಲ್ಲದೆ ಸೊನ್ನೆಗೆ ಬೆಲೆಯೇನು? ಸಂಖ್ಯೆಯ ಜೊತೆಯಲ್ಲಿದ್ದು ಸಂಖ್ಯೆಯ ಬೆಲೆಯನ್ನದು ಬೆಳಸುವುದು. ಹಾಗೆಯೇ ಮಾಯೆ ಬ್ರಹ್ಮನಿಂದ ಕೂಡಿ ಪ್ರಪಂಚವೆಂದು ನಾನಾ ರೂಪದಲ್ಲಿ ವ್ಯಕ್ತವಾಗಿರುವುದು. ಸೊನ್ನೆಯ ನಾಶದಿಂದ ಸಂಖ್ಯೆ, ಬರಿಯ ಸಂಖ್ಯೆಯಾಗಿ ಉಳಿಯುವಂತೆ ಮಾಯೆಯ ನಾಶದಿಂದ ಬ್ರಹ್ಮವೊಂದೇ ಸತ್ಯವಾಗಿ ಉಳಿಯುವುದು. ಬೆಲ್ಲದ ಅಚ್ಚಿನಲ್ಲಿ ನಾನಾ ವಿಧವಾದ ಫಲಗಳನ್ನು ಮಾಡಿದ್ದರೂ, ಆಕಾರವು ಅಳಿದರೆ ಅವೆಲ್ಲ ಬೆಲ್ಲವಾಗುವಂತೆ ಮಾಯೆಯಿಂದ ತೋರುವ ಪ್ರಪಂಚವು ಮಾಯೆ ಬಯಲಾದರೆ ಬೆಲ್ಲವೊಂದೇ ಉಳಿಯುವ ಹಾಗೆ ಬ್ರಹ್ಮವೊಂದೇ ಉಳಿಯುವುದು. ಮಾಯೆ ನಾಟಕದ ಬೊಂಬೆಯಂತೆ ವಿವಿಧ ವೇಷಗಳನ್ನು ಹಾಕಿಕೊಂಡು ಗೋಚರವಾಗುವುದು.

ಒಂಬತ್ತನೆಯ ಅಧ್ಯಾಯದಲ್ಲಿ ಜೀವನ ಸ್ವರೂಪವನ್ನೂ ಅದರ ವ್ಯಕ್ತಿತ್ವ ವನ್ನೂ ನಿರೂಪಿಸಿದೆ. ಜೀವನೆಂಬ ಪ್ರತ್ಯೇಕವಸ್ತುವಿಲ್ಲ. ಅಹಂಕಾರವು ಮಾಯಾ ಬದ್ಧವಾಗಿ ಚೈತನ್ಯಸಂಪರ್ಕದಿಂದ ಜೀವವೆನಿಸಿಕೊಂಡು ದೇಹಗಳಲ್ಲಿ ಸುಳಿದಾಡುತ್ತಿ ರುವುದು. ಇದು ಆತ್ಮನ ಗುಣವೂ ಅಲ್ಲ, ದೇಹದ ಗುಣವೂ ಅಲ್ಲ. ಅಹಂಕಾರ ತಾರತಮ್ಯದಿಂದ ಇದು ಮೂರು ವಿಧವಾದ ಹೆಸರನ್ನು ಪಡೆದಿರುವುದು. ಈ ಜೀವ ವೆನಿಸಿಕೊಂಡ ಹಮ್ಮು ಸಂಕೋಚದಿಂದ ಅವ್ಯಕ್ತವಾಗಲು ಸುಪ್ತಿ, ಉಚಿತವಾದ ನಾಡಿಗಳಲ್ಲಿ ಸಂಚರಿಸಲು ಸ್ವಪ್ನ, ಮೊದಲಾದ ಅವಸ್ಥೆಗಳು ಉಂಟಾಗುವುವು. ಈ ಅವಸ್ಥಾತ್ರಯಗಳಲ್ಲಿ ವಿಶ್ವ, (ಜಾಗ್ರತ್ತು) ತೈಜಸ, (ಸ್ವಪ್ನ) ಪ್ರಾಜ್ಞ, (ಸುಪ್ತ) ಎಂಬ ಹೆಸರನ್ನು ತಾಳುವುದು ಇವುಗಳಿಗೇ ವ್ಯಾವಹಾರಿಕ, ಪ್ರಾತಿಭಾಸಿಕ, ಪಾರ ಮಾರ್ಥಿಕವೆಂಬ ಬೇರೆಬೇರೆ ನಾಮಗಳುಂಟು. ವ್ಯಾವಹಾರಿಕಜೀವನು ಎಚ್ಚರ ವಾಗಿದ್ದಾಗ ನಾನು, ನನ್ನದು ಎಂಬ ಮಮತೆಯನ್ನಿಟ್ಟು ಪ್ರಪಂಚದ ವ್ಯವಹಾರ ವನ್ನು ನಡೆಸುವನು. ಇದು ಮಾಯೆಯ ಆವರಣದ ಚೇಷ್ಟೆ. ಸ್ವಪ್ನದಲ್ಲಿ ಹೊಸ ಪ್ರಪಂಚವನ್ನು ನೋಡುತ್ತ ಅನುಭವಿಸುವವನು ಪ್ರಾತಿಭಾಸಿಕ ಜೀವನು. ಆಗ ಅದನ್ನೇ ಸತ್ಯವೆಂದು ತಿಳಿದಿರುವನು. ಈ ಅಹಂಕಾರದ ಜೀವನವು ಪರಬ್ರಹ್ಮಸಾನ್ನಿಧ್ಯ ವನ್ನುಹೊಂದಿದಾಗ ಮಾತ್ರ ಪಾರಮಾರ್ಥಿಕ ಜೀವನಾಗಿರುವನು. ಇಲ್ಲಿ ಮಾಯಾಂಶ ವಿಲ್ಲ, ಆತ್ಮಾಂಶವಾಗಿರುವುದು. ಆದ್ದರಿಂದ "ಪಾರಮಾರ್ಥಿಕ ಜೀವ ತಾನೆ ಪರಮ ನಾಗಿಹನು" (ಅಧ್ಯಾಯ ೯ ಪ ೨೯). ಈ ಆವರಣ ನಾಶವಾಗುವವರೆಗೆ "ಜೀವ ತನ"ವು ನಾಶವಾಗುವುದಿಲ್ಲ.

ಹತ್ತನೆಯ ಅಧ್ಯಾಯದಲ್ಲಿ ಜೀವನು ಸತ್ಯವಲ್ಲದ ಸಂಸಾರದಿಂದ ಬಿಡುಗಡೆ ಯಾಗಿ ಆತ್ಮಸ್ವರೂಪವನ್ನು ತಿಳಿದು ಬ್ರಹ್ಮಾಪರೋಕ್ಷವನ್ನು ಪಡೆಯಲು ಯತ್ನಿಸ ಬೇಕೆಂಬ ಉಪದೇಶವಿದೆ. ಇದು ಹಿಂದಿನ ಅಧ್ಯಾಯಗಳ ಉಪಸಂಹಾರದಂತಿದೆ. ಇಲ್ಲಿ ಜೀವನ್ಮುಕ್ತನ ಲಕ್ಷಣಗಳನ್ನೂ, ಅವನ ಕಾರ್ಯಕಲಾಪಗಳನ್ನೂ ವಿವರಿಸಿ ಹೇಳಿದೆ ಕಪಟ ಸಂನ್ಯಾಸದಿಂದ ಮುಕ್ತಿಯಾಗದೆಂಬುದನ್ನು ತಿಳಿದುಕೊಳ್ಳಬೇಕು. ಬಾಹ್ಯಾ ಡಂಬರದ ಆಚರಣೆ ವ್ಯರ್ಥ. ಗುರ್ವನುಗ್ರಹದಿಂದ ತನ್ನ ನಿಜ ಸ್ವರೂಪವನ್ನು ತಿಳಿದು ಮುಕ್ತನಾಗುವುದು ಜೀವನ ಕರ್ತವ್ಯವೆಂಬುದನ್ನು ಅನೇಕ ಲೌಕಿಕ ದೃಷ್ಟಾಂತಗಳಿಂದ ವಿಶದಗೊಳಿಸಿದೆ.

ಹರಿಕಥಾಮೃತಸಾರದಲ್ಲಿಯಾದರೋ ಜೀವೇಶ ಭೇದವನ್ನು ಸಾರುವ ಪದ್ಯ ಗಳೇ ತುಂಬಿವೆ. ದ್ವೈತ ಸಿದ್ಧಾಂತಕ್ಕನುಸರಿಸಿ, ಶ್ರೀ ಮಧ್ವಾಚಾರ್ಯರ ಮತವನ್ನೇ ಹಿಡಿದು ದೇವ ದೈತ್ಯ ತಾರತಮ್ಯಗಳನ್ನೂ, ಆರೋಹಣ ಅವರೋಹಣ ವಿಧಾನ ಗಳನ್ನೂ ವಿಘ್ನೇಶನ ಸ್ತುತಿಯನ್ನೂ ವಿವರಿಸುವ ಸಂಧಿಗಳನ್ನುಳಿದು ಮಿಕ್ಕ ಸಂಧಿಗಳಲ್ಲಿ ಪರಮಾತ್ಮನ ಸರ್ವ ವ್ಯಾಪಕತ್ವ, ಸ್ವಾತಂತ್ರ್ಯ, ನಿಯಾಮಕತ್ವ, ಈಶತ್ವಗಳನ್ನು ಬೋಧಿಸಿದೆ ಜೀವನು ನಿತ್ಯನೂ, ಅವನೂ ಕರ್ತೃತ್ವ ಶಕ್ತಿಯುಳ್ಳವನೂ, ದತ್ತ

ಸ್ವಾತಂತ್ರ್ಯವುಳ್ಳವನೂ ಎಂಬುದನ್ನು ಪದೇ ಪದೇ ಸಾರಿದೆ. ಇಲ್ಲಿ ಅದನ್ನು ಸಂಗ್ರಹ ವಾಗಿ ವಿವೇಚಿಸಬಹುದು.

ಪರಮಾತ್ಮನು ಷಡೈಶ್ವರ್ಯಾದ್ಯಖಿಳ ಸದ್ಗುಣಗಳ ಸಮುದ್ರನು. (ಸಂ. ೨ ಪ. ೩) ಸ್ತ್ರೀ, ನಪುಂಸಕ, ಪುರುಷ, ನೀರು, ಬೆಂಕಿ, ಆಕಾಶ, ಮನಸ್ಸು, ಚಂದ್ರ, ಸೂರ್ಯ. ಕಾಲ, ಗುಣ, ಪ್ರಕೃತಿ,--ಇವುಗಳಲ್ಲಿ ಅವನು ಒಂದೂ ಅಲ್ಲ. (ಸ. ೩. ಪ ೨). ಇವನು ಗಂಧವೂ ಅಲ್ಲ, ರಸವೂ ಅಲ್ಲ, ಸ್ಪರ್ಶವೂ ಅಲ್ಲ, ಶಬ್ದವೂ ಅಲ್ಲ. ಆದರೆ. ಅವುಗಳ ಹೆಸರಿನಿಂದ ಕರೆಸಿಕೊಳ್ಳುವನು. ಮನಸ್ಸು ಮೊದಲಾದ ಇಂದ್ರಿಯಗಳ ಲ್ಲಿದ್ದು ವಿಷಯಗಳನ್ನು ಭೋಗಿಸುವನು. (ಸ ೩ ಪ. ೩). ಎಲ್ಲಾ ಇಂದ್ರಿಯಗಳಲ್ಲಿ ರುವ ತತ್ತ್ವಾಭಿಮಾನಿ ದೇವತೆಗಳಿಗೆ ಪ್ರೇರಕನಾಗಿ ಕರ್ಮಗಳನ್ನು ಮಾಡಿ ಮಾಡಿ ಸುವನು. (ಸ. ೩ ಪ. ೪). ಗುಣಿ ಗುಣಗಳಲ್ಲಿದ್ದು ಗುಣಿ ಗುಣ ಎಂದೆನಿಸುವನು. ಆದರೆ ಗುಣ ಬದ್ಧನಲ್ಲ. ಪುಣ್ಯಾಪುಣ್ಯ ಫಲಗಳನ್ನು ಬ್ರಹ್ಮಾದಿ ಚೇತನಕ್ಕೆ ಉಣಿಸು ವನು. ಚಿದಾನಂದೈಕ ದೇಹನು ಸಚರಾಚರ ಜಗದ್ಭುಕ್ ಎಂದು ಇವನ ಹೆಸರು. (ಸ ೩ ಪ. ೫) ಪರಮಾತ್ಮನು ಅನಿರುದ್ಧಾದಿ ನಾಲ್ಕು ರೂಪಗಳಿಂದ ದೇಹಿಗಳಲ್ಲಿದ್ದು ತನಗೆ ತಾನೆ ಸೇವ್ಯ ಸೇವಕನೆನಿಸಿ ಸೇವೆಯನ್ನು ಕೈಕೊಳ್ಳುವನು. (ಸ. ೩ ಪ ೭). ನಿರಂಶ ಜೀವರುಗಳಲ್ಲಿರುವ ಚಿತ್‌ಶರೀರವನ್ನು ಜಾಗರ ಸ್ವಪ್ನ ಮೊದಲಾದ ಅವಸ್ಥೆ ಗಳಲ್ಲಿ ವಿಭಾಗ ಮಾಡಿ ಭೋಗವನ್ನು ಕೊಡುವನು. ಸುಷುಪ್ತಿಯಲ್ಲಿ ನದಿಗಳು ಸಾಗರವನ್ನು ಕೂಡುವಂತೆ ಅಂಶಗಳನ್ನೆಲ್ಲ ಒಂದೆಡೆಗೆ ಸೇರಿಸುವನು. ತಾನು ವಿಯೋಗರಹಿತನು. (ಸ ೩ ಪ ೮) ತಂದೆ ಮಗನನ್ನು ಒಳ್ಳೆಯ ಅಲಂಕಾರಗಳಿಂದ ಸಿಂಗರಿಸಿ ಅವನಿಂದ ವಂದನೆಯನ್ನು ಸ್ವೀಕರಿಸುವಂತೆ ಪರಮಾತ್ಮನು ಜೀವರುಗಳಿಗೆ ಸಾಧನಗಳನ್ನು ಕಲ್ಪಿಸಿ ತಾನು ಹರ್ಷಿಸುವನು. ಆದ್ದರಿಂದ ಇವನು ಪೂಜ್ಯನೂ ಹೌದು, ಪೂಜಕನೂ ಹೌದು. ವೇಷ ಭಾಷೆಗಳಿಂದ ನಟ ಪುರುಷನು ಜನರನ್ನು ಸಂತೋಷಗೊಳಿಸುವಂತೆ ಪರಮಾತ್ಮನು ಬಹು ರೂಪ ಮಾತುಗಳಿಂದ ಜೀವಿಗಳನ್ನು ಸಂತೋಷ ಪಡಿಸುವನು (ಸ. ೩ ಪ. ೨೯). ಪರಮಾತ್ಮನು ಲಿಂಗ ಶರೀರದಲ್ಲಿ ಹದಿನಾರು ಕಲೋಪೇತನಾಗಿ (೫ ಜ್ಞಾನೇಂದ್ರಿಯ ೫ ಕರ್ಮೇಂದ್ರಿಯ, ೫ ತನ್ಮಾತ್ರ ಗಳು ೧ ಮನಸ್ಸು) ವಿಶ್ವರೂಪದಿಂದಲೂ, ತೈಜಸ. ಪ್ರಾಜ್ಞ, ತುರ್ಯ ರೂಪಗಳಿಂದಲೂ ಪ್ರಕಾಶಿಸುವನು ವಿಶ್ವ, ತೈಜಸ, ಪ್ರಾಜ್ಞ ರೂಪಗಳು ಜೀವನಿಗೆ ಜಾಗ್ರದವಸ್ಥೆ, ಸ್ವಪ್ನ, ಸುಷುಪ್ತಿಗಳನ್ನು ಕೊಡುವುವು. ತುರ್ಯ ರೂಪವೇ ಶರೀರವನ್ನು ರಕ್ಷಿಸುವ ರೂಪ. ಮನಸ್ಸಿನಲ್ಲಿ ಆತ್ಮರೂಪವನ್ನೂ ಅಹಂಕಾರದಲ್ಲಿ ಅಂತರಾತ್ಮವೆಂಬ ರೂಪವನ್ನೂ ಮಹತತ್ತ್ವದಲ್ಲಿ ಪರಮಾತ್ಮನನ್ನೂ, ಅವ್ಯಕ್ತದಲ್ಲಿ ಜ್ಞಾನಾತ್ಮನನ್ನೂ ಚಿಂತನೆಮಾಡಬೇಕು ಇದರಂತೆ ದೇಹದಲ್ಲೆಲ್ಲಾ ಪರಮಾತ್ಮನ ೫೧ ರೂಪಗಳನ್ನು ಧ್ಯಾನಿಸಬೇಕು (ಸ ೬ ಪ ೨೫-೨೬). "ದ್ವಾಸುಪರ್ಣಶ್ರುತಿ"ಯನ್ನು ಅನುಸರಿಸಿ ಸದು ಪಾಸನೆ ಮಾಡುವವರು ಜೀವನ್ಮುಕ್ತರೆನಿಸುವರು. (ಸ ೬ ಪ ೩೦) ಕಲುಷವಿಲ್ಲದ

ಕನ್ನಡಿಯಲ್ಲಿ ಪದಾರ್ಥಗಳು ಪ್ರತಿಬಿಂಬಿಸುವಂತೆ ಜಡಚೇತನರಲ್ಲಿ ಬಿಂಬರೂಪಿಯಾದ ಪರಮಾತ್ಮನು ಪ್ರತಿಫಲಿಸುವನು. ಪ್ರತಿಯೊಂದು ಜೀವಿಗೂ ಸ್ವರೂಪದೇಹ, ಲಿಂಗದೇಹ, ಅನಿರುದ್ಧ ದೇಹ, ಸ್ಥೂಲದೇಹಗಳೆಂದು ನಾಲ್ಕು ವಿಧದೇಹಗಳಿರುವುವು. ಇವುಗಳಿಗೆ ೬ (ಅಸ್ತಿ-ಜಾಯತೇ, ಪರಿಣಮತೇ, ವಿವರ್ಧತೇ, ಅಪಕ್ಷೀಯತೇ, ವಿನಶ್ಯತಿ) ಅವಸ್ಥೆಗಳಿರುವುವು. ಇವುಗಳನ್ನು ತರಂಗಗಳೆಂದು ಸಂಕೇತಿಸುವರು. ಪರಮಾತ್ಮನು ಇವುಗಳಿಂದ ನಿರ್ಲಿಪ್ತನಾಗಿರುವನು. (ಸ. ೭ ಪ. ೬). ಎಲ್ಲಾ ಪದಾರ್ಥಗಳಲ್ಲಿ ಪರಮಾತ್ಮನು ಅನೇಕ ರೂಪಗಳಿಂದ ಶೋಭಿಸುತ್ತಿದ್ದರೂ ಶಾಸ್ತ್ರದಲ್ಲಿ ಒಟ್ಟು ೨೦೦೮ ರೂಪಗಳನ್ನು ನಿರ್ಣಯಿಸಿದ್ದಾರೆ. ಆ ರೂಪಗಳನ್ನು ಉಪಾಸನ ಮಾಡಿ ಮುಕ್ತಿ ಪಡೆಯಬೇಕು "ಬರಿದೆ ಜಲದಲಿ ಮುಳುಗಿ ಬಿಸಿಲೊಳು ಬೆರಳನೆಣಿಸಿದರೇನು ? ಸದ್ಗುರು ಹಿರಿಯರನುಸರಿಸಿದರ ಮರ್ಮವ ನರಿಯದಿಹ ನರನು (ಸ ೭ ಪ. ೧೪). ದೀಪಗಳು ಎಣ್ಣೆಯ ಬತ್ತಿಯನ್ನು ಅನುಸರಿಸಿ ಕತ್ತಲೆಯನ್ನು ಕಳೆದು ಪದಾರ್ಥಗಳನ್ನು ತೋರುವಂತೆ ನಮ್ಮ ಭಕ್ತಿಜ್ಞಾನಕರ್ಮಗಳಿಗೆ ಒಲಿದು ಪರಮಾತ್ಮನು ತನ್ನ ಸ್ವರೂಪವನ್ನು ತೋರುವನು. (ಸ. ೭ ಪ. ೨೧). ಯಾವದೇಹಗಳೇ ಬರಲಿ, ಯಾವ ಲೋಕದಲ್ಲಿಯೇ ಇರಲಿ, ಯಾವ ಅವಸ್ಥೆಗಳೇ ಬರಲಿ ಪರಮಾತ್ಮನನ್ನು, ಜಡಚೇತನರಲ್ಲಿ ಮೇಲಿನಂತೆ ಕಂಡರೆ ಒಲಿವನು ಆದ್ದರಿಂದ ಭಕ್ತಿಜ್ಞಾನಗಳನ್ನು ಬೇಡಬೇಕು. (ಸ. ೭ ಪ. ೨೨). ಕುದುರೆ ಬಾಲದ ಕೊನೆಯ ಕೂದಲ ತುದಿಯನ್ನು ನೂರು ಭಾಗ ಮಾಡಿ ಅದರ ಒಂದು ಭಾಗದಲ್ಲಿ ಮತ್ತೆ ನೂರುಭಾಗಮಾಡಿದುದರಲ್ಲಿಯ ಒಂದು ಭಾಗ ಜೀವ ಪರಿಮಾಣ ಇದು ಎಲ್ಲರಲ್ಲಿಯೂ ಅಷ್ಟೆ. (ಸ. ೯ ಪ. ೭). ಈ ಜೀವಕ್ಕೆ ಲಿಂಗದೇಹವು ಕಾಳಿನ ಮೇಲೆ ಹೊಟ್ಟು ಇರುವಹಾಗೆ ಹತ್ತಿಕೊಂಡಿರುವುದು. ಅದು ಜಡ. (ಸ. ೧೦ ಪ. ೧೩). ಅಷ್ಟದಳಕಮಲ ಮಧ್ಯನಾಡಿಯಲ್ಲಿರುವುದು. ಅಷ್ಟದಿಕ್ಪಾಲಕರು ಅಲ್ಲಿ ವಾಸಿಸುವರು. ಮಧ್ಯದಲ್ಲಿ ಹಂಸನಾಮಕ ಪರಮಾತ್ಮನು ಸುತ್ತುತ್ತಿರುವನು. ಅವನು ಚಲಿಸಿದಂತೆ ನಿದ್ರೆ, ಆಲಸ್ಯ. ಹಸಿವು, ತೃಷೆ ಮೊದಲಾದ ಅವಸ್ಥೆಗಳು ಉಂಟಾಗುವುವು. (ಸ. ೯ ಪ. ೨೦—೨೪). ಕೀಟ ಪೇಟವಾದಂತೆ ಪರಮಾತ್ಮನ ಸ್ಮರಣೆಯಿಂದ ಅಲ್ಪಜೀವನು ಸಾರೂಪ್ಯವನ್ನು ಹೊಂದುವನು. ಇದು ಬರಿಯರೂಪಸಾದೃಶ್ಯ. (ಸ. ೯ ಪ. ೩೦) ಜೀವನು ಅಸ್ವತಂತ್ರನು. ಹರಿ ಸರ್ವಸ್ವತಂತ್ರನು. (ಸಂಧಿ ೧೧ ಪ. ೩) ಪರಮಾತ್ಮನು ೭೨ ಸಾವಿರ ನಾಡಿಗಳಲ್ಲಿದ್ದು ಜೀವರನ್ನು ಸಂತಯಿಸುವನು. (ಸ. ೧೧ ಪ. ೭). ಪರಮಾತ್ಮನು ಭಕ್ತಿಯೊಂದರಿಂದಲೇ ಒಲಿವನು. ಸ್ನಾನ, ಜಪ, ದೇವತಾರ್ಚನೆ, ವ್ಯಾಖ್ಯಾನ, ಭಾರತ ಮೊದಲಾದ ಪುರಾಣ ಕಥೆಗಳನ್ನು ಹೇಳಿಕೇಳಿದರೆ ಒಲಿಯನು. ಜ್ಞಾನಕರ್ಮೇಂದ್ರಿಯಗಳಿಂದ ಮಾಡುವ ಕರ್ಮಗಳನ್ನು ಲಕ್ಷ್ಮೀರಮಣನ ಪೂಜೆಯೆಂದು ಅರ್ಪಿಸಬೇಕು. (ಸ ೧೩. ಪ ೬). ಜೀವಕರ್ತೃತ್ವವನ್ನು ಮರೆದು ದೇವರೇ ಕರ್ತೃವೆಂದು ಅರಿದು ಕರ್ಮಗಳನ್ನು ಮಾಡಿದರೆ ಅವು ಲೇಪಿಸವು. (ಸ. ೧೩ ಪ. ೭). ಪಾಪಪುಣ್ಯಗಳನ್ನು ನಾನೇ ಮಾಡುತ್ತೀ

ನೆಂದು ತಿಳಿಯುವವನು ಅಧಮನು. ಹೀನಕರ್ಮಕ್ಕೆ ಮಾತ್ರ ನಾನು ಪಾತ್ರ, ಪುಣ್ಯಕ್ಕೆ ಹರಿಪಾತ್ರ ಎಂದು ಭಾವಿಸುವವನು ಮಧ್ಯಮನು. ದ್ವಂದ್ವಕ್ಕೆಶ್ರೀನಿವಾಸನೇ ಕರ್ತೃವೆಂದು ಭಕ್ತಿಯಿಂದ ತಿಳಿಯುವವನು ನರೋತ್ತಮನು. ಈ ಉಪಾಸನೆಮಾಡು ವವರು ದೇವತೆಗಳು. ಅವರು ಮನುಷ್ಯರಲ್ಲ. ಅವರ ಅನುಗ್ರಹವೇ ದೇವರ ಅನು ಗ್ರಹ. ಸೂರ್ಯನ ಪ್ರತಿಬಿಂಬ ಇಂದ್ರಧನುಸ್ಸು, ಅದರಂತೆ ಪರಮಾತ್ಮನಿಗೆ ಜೀವನು ಪ್ರತಿಬಿಂಬನಾಗಿರುವನು. ಇದು ಅನುಪಾಧಿಯಿಂದ ಆದ ಪ್ರತಿಬಿಂಬ. ಈ ಅನು ಪಾಧಿ ಜೀವನಸ್ವರೂಪ ದೇಹ, ಕ್ಷಣಿಕವಾದುದಲ್ಲ (ಸ.೧೪ ಪ. ೨೭). ಲೋಕದಲ್ಲಿ ಜೀವರು ಕ್ಷರ, ಅಕ್ಷರರೆಂದು ಎರಡುವಿಧ. ವಿಲಿಂಗ ಶರೀರವುಳ್ಳವರೂ, ಸಲಿಂಗ ಶರೀರವುಳ್ಳವರೂ ಇರುವರು. ಸಲಿಂಗ ಶರೀರವುಳ್ಳವರಲ್ಲಿ ಸ್ಪೃಶ್ಯರೂ, ಅಸ್ಪೃಶ್ಯರೂ ಎಂದು ಎರಡು ವಿಧ. ಜಡಪ್ರಕೃತಿ ಬೇರೆ. ಹೀಗೆ ಜೀವಜೀವನಿಗೂ, ಜೀವಜಡಕ್ಕೂ, ಜಡಜಡಕ್ಕೂ, ಜಡಕ್ಕೂ ದೇವನಿಗೂ, ದೇವನಿಗೂ ಜೀವನಿಗೂ ಭೇದವೆಂಬ ಪಂಚ ಭೇದವು ಏರ್ಪಡುವುದು. ಸಮುದ್ರದಲ್ಲಿ ಮಕರಮೊದಲಾದ ವಿವಿಧ ಜಂತುಗಳು ಹಗಲಿರುಳೆನ್ನದೆ ಚರಿಸುತ್ತ ಸುಖಪಡುತ್ತಿರುವಂತೆ ಜಗತ್ತ್ರಯವೆಲ್ಲ ಪರಮಾತ್ಮನ ಮಹೋದರದಿ ಪ್ರತಿಬಿಂಬವೆಂದು ಕರೆಸಿ ನಿವಾಸವಾಗಿದೆ. ಕತ್ತಲೆ ಸೂರ್ಯಕಿರಣಗಳು ಏಕತ್ರ ಇರುವುವೆ? ಪರಮಾತ್ಮನು ಎಲ್ಲ ಜೀವರಲ್ಲಿ ಕಮಲ ನೀರಿನಲ್ಲಿರುವಂತೆ ನಿರ್ಲಿಪ್ತನಾಗಿರುವನು ಮೋಕ್ಷಕ್ಕೆ ಭಕ್ತಿಜ್ಞಾನಗಳೇ ಸಾಧನವೆಂದು ಮೇಲೆ ಹೇಳ ದ್ದರೂ ಅವು ಹುಟ್ಟಬೇಕಾದರೆ ಅನೇಕ ಕಲ್ಪ ಸಾಧನ ಮಾಡಬೇಕು. ಅವಕ್ಕೆಲ್ಲ ಅವಧಿ ಉಂಟು. ಆ ಮೇಲೆ ಜೀವನಿಗೆ ಮುಕ್ತಿ (೨೩ ಪ ೩—೭)

ಇಲ್ಲಿ ಯಾವುದು ಸರಿ, ಯಾವುದು ಅಲ್ಲ ಎಂಬುದು ಪ್ರಸ್ತುತವಲ್ಲ ಆದರೆ ಒಂದು ಮಾತನ್ನು ಹೇಳಬೇಕು. ಎರಡು ಮತಗಳೂ ಜೀವನನ್ನು ಕುರಿತು ಹೊರ ಟವೆ. ಮಾಯಾ ಬದ್ಧವಾದ ಜೀವನು. ಮಾಯಾ ನಿರ್ಮುಕ್ತನಾಗಲು ಹವಣಿಸ ಬೇಕೆಂದು ಒಂದೂ, ಜೀವನು ತನ್ನ ಮೂಲ ಸ್ವರೂಪ ಪ್ರಾಪ್ತಿಗಾಗಿ ಹೆಣಗಬೇಕೆಂದು ಮತ್ತೊಂದೂ ನಿರೂಪಿಸುತ್ತವೆ. ಎರಡರಲ್ಲಿಯೂ ಜೀವನು ಸಂಸಾರದಲ್ಲಿ ಬಿದ್ದು ತನ್ನನ್ನು ಮರೆಯುವನೆಂದೂ, ಆತ್ಮೋದ್ಧರಣವೇ ಜೀವನ ಮುಖ್ಯ ಧ್ಯೇಯವೆಂದೂ ಪ್ರತಿಪಾದಿಸಿವೆ. ಇದನ್ನು ಸರ್ವರೂ ಒಪ್ಪಬೇಕಾಗಿದೆ ಇದು ಚೆನ್ನಾಗಿ ಮನಸ್ಸಿಗೆ ನಾಟಲು ಇಬ್ಬರು ಗ್ರಂಥಕಾರರು ಕನ್ನಡದಲ್ಲಿ ಮನೋಜ್ಞಗಳಾದ ಉಪಮೆಗ ಳಿಂದಲೂ ದೃಷ್ಟಾಂತಗಳಿಂದಲೂ ವಿಷಯವನ್ನು ಸ್ವಾರಸ್ಯವಾಗಿ ವರ್ಣಿಸಿದ್ದಾರೆ. ಇಲ್ಲಿ ಕೆಲವನ್ನು ನಿದರ್ಶನೆಗಾಗಿ ಉದ್ಧರಿಸಿ ಇದನ್ನು ಉಪಸಂಹರಿಸಿದೆ.

(೧) ಹುತ್ತ ಬಡಿದರೆ ಹಾವು ಸಾವುದೆ? ವ್ಯರ್ಥವಾದ ಉಪವಾಸದಿಂದ ಮುಕ್ತಿ ದೊರಕುವುದೆ?

(೨) ಎತ್ತಿಗೆ ಲಿಂಗಮುದ್ರೆಯನ್ನು ಹಾಕಿದರೆ ಬಸವನಾಗುವುದು. ಕತ್ತೆಗೆ ಆ

ಮುದ್ರೆಯನ್ನು ಹಾಕಿದರೆ ಬಸವನಾದೀತೆ? ಉತ್ತಮನಿಗೆ ತತ್ತ್ವ ಬೋಧೆ ಒಗ್ಗಿದಂತೆ ನೀಚನಿಗೆ ಒಗ್ಗೀತೆ?

(೩) ಸರ್ಪದ ಬಾಯಲ್ಲಿ ಸಿಕ್ಕಿದ ಕಪ್ಪೆ ನೊಣವನ್ನು ಹಿಡಿಯಲು ಯತ್ನಿಸುವಂತೆ ಮೃತ್ಯುವಿಗೆ ವಶನಾದ ಮನುಷ್ಯನು ಅನ್ಯರ ಸೊತ್ತನ್ನು ಅಪಹರಿಸಲು ಹೆಣಗುವನು.

(೪) ಹಸಿವೆಗಾಗಿ ಸ್ಪರ್ಶವೇದಿಯನ್ನು ಅಡವಿಡುವ ಹಾಗೆ ಜನರು ವಿದ್ಯೆಯನ್ನು ಮಾರುವರು.

(೫) ಮಧ್ಧಲೆಯೊಳಿಡೆಯಾಡುವ ಇಲಿಯಂತೆ ಮಾಯಾಬದ್ಧ ಜೀವನಿರುವನು.

(೬) ಕನ್ನಡಿಯೆ ಮುಂಗೈಯ ಕಂಕಣಕೆ? (ಅ. ೩ ಪ ೧೦೧)

(೭) ಮಳೆನೀರು ಒಂದೇ, ಪಾತ್ರ ಭೇದದಿಂದ ರುಚಿ ಭೇದವಾದಂತೆ (ಅ. ೫ ಪ. ೪೪)

(೮) ರವಿಗೆ ಕತ್ತಲೆ ಮುಸುಕುವುದೆ? (ಅ. ೬ ಪ. ೨೫)

(೯) ಮಣ್ಣ ಬೆನಕಗೆ ಮಜ್ಜನದೊಳೇ ತನ್ನ ಮರಣ (ಅ. ೮ ಪ ೩೦)

(೧೦) ಒಂದು ದೀವಿಗೆ ಬತ್ತಿಯ ಭೇದದಿಂದ ಹಲವಾದಂತೆ (ಅ ೯. ಪ ೪೩)

(೧೧) ಕಾದಿ ಬೂದಿಯ ಹೊಯ್ದುಕೊಂಬರು ವಾದದಲಿ ಶಾಸ್ತ್ರಿಗಳು ಬರಿದೇ ಓದಿ ಮರುಳಹ ಕೂಸಿ ಭಟ್ಟನ ಗಾದೆಯಂದದಲಿ (ಅ. ೧೦ ಪ. ೪೨) ಮುಂತಾದ ಅನುಭವಾಮೃತದ ಮಾತುಗಳೂ

(೧) ಮಳೆಯ ನೀರು ಓಣಿಯಲ್ಲಿ ಹರಿಯುವಾಗ ಜನರು ಬಳಸುವದಿಲ್ಲ ಅದು ಹೆದ್ದೊರೆ ಕೂಡಿದರೆ ಮಜ್ಜನ ಪಾನ ಮಾಡುವರು (ಸ. ೨ ಪ. ೨)

(೨) ಒಡಲ ನೆಳಲಂದದಲಿ ಹರಿ ನಮ್ಮೊಡನೆ ತಿರುಗುವ (ಸ. ೨ ಪ ೨೨)

(೩) ತೃಣಜಲ ಧೇನು ತಾನುಂಡು ಪಾಲ್ಗರೆವ ತೆರನಂತೆ (ಸ. ೫ ಪ ೩೪)

(೪) ನಾಮಸ್ಮರಣೆಯಿಂದ ದುರಿತರಾಶಿಗಳಿರದೆ ಪೋಪುವು ತರಣಿ ಬಿಂಬವ ಕಂಡ ಹಿಮದಂತೆ (ಸ. ೭ ಪ. ೧೬)

(೫) ಮದ್ದಾನೆ ಪಕ್ವ ಕಪಿತ್ಥಫಲ ಭಕ್ಷಿಸಿದವೋಲು (ಸ. ೧೦ ಪ. ೧೩)

(೬) ಸೂರ್ಯನ ಸೊಬಗನ್ನು ಕುರುಡನು ಕಾಣುವನೆ? (ಸ. ೧೨ ಪ ೧೫)

(೭) ಪಾವುಗಳ ಭಯವುಂಟೆ ವಿಹಗಾಧಿಪನ ಮಂದಿರದಿ (ಸ. ೧೩ ಪ ೭)

(೮) ಕೆಂಡ ಕಾಣದೆ ಮುಟ್ಟಿದರು ಸರಿ, ಕಂಡು ಮುಟ್ಟಲು ದಹಿಸದಿಪ್ಪುದೆ? (ಸ. ೧೩ ಪ. ೭)

(೯) ಸೂಜಿ ಕರದಲಿ ಪಿಡಿದು ಸಮರವ ನಾ ಜಯಿಸುವೆನೆಂಬ ನರನಂತೆ (ಸ. ೧೪ ಅ. ೧೬)

(೧೦) ದೀಪ ಕರದಲಿ ಪಿಡಿದು ಕಾಣದೆ ಕೂಪದಲಿ ಬಿದ್ದಂತೆ (ಸ. ೧೫ ಪ ೧೨)

(೧೧) ಮಾಣಿಕವ ಕೊಂಡಂಗಡಿಯೊಳಜಿವಾನ ಕೊಟ್ಟು ಆ ಪುರುಷನ ಸಮಾಧಾನ ಮಾಡಿವ ತೆರದಿ (ಸ. ೧೬–ಪ. ೬)

(೧೨) ತಿಮಿರ ತರಣಿಗಳೇಕ ದೇಶದಿ ಸಮನಿಸಿಪ್ಪುವೆ? (ಸ. ೧೭–ಪ. ೧೨)

(೧೩) ಕೋಲು ಕುದುರೆಯ ಮಾಡಿ ಆಡುವ ಬಾಲಕರ ತೆರನಂತೆ (ಸ. ೧೮ ಪ. ೬)

(೧೪) ಸುಮನಸಧೇನು ಮನೆಯೊಳಗಿರಲು ಗೋಮಯ ಬಯಸುವಂದದಲಿ (೧೯–೨೧)

(೧೫) ಸಾಲವ ಮಾಡಿ ಸಕ್ಕರೆ ಮೆದ್ದ ತೆರನಂತೆ (ಸ. ೨೨. ಪದ್ಯ ೨೭)

ಮೊದಲಾದ ಹರಿಕಥಾಮೃತಸಾರದ ವಾಕ್ಯಗಳೂ ಅನುಭವಯುಕ್ತವಾಗಿವೆ. ಈ ವಿಧವಾದ ಉದಾಹರಣೆಗಳು, ಗಾದೆಗಳು, ಎರಡು ಕೃತಿಗಳಲ್ಲಿಯೂ ಸುಮಾರಾಗಿ ಪ್ರತಿಯೊಂದು ಪದ್ಯದಲ್ಲಿಯೂ ಬಂದಿವೆಯೆಂದರೆ ಅತಿಶಯೋಕ್ತಿಯಾಗದು. ಇಲ್ಲಿ ಆರಿಸಿಕೊಂಡುವು ಒಂದೊಂದು ಸಂಧಿಯಲ್ಲಿಯ ಒಂದೆರಡು ಪದ್ಯಗಳಿಂದ ಮಾತ್ರ. ಕಾವ್ಯಮಯವಾದ ಇಂಥ ಪದ್ಯಗಳನ್ನು ಪ್ರತಿಯೊಬ್ಬ ಕನ್ನಡಿಗನೂ ಓದಿ ಆನಂದ ಪಡೆಯಬೇಕು.

ಮಹಾಶಯರೆ! ಇಲ್ಲಿಗೆ ಮೂರು ದಿವಸದ ಕಾರ್ಯ ಮುಗಿಯಿತು. ನಾನು ಆರಿಸಿಕೊಂಡ ವಿಷಯಗಳಲ್ಲಿ ಒಂದು ವ್ಯಾಕರಣ ಮತ್ತೊಂದು ವೇದಾಂತ—ಎರಡನೆಯದನ್ನು ವೇದಾಂತವನ್ನು ಬೋಧಿಸಬೇಕೆಂಬ ದೃಷ್ಟಿಯಿಂದ ಆರಿಸಿಕೊಂಡುದಲ್ಲ; ಅದು ಕನ್ನಡದಲ್ಲಿ ಹೇಗೆ ಸ್ವಾರಸ್ಯವಾಗಿ ಕಾವ್ಯಮಯವಾಗಿ ಪ್ರತಿಪಾದಿತವಾಗಿದೆಯೆಂಬುದನ್ನು ತೋರಿಸುವುದಕ್ಕಾಗಿ. ಈ ಎರಡು ವಿಷಯಗಳೂ ಶುಷ್ಕವೂ, ನೀರಸವೂ ಆದುವುಗಳೆಂಬ ತಿಳಿವಳಿಕೆಯಿಡೆ ಇವುಗಳಿಗೆ ಸಂಶೋಧನೆಯ ಸಂಪರ್ಕವುಂಟಾಗಿ ಅವುಗಳ ಶುಷ್ಕತೆ, ನೀರಸತೆ ಮತ್ತಷ್ಟು ಉಗ್ರವಾಯಿತೇನೋ ಎಂದು ಸಂದೇಹವುಂಟಾಗಿದೆ. ಆದರೂ ತಾವೆಲ್ಲರೂ ಶಾಂತಚಿತ್ತದಿಂದ ಈ ಮೂರು ದಿನಗಳು ಸಹೃದಯರಾಗಿ ಕೇಳಿದುದಕ್ಕೆ ತಮಗೆ ನಾನು ಅತ್ಯಂತ ಕೃತಜ್ಞತೆಯಿಂದ ವಂದಿಸುತ್ತೇನೆ ಕನ್ನಡ ಸಂಶೋಧನ ಮಂಡಲವು, ಶ್ರೀಮಾನ್ ಪಂಚಮುಖಿಯವರ ನೇತೃತ್ವದಲ್ಲಿ ಕನ್ನಡದ ಪಂಡಿತರಿಗೆ ಇದೇ ವಿಧವಾದ ಅವಕಾಶವನ್ನು ಕಲ್ಪಿಸಿ ಕೊಡುತ್ತ ಕನ್ನಡದ ಸೇವೆಯನ್ನು ಮಾಡುತ್ತಿದೆ ಈ ಕೆಲಸ ಶಾಶ್ವತವಾಗಿ ಉಳಿಯತಕ್ಕುದು ಆದ್ದರಿಂದ ಕನ್ನಡಿಗರು ಈ ಸಂಸ್ಥೆಗೆ ಎಷ್ಟು ಋಣಿಗಳು ಎಂಬುವನ್ನು ಬೇರೆ ಹೇಳಬೇಕಾಗಿಲ್ಲ. ಈ ಸಂಸ್ಥೆಯ ಕೆಲಸ ನಾನಾ ಮುಖವಾಗಿ ಹಬ್ಬಲೆಂದು ಹಾರಯಿಸುತ್ತೇನೆ.

---

# ಶುದ್ಧ ಪತ್ರಿಕೆ

| ಪುಟ | ಪಜ್ಕ್ತಿ | ಅಶುದ್ಧ | ಶುದ್ಧ |
|---|---|---|---|
| ೧೧ | ೧೩ | ಕವರ್ಗ | ಚವರ್ಗ |
| ೧೨ | ೬ | ಹೇಳಬೇಕಾಗಿದೆ | ಹೇಳಬೇಕಾಗಿದೆ. |
| ೩೦ | ಕಿಪೆನೆಯು ಪಜ್ಕ್ತಿ | ಒರೆಯುವ್ತೆರುವ್ರದನ್ನು | ಒರೆಯುತ್ತಿರುವ್ರದನ್ನೂ |
| ೩೧ | ೨೧ | ಭ್ರಮೆುಯಿಂದಲೇ | ಭ್ರಮೆಯಿಂದಲೇ. |
| ೩೧ | ೨೮ | ಪಂದಿಳಿರ್ | ಪಂದಳಿರ್ |
| ೩೨ | ೧ | ಹೀಳಿ | ಹೇಳಿ |
| ೩೩ | ೨೪ | ಅನಸ್ವಾರ | ಅನುಸ್ವಾರ |
| ೩೫ | ೧೦ | ನಾಲ್ವತ್ತೇಳಕ್ಕರಃಗಳ್ | ನಾಲ್ವತ್ತೇಳಕ್ಕರಂಗಳ್ |
| ೪೦ | ೧೬ | ಪ್ರಾಸವುಜುದ | ಪ್ರಾಸವುಟುದ |
| ೪೩ | ೩ | ಮೆುಟಿಸುಂ | ಮೆಟಿಸುಂ |
| ೪೩ | ೧೯ | ನೃಪತುಂಗನ | ನೃಪತುಂಗನು |
| ೪೫ | ೨ | ಕ್ಷಳವಿದೆ | ಕ್ಷಳವಿದೆ. |
| ೪೫ | ೨೫ | ವ್ಯಾಖ್ಯಾನವನ್ನು | ವ್ಯಾಖ್ಯಾನವನ್ನು |
| ೪೭ | ೮ | ಗಾವರ | ಕಾತರ |
| ೪೭ | ೯ | ನುಗುತುಮಿಪ್ಪರ್ | ನಗುತ್ತುಮಿಪ್ಪರ್ |
| ೪೭ | ೯ | ಬಿಡೆ | ಬೀಡೆ |
| ೪೭ | ೨೫ | ಲಕ್ಷಣವನ್ನು ಯುಪುಕತೀಳಿಸುವ್ರ | ಲಕ್ಷಣವನ್ನು ತೀಳಿಸುವು |
| ೪೮ | ೨೩ | ಎಂಬುದೂ | ಎಂಬುದು |
| ೪೮ | ೨೪ | ವೈಗುಣ್ಯಾವೂ | ವೈಗುಣ್ಯಾವು |
| ೫೦ | ೩ | ತಲೆಯುಃಟಿಯುಂ | ತಲೆಯುಂಬಟಿಯುಃ |
| ೫೦ | ೧೪ | ಸೂತ್ರಗಳನು | ಸೂತ್ರಗಳನ್ನು |
| ೫೦ | ೩೦ | ದಟ್ಟಿಟು | ದಟ್ಟಿಟಿ |
| ೫೦ | ೩೨ | ಪಟಿ | ಪಟು |
| ೫೧ | ೧೫ | ಆದ್ದಂದ | ಆದ್ದರಿಂದ |
| ೫೨ | ೧೭ | ಒಕರ್ಗಡಿತೆ | ಒಕ್ಕರ್ಗಡಿತೆ |
| ೫೨ | ೧೯ | ಎಟ್ಕದೇವಟ್ಕಳ್ | ಎಟಕ್ಕೆ, ದೇವಟ್ಕಳ್ |

| | | | |
|---|---|---|---|
| ೫೩ | ೨೩ | ತಿರ್ದ್ದದರ್ | ತಿರ್ದ್ದಿದರ್ |
| ೫೫ | ೬ | ಕಳೆದ | ಕಳೆದು |
| ೫೫ | ೨೫ | ಮತ್ತಿ | ಮತ್ತು |
| ೫೬ | ೨೪ | ಪಾಠಪು | ಪಾಠವು |
| ೫೬ | ೨೫ | ಸುವದು | ಸುವುದು |
| ೫೭ | ೨೯ | ಪಳುಂಕಿದನೆ ಜುಂಕು | ಪಳುಂಕಿದನೆಜುಂಕು |
| ೫೮ | ೧ | ತುಳುಕಿಂದ | ತುಳುಂಕಿದ |
| ೬೦ | ೧೦ | ಸಮಾಪ್ತವಾಮುವುಗಳನ್ನು | ಸಮಾಪ್ತವಾಗುವುದನ್ನು |
| ೬೧ | ೪ | ೨ನೆಯು | ೨ನೆಯ |
| ೬೧ | ೯ | ಇದ್ದು | ಇದು |
| ೬೧ | ೨೦ | ಜೋ। | ಜೊ। |
| ೬೧ | ೨೧ | ಹಂಚಿನೊಳ್ಸ | ಹಂಚಿನೊಳ್ ‖ |
| ೬೧ | ೨೯ | ನೇಮಿಚಂಪ , | ನೇಮಿಚಂದ್ರನ |
| ೬೧ | ೩೦ | ಜ್ಞಾಪಿಸಿಕೊಳ್ಳಬೇಕು‖ | ಜ್ಞಾಪಿಸಿಕೊಳ್ಳಬೇಕು. |
| ೬೩ | ೧೬ | ಮೂಜುನಾಲ್ಕ | ಮೂಜುನಾಲ್ಕೃ |
| ೭೦ | ೧೪ | ಅವರ್ಕುದಾಹಣೆ | ಅದರ್ಕುದಾಹರಣೆ |
| ೭೩ | ೩ | ನಜುಪುದು | ನಜುವುದು |
| ೭೬ | ೧೬ | ಕವಿಗಮುಕಿವಾಗ್ಮಿಗ । | ಕವಿಗಮುಕಿವಾದಿವಾಗ್ಮಿಗ। |
| ೭೮ | ೧೩ | ನೆಜ್ತ್ರಂದಳ್ ‖ | ನೆಜ್ತ್ರಂದಳ್ ‖ |
| ೮೦ | ೬ | ಪೆಬಗಿತ್ವ | ಗೆಜಗಿತ್ವ |
| ೮೬ | ೩೨ | ‘ಪೀಜು’ | ‘ಪಿಜು’ |
| ೮೮ | ೧೪ | ಇನ್ನಿತರ | ಇನ್ನಿತರ |
| ೯೧ | ೨೨ | ಅದೇಗಿ | ಅದೇನೆ |
| ೯೪ | ೩೨ | ದಾಸರೂ | ದಾಸರು |
| ೧೧೧ | ೨೭ | ಮಾಡಿಸುನು | ಮಾಡಿಸುವನು |

——೦——